# ಕನ್ನಡ ಶಾಸನಗಳಲ್ಲಿ ಪುರಾಣ ಪರಿಕಲ್ಪನೆ

## (ಬಳ್ಳಾರಿ ಪರಿಸರವನ್ನು ಅನುಲಕ್ಷಿಸಿ)

(ಪಿಎಚ್.ಡಿ. ಪದವಿಗಾಗಿ ಕನ್ನಡವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕರು

ನಾಯಕರ ಹುಲುಗಪ್ಪ

ಮಾರ್ಗದರ್ಶಕರು

ಡಾ. ಕಲವೀರ ಮನ್ವಾಚಾರ

ಸಹ ಪ್ರಾಧ್ಯಾಪಕ



ಶಾಸನಶಾಸ್ತ್ರ ವಿಭಾಗ

ಸಮಾಜವಿಜ್ಞಾನ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩೨೭೬

೨೦೦೦

# ಕನ್ನಡ ಶಾಸನಗಳಲ್ಲಿ ಪುರಾಣ ಪರಿಕಲ್ಪನೆ

## (ಬಳ್ಳಾರಿ ಪರಿಸರವನ್ನು ಅನುಲಕ್ಷಿಸಿ)

(ಪಿ.ಎಚ್.ಡಿ. ಪದವಿಗಾಗಿ ಕನ್ನಡವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕರು

ನಾಯಕರ ಹುಲುಗಪ್ಪ



ಮಾರ್ಗದರ್ಶಕರು

ಡಾ.ಕಲವೀರ ಮನ್ವಾಚಾರ

ಸಹ ಪ್ರಾಧ್ಯಾಪಕ



ಶಾಸನಶಾಸ್ತ್ರ ವಿಭಾಗ

ಸಮಾಜವಿಜ್ಞಾನ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩೨೭೬

೨೦೧೦

## ಮಾರ್ಗದರ್ಶಕರ ಪ್ರಮಾಣ ಪತ್ರ

ಶ್ರೀ ನಾಯಕರ ಹುಲುಗಪ್ಪ ಇವರು ಕನ್ನಡ ಶಾಸನಗಳಲ್ಲಿ ಪುರಾಣ ಪರಿಕಲ್ಪನೆ(ಬಳ್ಳಾರಿ ಪರಿಸರವನ್ನು ಅನುಲಕ್ಷಿಸಿ) ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಶಾಸನಶಾಸ್ತ್ರ ವಿಭಾಗಕ್ಕೆ ಸಲ್ಲಿಸುತ್ತಿದ್ದಾರೆ. ಪ್ರಸ್ತುತ ಮಹಾಪ್ರಬಂಧವು ಅವರ ಸ್ವಂತ ಪರಿಶ್ರಮದ ಫಲವಾಗಿದ್ದು, ಈ ಮೊದಲು ಇದನ್ನು ಇನ್ನಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಡಾ. ಕಲವೀರ ಮನ್ವಾಚಾರ
ಮಾರ್ಗದರ್ಶಕರು
ಶಾಸನಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ
ದಿನಾಂಕ: ೦೫.೦೯.೨೦೧೦

## ಸಂಶೋಧಕರ ಪ್ರಮಾಣ ಪತ್ರ

ಕನ್ನಡ ಶಾಸನಗಳಲ್ಲಿ ಪುರಾಣ ಪರಿಕಲ್ಪನೆ(ಬಳ್ಳಾರಿ ಪರಿಸರವನ್ನು ಅನುಲಕ್ಷಿಸಿ) ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಪಿಎಚ್.ಡಿ. ಪದವಿಗಾಗಿ ಡಾ. ಕಲವೀರ ಮನ್ವಾಚಾರ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಶಾಸನಶಾಸ್ತ್ರ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧವು ನನ್ನ ಸ್ವಂತ ಪರಿಶ್ರಮದ ಫಲವಾಗಿದ್ದು, ಈ ಮೊದಲು ಇದನ್ನು ಇನ್ನಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ನಾಯಕರ ಹುಲುಗಪ್ಪ
ಸಂಶೋಧಕ
ಶಾಸನಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ

ದಿನಾಂಕ: ೦೫.೦೯.೨೦೧೦

# ಪರಿವಿಡಿ

ಅಧ್ಯಾಯ – ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ ಮತ್ತು ಸಮೀಕ್ಷೆ.

೧.೧ ಅಧ್ಯಯನದ ಉದ್ದೇಶ

೧.೨ ಅಧ್ಯಯನದ ವ್ಯಾಪ್ತಿ

೧.೩ ಅಧ್ಯಯನದ ವಿಧಾನ

೧.೪ ಇದುವರೆಗಿನ ಅಧ್ಯಯನಗಳ ಸಮೀಕ್ಷೆ

## ಅಧ್ಯಾಯ – ಒಂದು

## ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ ಮತ್ತು ಸಮೀಕ್ಷೆ.

### ಪ್ರಸ್ತಾವನೆ

ಇತಿಹಾಸಕ್ಕೆ ಆಧಾರಗಳೇ ಜೀವಾಳ. ಅವುಗಳಿಲ್ಲದೆ ಇತಿಹಾಸವನ್ನು ಪುನರ್ ರಚಿಸುವುದಿರಲಿ, ಇದಕ್ಕೂ ಹಿಂದೆ ಹೀಗಿತ್ತು ಎಂಬುದನ್ನು ಊಹಿಸಲೂ ಅಸಾಧ್ಯ. ಭಾರತದ ಚರಿತ್ರೆಯನ್ನು ಅವಲೋಕಿಸಲು ನಮಗೆ ಹಲವಾರು ಆಕರಗಳು ದೊರೆಯುತ್ತವೆ. ಅವುಗಳನ್ನು ಸ್ಥೂಲವಾಗಿ ೧. ಮೌಖಿಕ ಆಕರಗಳು ೨. ಲಿಖಿತ ಆಕರಗಳು ಎಂದು ವಿಂಗಡಿಸಬಹುದು. ಒಂದೊಮ್ಮೆ ಮೌಖಿಕ ಆಕರಗಳಾಗಿದ್ದಂತಹ ಪುರಾಣ, ಐತಿಹ್ಯ, ಸ್ಥಳನಾಮ, ಸ್ಥಳಪುರಾಣಗಳಂತಹ ಐತಿಹಾಸಿಕ ವಿಷಯಗಳು ಬರವಣಿಗೆಯ ರೂಪವನ್ನು ಪಡೆದ ನಂತರ ಲಿಖಿತ ಆಕರಗಳಾದವು. ಹೀಗೆ ಲಿಖಿತ ರೂಪ ಪಡೆದುಕೊಂಡರೂ ಇಂದಿಗೂ ಅವುಗಳನ್ನು ಮೌಖಿಕ ಪರಂಪರೆಯಲ್ಲಿ ಗುರುತಿಸುತ್ತಿರುವುದು ಗಮನಾರ್ಹ ಅಂಶ. ಇವುಗಳಷ್ಟೇ ಅಲ್ಲದೆ ಮೂಲತಃ ಲಿಖಿತ ರೂಪದಲ್ಲಿಯೇ ದೊರೆಯುವ ಶಾಸನಗಳು, ನಾಣ್ಯಗಳು, ಗ್ರಂಥಗಳು ಅದರಲ್ಲೂ ದೇಶೀಯ ಮತ್ತು ವಿದೇಶಿಯ ವಿದ್ವಾಂಸರ ಬರವಣಿಗೆಗಳು ಇತಿಹಾಸವನ್ನು ತಿಳಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತವೆ. ಇವುಗಳಲ್ಲಿ ಶಾಸನಗಳು ಚಾರಿತ್ರಿಕ ಯುಗಕ್ಕೆ ಸಂಬಂಧಿಸಿದಂತೆ ಚರಿತ್ರೆಯ ರಚನೆಗೆ ಪ್ರಧಾನವಾದ ಆಕರಗಳಾಗಿವೆಯಲ್ಲದೆ ಸಂಸ್ಕೃತಿಯ ಅರಿವಿನ ದೃಷ್ಟಿಯಿಂದ ಮಹತ್ವವಾದುದಾಗಿವೆ.

ಶಾಸನಗಳ ಅಭ್ಯಾಸದ ವ್ಯಾಪ್ತಿಯು ವಿಶಾಲವಾದದು. ಅಷ್ಟೇ ಆಳವಾದದು ಹೌದು. ಹೆಚ್ಚು ಹೆಚ್ಚು ಒಳಹೊಕ್ಕು ನೋಡಿದಂತೆ ನಮ್ಮ ಸಂಸ್ಕೃತಿಯ ವಿವಿಧ ಮುಖಗಳ ಅಭ್ಯಾಸವನ್ನು ಶ್ರೀಮಂತಗೊಳಿಸುವ ಅಣಿ ಮುತ್ತುಗಳಂತೆ ಹೊಸವಿಷಯಗಳು ಹೊರಬರುತ್ತಲೇ ಇವೆ. ಬರೀ ಇತಿಹಾಸವಷ್ಟೇ ಅಲ್ಲದೆ ಪುರಾಣ, ಐತಿಹ್ಯ, ಭಾಷೆ, ಸಾಹಿತ್ಯ, ಧರ್ಮ, ಅರ್ಥವ್ಯವಸ್ಥೆ ಹಾಗೂ

ವಾಸ್ತುಶಿಲ್ಪ ಕಲೆಗಳಂತಹ ವಿವಿಧ ಜ್ಞಾನಶಾಖೆಗಳ ಅರಿವಿಗೆ ಪೂರಕವಾಗುವಂಥಹ ವಿಫುಲವಾದ ಮಾಹಿತಿ ಇವುಗಳಿಂದ ದೊರೆಯುತ್ತದೆ. ಹಾಗೆ ನೋಡಿದರೆ ಈ ಶಾಸನಗಳು ದೊರೆಯದಿದ್ದರೆ ನಮ್ಮ ಈ ಜ್ಞಾನ ಶಾಖೆಗಳ ಅಭ್ಯಾಸವು ಅಪೂರ್ಣವಾಗಿಯೇ ಉಳಿಯುತ್ತಿತ್ತು. ಅಂದರೆ ಇವುಗಳ ಅಭ್ಯಾಸದ ಹೊರತಾದ ಇತಿಹಾಸವು ಪರಿಪೂರ್ಣವಲ್ಲವೆಂದೇ ಹೇಳಬಹುದು. ಆದ್ದರಿಂದಲೇ ವಿದ್ವಾಂಸರು ಶಾಸನಗಳನ್ನು ನಮ್ಮ ಜ್ಞಾನ ಭಂಡಾರದ 'ಮುಚ್ಚಿದ ಬಾಗಿಲು' ಎಂದು ಕರೆದಿರುವುದು. ವಿವಿಧ ಜ್ಞಾನಶಿಸ್ತುಗಳಿಂದ ಈ ಬಾಗಿಲಿನ ಮುದ್ರೆಯನ್ನು ಹೊಡೆದಾಗ ನಮ್ಮ ಸಂಸ್ಕೃತಿಯ ಭವ್ಯದರ್ಶನವಾಗುತ್ತದೆ.

ಪ್ರಸ್ತುತ ಮಹಾಪ್ರಬಂಧಕ್ಕೆ ಸಂಬಂಧಿಸಿದಂತೆ ಶಾಸನಗಳಲ್ಲಿನ ಪುರಾಣ ಮತ್ತು ಐತಿಹ್ಯಗಳನ್ನು ಕುರಿತು ಹೇಳುವುದಾದರೆ, ಭಾರತದ ಅತ್ಯಂತ ಪ್ರಾಚೀನ ರಚನೆಯೆಂದು ಪರಿಗಣಿಸಿರುವ ವೇದಗಳಲ್ಲಿಯೂ ಪುರಾಣದ ಉಲ್ಲೇಖಗಳಿವೆ. ಇತಿಹಾಸ ಮತ್ತು ಪುರಾಣಗಳನ್ನು ಪಂಚಮವೇದ ಎಂದೇ ಸ್ವೀಕರಿಸಲಾಗಿತ್ತು. ವೇದಗಳನ್ನು ಅಪೌರಷೇಯ ಎಂದು ಪರಿಗಣಿಸಿದ ಜನರು ಪುರಾಣ ಮತ್ತು ಇತಿಹಾಸಗಳನ್ನು ಅಪೌರುಷೇಯ ಎಂದೇ ಒಪ್ಪಿಕೊಂಡಿದ್ದರು. ವೇದಗಳಲ್ಲಿ ಪುರಾಣ ಮತ್ತು ಇತಿಹಾಸ ಎರಡೂ ಅಡಕವಾಗಿವೆ ಎಂಬುದು ಒಪ್ಪಿತವಾದ ಮಾತಾಗಿತ್ತು. ವೇದಗಳಲ್ಲಿ ಬರುವ ದೇವಾಸುರರ ಯುದ್ಧ-ದಾಶರಾಜ್ಞಾಯುದ್ದ ಇತ್ಯಾದಿಗಳು ಇತಿಹಾಸವಾದರೆ, ಪ್ರಪಂಚದ ಪೂರ್ವಾವಸ್ಥೆ ಪ್ರಮುಖ ವ್ಯಕ್ತಿಗಳ ವಂಶಾವಳಿ ಇತ್ಯಾದಿಗಳೆಲ್ಲವೂ ಪುರಾಣ ಭಾಗಗಳಾಗುತ್ತವೆ. ದೇವತೆಗಳ ಅವತಾರದ ಜೊತೆಗೆ ಸಾಮಾನ್ಯನೀತಿ, ದಾನ, ಭಕ್ತಿ, ಯೋಗ, ವೈದ್ಯ, ಸಂಗೀತ, ವ್ಯಾಕರಣ, ಛಂದಸ್ಸು, ನಾಟಕ, ಜೋತಿಷ್ಯ, ಶಿಲ್ಪ, ರಾಜನೀತಿ ಇತ್ಯಾದಿ ವಿಷಯಗಳು ಪುರಾಣಗಳಲ್ಲಿ ಉಲ್ಲೇಖವಾಗಿರುತ್ತವೆ.

ದೇವತೆಗಳು ಮತ್ತು ಅವರ ಲೀಲೆಗಳು ಅವತಾರಗಳೇ ಪ್ರಮುಖವಾಗಿ ನಿರೂಪಿತವಾಗಿರುವ ಪುರಾಣಗಳಲ್ಲಿ ಮನುಷ್ಯನ ತಿಳುವಳಿಕೆಯನ್ನು ಹೆಚ್ಚಿಸುವ ಅಂಶಗಳು ಅಲ್ಲಲ್ಲಿ ಪ್ರಸ್ತಾಪಿತವಾಗಿವೆ. ಸ್ಕಂದಪುರಾಣವು ಸ್ಥಳ ಇತಿಹಾಸದ ದೃಷ್ಟಿಯಿಂದ ಸ್ವಲ್ಪಮಟ್ಟಿಗೆ ಗಮನ ಸೆಳೆಯುತ್ತದೆ. ಭಾರತದಲ್ಲಿ ಪ್ರಮುಖ ತೀರ್ಥಕ್ಷೇತ್ರಗಳು ಎಂದು ಪರಿಚಯವನ್ನು ಮಾಡಿಕೊಡುವ ಈ ಪುರಾಣದ ಮೂಲಕ ಆಯಾ ಕ್ಷೇತ್ರಗಳ ಪ್ರಾಚೀನತೆಯನ್ನು ಮತ್ತು ಭೌಗೋಳಿಕ ವಿವರಣೆಗಳನ್ನು ತಿಳಿಯಬಹುದು.

ಲಭ್ಯವಿರುವ ಯಾವುದೇ ಪುರಾಣವು ಕ್ರಿ.ಶ.೩ನೆಯ ಶತಮಾನಕ್ಕೆ ಮೊದಲು ರಚಿತವಾದಂತೆ ತೋರುವುದಿಲ್ಲ. ಕ್ರಿ.ಶ.೩ನೆಯ ಶತಮಾನಕ್ಕಾಗಲೇ ಉತ್ತರದಲ್ಲಿ ಗುಪ್ತರು ಮತ್ತು ದಕ್ಷಿಣದಲ್ಲಿ ಶಾತವಾಹನರು ಪ್ರಬಲರಾಗಿ ಆಳುತ್ತಿದ್ದರು. ಕ್ರಿ.ಶ.೧೨ನೆಯ ಶತಮಾನಕ್ಕೆ ಉತ್ತರದಲ್ಲಿ ಗಾಹಡವಾಲರು, ಚಾಂದೇಲರು, ಗೂರ್ಜರು, ಪ್ರತಿಹಾರರು ಮೊದಲಾದ ರಾಜಮನೆತನಗಳು

ಆಳ್ವಿಕೆ ನಡೆಸುತ್ತಿದ್ದವಾದರೂ ಉತ್ತರ ಭಾರತವು ಒಂದೇ ಆಡಳಿತ ಘಟಕವಾಗಿರಲಿಲ್ಲ. ಅಂತೆಯೇ ಅದೇ ಕಾಲಕ್ಕೆ ದಕ್ಷಿಣ ಭಾರತದಲ್ಲಿ ಆಳ್ವಿಕೆ ನಡೆಸುತ್ತಿದ್ದ ಹೊಯ್ಸಳರು, ಸೇವುಣರು, ಕಾಕತೀಯರ ಬೆಳವಣಿಗೆಗಳ ನಡುವೆ ದೇವತೆಗಳನ್ನೇ ಪ್ರಧಾನವಾಗಿರಿಸಿಕೊಂಡು ರಚಿತವಾದ ಪುರಾಣಗಳನ್ನು ಐತಿಹಾಸಿಕ ದಾಖಲೆಗಳಾಗಿ ಎಷ್ಟರ ಮಟ್ಟಿಗೆ ಸ್ವೀಕರಿಸಬೇಕು ಎಂಬುದು ಇತಿಹಾಸಕಾರನ ಜ್ಞಾನಕ್ಕೆ ಬಿಟ್ಟ ಪ್ರಶ್ನೆಯಾಗಿದೆ. ೧೩ನೆಯ ಶತಮಾನಕ್ಕೆ ಮುಸಲ್ಮಾನರು ಉತ್ತರ ಭಾರತದಲ್ಲಿ ಪ್ರಬಲರಾಗಿದ್ದು ದಕ್ಷಿಣಕ್ಕೂ ತಮ್ಮ ದಾಳಿಗಳನ್ನು ವಿಸ್ತರಿಸಿದರು ಎಂಬುದನ್ನು ಮರೆಯುವಂತಿಲ್ಲ. ಹೀಗೆ ಬಹುತೇಕ ದಾಳಿಕಾರರಿಂದ ತಮ್ಮ ದೇವಾಲಯಗಳನ್ನು ಆಸ್ತಿಪಾಸ್ತಿಗಳನ್ನು, ಊರು, ಹೆಣ್ಣುಮಕ್ಕಳನ್ನು ರಕ್ಷಿಸಿಕೊಳ್ಳುವ ಸಲುವಾಗಿ ಮತ್ತು ರಾಜ ಮತ್ತು ಧರ್ಮದ ಸಂಘರ್ಷಗಳನ್ನೂ ತೊಲಗಿಸಲು, ಹಾಗೆಯೇ ಬೇರೆ ಬೇರೆ ಕಾರಣಗಳಿಂದ ಜನರಲ್ಲಿ ಅಭಿಮಾನ ಹುಟ್ಟಿಸುವ ಕಾರಣದಿಂದ 'ಪುರಾಣ'(ವ್ಯಕ್ತಿ, ವಂಶ, ಸ್ಥಳಪುರಾಣ, ಸ್ಥಳನಾಮ, ಮಹಾಸತಿ, ವೀರಗಲ್ಲು) ಮುಂತಾದವುಗಳು ರಚನೆಗೊಂಡಿರಬೇಕು.

ಶಾಸನಗಳಲ್ಲಿ ರಾಜರ ವಂಶಗಳನ್ನು ಪುರಾಣಗಳೊಂದಿಗೆ ಸೇರಿಸುವ ಪ್ರಯತ್ನಗಳು ಹನ್ನೊಂದು ಮತ್ತು ಹನ್ನೆರಡನೆಯ ಶತಮಾನ ಹಾಗೂ ಆನಂತರವೇ ಹೆಚ್ಚಾಗಿ ಆಗಿರುವುದನ್ನು ಕೇವಲ ಆಕಸ್ಮಿಕ ಎಂದು ತಳ್ಳಿಹಾಕುವಂತಿಲ್ಲ. ಅದಕ್ಕೂ ಏನಾದರೂ ಒಂದು ನಿರ್ದಿಷ್ಟ ಕಾರಣವಿರಲೇಬೇಕು. ಮೊದಲಿಗೆ ಸಂಕ್ಷಿಪ್ತವಾಗಿ ಘಟನೆಯೊಂದರ ವಿಷಯದ ನಿರೂಪಣೆಗೆ ಮಾತ್ರ ಸೀಮಿತವಾಗಿದ್ದ ಶಾಸನಗಳು ಕ್ರಮೇಣ ವಂಶಾವಳಿ, ಬಿರುದಾವಳಿ, ಪ್ರಶಸ್ತಿ ಮೊದಲಾದವುಗಳ ಸೇರ್ಪಡೆಯಿಂದ ವಿಸ್ತಾರಗೊಂಡವು. ಕೆಲವು ಶಾಸನಗಳಂತೂ ಕಿರುಕಾವ್ಯಗಳಂತೆಯೇ ಪ್ರಸಿದ್ಧವಾಗಿವೆ. (ಉದಾ: ಲಕ್ಷ್ಮೀಧರಾತ್ಮನ ಶಾಸನ) ದೊರೆತಿರುವ ಶಾಸನಗಳ ನೆರವಿನಿಂದ ಇತಿಹಾಸವನ್ನು ತಿಳಿಯಲು ಸಾಧ್ಯವಾಗಿದೆ. ಶಾಸನಗಳ ರಚನೆಯ ಜೊತೆ ಜೊತೆಗೆ ಪುರಾಣದ ರಚನೆಯೂ ಆಗಿರುವುದನ್ನು ಅಲಕ್ಷಿಸುವಂತಿಲ್ಲ. ಒಂದೆಡೆ ಸಾರ್ವಜನಿಕರಿಗೆಲ್ಲಾ ತಿಳಿಯುವಂತೆ ಬಹಿರಂಗವಾಗಿ ಶಾಸನಗಳು ಪ್ರಕಟಣೆ ಆಗುತ್ತಿದ್ದರೆ, ಮತ್ತೊಂದಡೆ ಅಂತರಿಕವಾಗಿ ವಿಶೇಷವಾಗಿ ಓದು-ಬರಹ ಬಲ್ಲ ಬುದ್ಧಿಜೀವಿಗಳ ಅರಿವಿಗಾಗಿ ಪುರಾಣಗಳು ರಚನೆಯಾಗುತ್ತಿದ್ದವು. ನಂತರದ ದಿನಗಳಲ್ಲಿ ರಾಜರುಗಳನ್ನು ದೈವತ್ವಕ್ಕೆರಿಸುವ ನೆಪದಿಂದಲೋ ಅಥವಾ ದೇವರಿಗೆ ಸಲ್ಲುವ ಮಾನ-ಸನ್ಮಾನಗಳು ತಮಗೂ ದೊರೆಯಲಿ ಎಂಬ ಕಾರಣದಿಂದಲೋ ಶಾಸನಗಳನ್ನು ಪುರಾಣಗಳ ಹಿನ್ನಲೆಯಲ್ಲಿ ಹಾಕಿಸತೊಡಗಿದರು. ಕಾರಣವೇನೆ ಇರಲಿ ಪುರಾಣಗಳು ಇತಿಹಾಸವನ್ನು ಗ್ರಹಿಸುವಲ್ಲಿ ಇಂದು ಮಹತ್ವದ ಪಾತ್ರವನ್ನು ವಹಿಸುತ್ತಿದ್ದು ಇತಿಹಾಸ ರಚನೆಯಲ್ಲಿ ಪ್ರಮುಖ ಆಕರಗಳಾಗಿ ಕಾರ್ಯನಿರ್ವಹಿಸುತ್ತವೆ.

ಹಾಗೆಯೇ ಇದಕ್ಕೆ ಪೂರಕವಾಗಿ ಐತಿಹ್ಯಗಳನ್ನು ನೋಡುವುದಾದರೆ ಐತಿಹ್ಯಗಳು ಕೂಡ ಚಾರಿತ್ರಿಕ ಸಂಗತಿಯೊಂದು ಕ್ರಮೇಣ ಅಪೂರ್ವವೂ, ಅದ್ಭುತವೂ, ಆದ ಸನ್ನಿವೇಶಗಳನ್ನು ಒಳಗೊಳ್ಳುತ್ತಾ ತಲೆಮಾರುಗಳ ಮೂಲಕ ಹರಿದು ಬಂದವುಗಳಾಗಿವೆ. ಇಂತಹ ಐತಿಹ್ಯಗಳಲ್ಲಿ ಗತದಲ್ಲಿ ನಡೆದ ಐತಿಹಾಸಿಕ ಅಂಶಗಳ ಸೂಕ್ಷ್ಮ ಎಳೆಗಳು ಮಿಳಿತಗೊಂಡಿವೆ. ಇಂತಹ ಅಂಶಗಳು ಇತಿಹಾಸವನ್ನು ನೋಡುವಲ್ಲಿ ಹಾಗೂ ಕಟ್ಟುವಲ್ಲಿ ಹೇಗೆ ಪೂರಕವಾಗಿ ಸಹಾಯವಾಗಿವೆ ಎಂಬುದನ್ನು ಪ್ರಸ್ತುತ ಮಹಾಪ್ರಬಂಧದಲ್ಲಿ ಚರ್ಚಿಸಲಾಗಿದೆ.

## ಅಧ್ಯಯನದ ಉದ್ದೇಶ

ಇಲ್ಲಿಯವರೆಗಿನ ಅಧ್ಯಯನಗಳಲ್ಲಿ ಶಾಸನಗಳನ್ನು ಅವುಗಳಲ್ಲಿನ ರಾಜಕೀಯ ಚರಿತ್ರೆಯ ಮಹತ್ವವನ್ನು ಮಾತ್ರ ಗುರುತಿಸಲು ಬಳಸಿಕೊಂಡಿದ್ದರಿಂದ, ಇತಿಹಾಸವೆಂದರೆ ಕೇವಲ ರಾಜ ಮಹಾರಾಜರ ವಿವರಣೆ ಮಾತ್ರ ಎಂಬಂತಹ ಅಭಿಪ್ರಾಯಕ್ಕೆ ಸೀಮಿತಗೊಂಡಿತ್ತು. ಆದರೆ ಕಳೆದ ದಶಕದಿಂದ ಇತಿಹಾಸವನ್ನು ನೋಡುವ ದೃಷ್ಟಿಯಲ್ಲಿ ಗಮನಾರ್ಹವಾದ ಬದಲಾವಣೆಗಳಾಗಿವೆ. ಇತಿಹಾಸ ರಚನೆಯ ಆಕರಗಳನ್ನು ಹೊಸ ರೀತಿಯಿಂದ ನಿರ್ವಚಿಸುವ ಪರಿಪಾಠ ಮೊದಲುಗೊಂಡಿದೆ. ಕೇವಲ ರಾಜ ಮಹಾರಾಜರ ಜೀವನ ಚರಿತ್ರೆಯನ್ನಷ್ಟೇ ಅಲ್ಲದೆ ಸಾಮಾನ್ಯ ಜನರ ದಿನನಿತ್ಯದ ಬದುಕನ್ನು ಅವರ ರೀತಿ, ನೀತಿ, ಸಂಪ್ರದಾಯಗಳನ್ನು ಹಾಗೂ ಬದುಕಿನ ಏಳು–ಬೀಳುಗಳನ್ನು ಬಹುಶಿಸ್ತೀಯ ನೆಲೆಗಳಿಂದ ಅಧ್ಯಯನ ಮಾಡಲಾಗುತ್ತದೆ. ಪ್ರಸ್ತುತ ಅಧ್ಯಯನವನ್ನು ಈ ನಿಟ್ಟಿನಲ್ಲಿ ಕೈಗೊಂಡಿದ್ದು ಇತಿಹಾಸ ನಿರ್ಮಾಣಕ್ಕೆ ಪ್ರಮುಖ ಆಕರಗಳೆಂದು ಪರಿಗಣಿಸಲಾಗಿರುವ ಶಾಸನಗಳಲ್ಲಿ ಪುರಾಣ ಹಾಗು ಐತಿಹ್ಯ ಅಂಶಗಳಿವೆ. ಅವುಗಳನ್ನು ಇಂದು ಮೌಖಿಕ ಪರಂಪರೆಯಲ್ಲಿ ಗುರುತಿಸುವುದರಿಂದ ಅವುಗಳಿಗೆ ಹೆಚ್ಚಿನ ಮಹತ್ವ ನೀಡದಿರುವುದು ತಿಳಿದುಬರುತ್ತದೆ. ಇವುಗಳನ್ನು ಓರೆಹಚ್ಚುವುದರ ಮೂಲಕ ಇತಿಹಾಸದ ಇನ್ನೊಂದು ಮಗ್ಗಲು ನೋಡಲು ಪ್ರಯತ್ನಿಸಬಹುದು. ಇವುಗಳ ಮೂಲಕ ಅಲಕ್ಷಿತ ವರ್ಗ, ವಸ್ತು ವಿಷಯಗಳನ್ನು ಕುರಿತು ಚರ್ಚಿಸುವ ಉದ್ದೇಶವನ್ನು ಈ ಮಹಾಪ್ರಬಂಧ ಹೊಂದಿದೆ.

## ಅಧ್ಯಯನದ ವ್ಯಾಪ್ತಿ

ಪ್ರಸ್ತುತ ಮಹಾಪ್ರಬಂಧವಾದ **"ಕನ್ನಡ ಶಾಸನಗಳಲ್ಲಿ ಪುರಾಣ ಪರಿಕಲ್ಪನೆ"**(ಬಳ್ಳಾರಿ ಪರಿಸರವನ್ನು ಅನುಲಕ್ಷಿಸಿ) ಎಂಬ ವಿಷಯವು ಇತಿಹಾಸದ ದೃಷ್ಟಿಯಿಂದ ತುಂಬ ವಿಸ್ತೃತವಾದ ವಿಷಯವಾಗಿದ್ದು, ಈಗಾಗಲೇ ಹಲವು ಗ್ರಂಥಗಳಲ್ಲಿ ಪೌರಾಣಿಕ ಅಂಶಗಳು ಪುರಾಣದ ನೆಲೆಯಿಂದಲೂ ಮತ್ತು ಐತಿಹ್ಯಗಳು ಜಾನಪದೀಯ ನೆಲೆಯಿಂದಲೂ ಚರ್ಚಿತವಾಗಿವೆ. ಆದರೆ ಇತಿಹಾಸದ ದೃಷ್ಟಿಯಿಂದ ನೋಡುತ್ತಿರುವಲ್ಲಿ ಮಹಾಪ್ರಬಂದವು ಭಿನ್ನವಾಗಿದೆಯಲ್ಲದೆ ವಿಶಿಷ್ಟವೂ

ಮಹತ್ವಪೂರ್ಣವೂ ಆದುದಾಗಿದೆ. ಪ್ರಮುಖವಾಗಿ ಶಾಸನಗಳಲ್ಲಿನ ಪುರಾಣ ಮತ್ತು ಐತಿಹ್ಯಗಳಿಂದ ಇತಿಹಾಸವನ್ನು ನಿರ್ವಚಿಸುವ ಉದ್ದೇಶವನ್ನು ಹೊಂದಿರುವ ಈ ಮಹಾಪ್ರಬಂಧದ ವ್ಯಾಪ್ತಿಯನ್ನು ಭೌಗೋಳಿಕವಾಗಿ ಮತ್ತು ಚಾರಿತ್ರಿಕವಾಗಿ ಮಹತ್ವಪೂರ್ಣವಾಗಿರುವ ಬಳ್ಳಾರಿ ಪರಿಸರದ ಶಾಸನಗಳಿಗೆ ಮಾತ್ರ ಸಿಮೀತಗೊಳಿಸಿಕೊಳ್ಳಲಾಗಿದೆ.

ಇಂದಿನ ಕರ್ನಾಟಕ ರಾಜ್ಯದ ಪ್ರಮುಖ ಜಿಲ್ಲೆಗಳಲ್ಲಿ ಒಂದಾಗಿರುವ ಬಳ್ಳಾರಿಯು ಪ್ರಾಕೃತಿಕ ಸಂಪನ್ಮೂಲಗಳಾದ ಖನಿಜನಿಕ್ಷೇಪ ಗಣಿಗಾರಿಕೆಯಿಂದ ಪ್ರಸಿದ್ಧಿ ಪಡೆದಿದೆ. ರಾಜ್ಯದ ಮಧ್ಯಭಾಗದಿಂದ ಪೂರ್ವಕ್ಕಿರುವ ಈ ಜಿಲ್ಲೆಯು ದಕ್ಷಿಣಕ್ಕೆ ಚಿತ್ರದುರ್ಗ, ಉತ್ತರಕ್ಕೆ ಕೊಪ್ಪಳ ಮತ್ತು ರಾಯಚೂರು, ಪಶ್ಚಿಮಕ್ಕೆ ಧಾರವಾಡ ಮತ್ತು ಪೂರ್ವಕ್ಕೆ ಆಂಧ್ರಪ್ರದೇಶದ ಕರ್ನೂಲು, ಅನಂತಪುರ ಜಿಲ್ಲೆಗಳನ್ನು ಮೇರೆಗಳಾಗಿ ಹೊಂದಿದೆ. ಪ್ರಸ್ತುತ ಜಿಲ್ಲೆಯ ವಿಸ್ತೀರ್ಣ ಪೂರ್ವಪಶ್ಚಿಮವಾಗಿ ೧೬೧ ಕಿ.ಮೀ. ಉದ್ಧವಾಗಿ, ಉತ್ತರ ದಕ್ಷಿಣವಾಗಿ ೮೩.೭ ಕಿ.ಮೀ. ಹೊಂದಿದೆ. ಜಿಲ್ಲೆಯ ಉತ್ತರ ಅಕ್ಷಾಂಶ ೩೦' ೧೪'–೧೫' ೫೦' ಮತ್ತು ರೇಖಾಂಶ ೭೫' ೪೦'–೭೭' ೧೧' ರ ನಡುವೆ ಇದ್ದು ಒಟ್ಟು ಜಿಲ್ಲೆಯ ವಿಸ್ತೀರ್ಣ ೯೮೯೮ ಚದುರ ಕಿ.ಮೀ.ಗಳು.

ಜಿಲ್ಲೆಯಲ್ಲಿ ತುಂಗಭದ್ರಾ ನದಿಯು ಮುಖ್ಯವಾಗಿದ್ದು, ಚಿನ್ನಹಗರಿ, ನಾರಿಹಳ್ಳ, ಚಿಕ್ಕಹಗರಿಗಳು ಇದರ ಉಪನದಿಗಳಾಗಿವೆ. ಅಲ್ಲದೆ ಈ ಪರಿಸರದಲ್ಲಿ ಹೆಚ್ಚು ಬೆಟ್ಟ–ಗುಡ್ಡಗಳ ಸಾಲುಗಳಿದ್ದು ಅವುಗಳಲ್ಲಿ ಸಂಡೂರು, ಗುಡೇಕೋಟೆ, ಜರಿಮಲೆ, ಹಂಪಿ, ಉಚ್ಚಂಗಿದುರ್ಗ ಮತ್ತು ಬಳ್ಳಾರಿ ಪಟ್ಟಣದ ನಡುವೆ ಇರುವ ಬೆಟ್ಟಗಳು ಪ್ರಮುಖವಾದುವುಗಳಾಗಿವೆ. ಸಂಡೂರು ಮತ್ತಿತರ ಬೆಟ್ಟಗಳಲ್ಲಿ ಉತ್ತಮ ದರ್ಜೆಯ ಮ್ಯಾಂಗನೀಸ್ ಕಬ್ಬಿಣದ ಅದಿರು ದೊರೆಯುತ್ತದೆ. ಜಿಲ್ಲೆಯು ಅಮೂಲ್ಯವಾದ ಖನಿಜ ಸಂಪತ್ತನ್ನು ಹೊಂದಿದೆ. ಅನೇಕ ಗಣಿಗಳಿದ್ದು ಕಬ್ಬಿಣದ ಅದಿರನ್ನು ವಿದೇಶಗಳಿಗೆ ರಫ್ತು ಮಾಡುವುದರಿಂದ ಅಪಾರ ಆರ್ಥಿಕ ವಹಿವಾಟನ್ನು ನಡೆಸುವ ಜಿಲ್ಲೆ ಇದಾಗಿದೆ.

ಭೌಗೋಳಿಕ ಹಿನ್ನಲೆಯಂತೆ ಬಳ್ಳಾರಿ ಪರಿಸರದ ಚಾರಿತ್ರಿಕ ಹಿನ್ನಲೆಯೂ ಮಹತ್ವಪೂರ್ಣವಾದುದಾಗಿದೆ. ಇದರ ಪ್ರಾಚೀನತೆಯು ಶಿಲಾಯುಗ, ಮಧ್ಯಶಿಲಾಯುಗ ಮತ್ತು ನವಶಿಲಾಯುಗಗಳೆಲ್ಲೆಲ್ಲಾ ಹರಡಿಕೊಂಡಿದೆ. ಇವುಗಳಲ್ಲೆಲ್ಲಾ ಹೆಚ್ಚಿನವು ಪ್ರಾಗೈತಿಹಾಸಿಕ ನೆಲೆಗಳಾಗಿವೆ. ಮಾನವನು ಇಲ್ಲಿ ಜೀವನ ನಡೆಸಿದುದರ ಬಗ್ಗೆ ಪ್ರಾಕ್ತನಶಾಸ್ತ್ರೀಯ ಆಧಾರಗಳು ಖಚಿತಪಡಿಸುತ್ತವೆ. ಗಾದಿಗನೂರು, ದರೋಜಿ, ಹಿರೇಕುರುವತ್ತಿ, ಹಂಪಿ ಮತ್ತು ತುಂಗಾಭದ್ರಾ ನದಿಯ ಇಕ್ಕೆಲಗಳಲ್ಲಿ ಪ್ರಾಕ್ತನ ಕುರುಹುಗಳು ಹೆಚ್ಚಾಗಿ ಕಂಡುಬರುತ್ತವೆ. ನವಶಿಲಾಯುಗದಲ್ಲಿ ಮಾನವನು ಅಲೆಮಾರಿತನವನ್ನು ನಿಲ್ಲಿಸಿ ಬೇಸಾಯ, ಪಶುಪಾಲನೆಯಲ್ಲಿ ತೊಡಗಿದುದಕ್ಕೆ ತೆಕ್ಕಲಕೋಟೆ, ಸಂಗನಕಲ್ಲು, ಕಪ್ಪಗಲ್ಲು, ಬೂದಿಹಾಳು, ಹಲಸಿಗ್ರಾಮ, ಗೊಲ್ಲಪಲ್ಲಿ, ತೋರಣಗಲ್ಲುಗಳಲ್ಲಿ ನಿದರ್ಶನಗಳು ದೊರೆಯುತ್ತವೆ.

ಇಷ್ಟೇ ಅಲ್ಲದೆ ಈ ಜಿಲ್ಲೆಯು ಪುರಾತನ ಕಾಲದಿಂದ ಐತಿಹಾಸಿಕ ಮಹತ್ವವನ್ನು ಪಡೆದುದಕ್ಕೆ ನಿದರ್ಶಗಳಿವೆ. ಕ್ರಿ.ಪೂ.೩ನೇ ಶತಮಾನದಿಂದ ಕ್ರಮವಾಗಿ ಮೌರ್ಯರು, ಶಾತವಾಹನರು, ಕದಂಬರು, ಗಂಗರು, ಬಾದಾಮಿಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣಚಾಲುಕ್ಯರು, ಚೋಳರು, ಕಲಚೂರ್ಯರು, ಹೊಯ್ಸಳರು, ನೊಳಂಬರು, ವಿಜಯನಗರ ಸಾಮ್ರಾಜ್ಯ, ಬಹುಮನಿ ಸಾಮ್ರಾಜ್ಯ, ಪಾಳೆಗಾರರು, ಮರಾಠರು, ಔರಂಗಜೇಬ್‌ನ ಆಕ್ರಮಣ, ನಿಜಾಮ ಮತ್ತು ಹೈದರ್ ಅಲಿ ಟಿಪ್ಪುಸುಲ್ತಾನ್‌ರವರೆಗೆ ರಾಜರಷ್ಟೇ ಅಲ್ಲದೆ ಸಾಮಂತರೂ ಆಳ್ವಿಕೆ ನಡೆಸಿದ ರಾಜಕೀಯ ಚರಿತ್ರೆಯಿದೆ. ಐತಿಹಾಸಿಕ ಕಾಲದಲ್ಲಿ ಮೌರ್ಯ ಸಾಮ್ರಾಟನಾದ ಅಶೋಕನ ಆಳ್ವಿಕೆಗೆ ಈ ಪ್ರದೇಶ ಒಳಪಟ್ಟಿದ್ದಿತು ಎಂಬುದಕ್ಕೆ ಕ್ರಿ.ಪೂ.೨೫೮ರ ಸಿರುಗುಪ್ಪ ತಾಲೂಕಿನಲ್ಲಿ ದೊರತಿರುವ ಶಾಸನದಿಂದ ಈ ಅಂಶ ಬೆಳಕಿಗೆ ಬಂದಿದೆ. ನಂತರ ಬಂದ ಶಾತವಾಹನರು ದಕ್ಷಿಣ ಪಥದಲ್ಲಿ ರಾಜ್ಯಭಾರ ನಡೆಸಿದ್ದು ಬಳ್ಳಾರಿ ಹತ್ತಿರದ ಮ್ಯಾಕಡೋಣಿಯಲ್ಲಿ (ಇಂದಿನ ಆದೋನಿ ತಾ. ಕರ್ನೂಲ್ ಜಿ. ಆಂಧ್ರ ಪ್ರದೇಶ) ಇವರ ಶಾಸನ ಕಂಡು ಬಂದಿದೆ. ಇವರು ಈ ಪ್ರದೇಶವನ್ನು "ಕುಂತಳ" ವೆಂದು ಕರೆದುಕೊಂಡಿದ್ದರು. 'ತಳವಾರಿಕೆ' ವ್ಯವಸ್ಥೆಯನ್ನು ಕನ್ನಡ ಪ್ರದೇಶದಲ್ಲಿ ಜಾರಿಗೆ ತಂದ ಕೀರ್ತಿ ಇವರಿಗೆ ಸಲ್ಲುತ್ತದೆ. ಗುಪ್ತರ ಕಾಲಕ್ಕೆ ಒಂದು ಚಾರಿತ್ರಿಕ ಘಟನೆ ನಡೆದುದ್ದನ್ನು ಬಾಣಕವಿಯು "ಅಲಿಪುರಂ ಸ್ಕಂಧವಾರಂ" ಎಂದಿರುವುದು ಇಂದಿನ ಬಳ್ಳಾರಿ ಹಾಗೂ ಅಲ್ಲೀಪುರ ಪ್ರದೇಶವೇ ಇರಬೇಕು. ನಂತರ ಕದಂಬರು ಪ್ರಾಬಲ್ಯಕ್ಕೆ ಬಂದಾಗ ಉಚ್ಚಂಗಿದುರ್ಗದವರೆಗೆ ರಾಜ್ಯ ವಿಸ್ತಾರವಾಗಿತ್ತು. ಈ ದುರ್ಗವು ಪಶ್ಚಿಮಕ್ಕಿದೆ. ಇಂದು ಹರಪನಹಳ್ಳಿ ತಾಲೂಕಿನ ಮೂಲಕ ಉಚ್ಚಂಗಿದುರ್ಗ ದಾವಣಗೆರೆ ಜಿಲ್ಲೆಗೆ ಸೇರಿದೆ. ಕ್ರಿ.ಶ.೭೮೭–೮೮ರಲ್ಲಿದ್ದ ಗಂಗ ದೊರೆ ಶ್ರೀಪುರುಷನ (ಕ್ರಿ.ಶ.೭೮೫) ಕಾಲದಲ್ಲಿ ಕಂಪಲಿ ಹತ್ತಿರ ಯುದ್ಧದಲ್ಲಿ ಪಾಂಡಪ್ಪ ಎಂಬುವವನು ಮಡಿಯುತ್ತಾನೆ ಎಂಬ ಅಂಶ ತಿಳಿದುಬರುತ್ತದೆ.

ಕ್ರಿ.ಶ. ೬ನೇ ಶತಮಾನದಲ್ಲಿ ಕದಂಬರನ್ನು ಸೋಲಿಸಿದಾಗ ಬಾದಾಮಿಚಾಲುಕ್ಯರ ಅಧೀನಕ್ಕೆ ಈ ಪ್ರದೇಶ ಒಳಪಟ್ಟ ವಿಷಯ ಶಾಸನಗಳಲ್ಲಿ ಉಲ್ಲೇಖಿತಗೊಂಡಿರುವ ೧ನೇ ಕೀರ್ತಿವರ್ಮ, ೨ನೇ ಪುಲಕೇಶಿ, ವಿಕ್ರಮಾದಿತ್ಯರ ಹೆಸರುಗಳಿಂದ ಖಚಿತಗೊಳ್ಳುತ್ತದೆ. ಕುರುಗೋಡಿನ ಶಾಸನ ೨ನೇ ಪುಲಕೇಶಿ ಮತ್ತು ಅವನ ಪುತ್ರರನ್ನು ಉಲ್ಲೇಖಿಸುತ್ತದೆ. ೭ನೇ ಶತಮಾನದಲ್ಲಿ ಚಾಲುಕ್ಯ ದೊರೆ ವಿನಯಾದಿತ್ಯ ಪಂಪಾತೀರ್ಥದಲ್ಲಿ ತಂಗಿದ್ದು ಭೂಮಿಯನ್ನು ದತ್ತಿ ಬಿಟ್ಟಿರುವುದು ತಿಳಿದುಬಂದಿದೆ. ಕ್ರಿ.ಶ. ೮ನೇ ಶತಮಾನದ ಮಧ್ಯಭಾಗದಲ್ಲಿ ಚಾಲುಕ್ಯರಿಂದ ಈ ಪ್ರದೇಶದ ಒಡೆತನವನ್ನು ಮಳಖೇಡದ ರಾಷ್ಟ್ರಕೂಟರು ಪಡೆದುಕೊಂಡು ಹಗರಿವರೆಗೆ ರಾಜ್ಯದ ಗಡಿಯನ್ನು ವಿಸ್ತರಿಸಿ ಆಳ್ವಿಕೆ ನಡೆಸಿದರು. ಅಲ್ಲಿಂದ ೧೦ನೇ ಶತಮಾನದವರೆಗೆ ಚಾಲುಕ್ಯರು ರಾಷ್ಟ್ರಕೂಟರಿಗೆ ಸಾಮಂತರಾಗಿದ್ದರೆಂದು ಬಾಗಳಿ ಶಿಲಾಶಾಸನದಿಂದ ತಿಳಿಯುತ್ತದೆ. ೧೦ನೇ ಶತಮಾನದಲ್ಲಿ

ತಲಕಾಡಿನ ಗಂಗ ವಂಶದ ಮಾರಸಿಂಹನು ಉಚ್ಚಂಗಿದುರ್ಗದ ಕೋಟೆಯನ್ನು ಪಡೆದುಕೊಂಡಾಗ 'ನೊಳಂಬಕುಲಾಂತಿಕೆ' ಎಂಬ ಬಿರುದು ಪ್ರಾಪ್ತಿಯಾಯಿತು. ನೊಳಂಬ ಪಲ್ಲವ ರಾಜನು ಕಂಪಲಿಯ ಹತ್ತಿರ ರಾಜ್ಯವಾಳುತ್ತಿದ್ದನಂತೆ. ಕ್ರಿ.ಶ.೧೩೧೧ರ ಬೈಲೂರು ಶಿಲಾಶಾಸನದಲ್ಲಿ ಇಮ್ಮಡಿ ಭೀಮರಾಜನಿಗೆ 'ಬಳ್ಳಾರಿಯ ಭೀಮರಸ' 'ಬಳ್ಳಾರಿಯ ಅಜ್ಜರಸ' ಎಂಬುದಾಗಿ ಹೆಸರಿಸಲಾಗಿದೆ. ನಂತರ ಕಲ್ಯಾಣ ಚಾಲುಕ್ಯರ ತೈಲಪ ಗಂಗರನ್ನು ಸೋಲಿಸಿದನು. ಈ ಪ್ರದೇಶವು ಸೇರಿರುವಂತೆ ಕುಂತಲ ರಾಜ್ಯವನ್ನು ಅವರು ಆಳುತ್ತಿದ್ದರೆಂದು ಬಾಗಳಿ ಮತ್ತು ಕೋಗಳಿ ದೇವಾಲಯಗಳಲ್ಲಿರುವ ಶಿಲಾಶಾಸನಗಳು ತಿಳಿಸುತ್ತವೆ.

ಕಲ್ಯಾಣ ಚಾಲುಕ್ಯರ ತರುವಾಯ ಅವರ ಸಾಮಂತರಾಗಿದ್ದ ಕಳಚೂರಿಗಳು ದ್ವಾರಸಮುದ್ರದ ಹೊಯ್ಸಳರು ಮತ್ತು ದೇವಗಿರಿಯ ಯಾದವರು ಆಳ್ವಿಕೆ ನಡೆಸಿದರು. ಬಿಜ್ಜಳನು ಕಲ್ಯಾಣದಲ್ಲಿ ರಾಜ್ಯ ಸ್ಥಾಪಿಸಿದ ನಂತರ ಚಾಲುಕ್ಯರು ಅಲ್ಪಾವಧಿವರೆಗೆ ಈ ಪ್ರದೇಶದಲ್ಲಿದ್ದರೆಂಬುದಾಗಿ ತಿಳಿದುಬರುತ್ತದೆ. ಹೊಯ್ಸಳರು ತಮ್ಮ ರಾಜ್ಯಾಳ್ವಿಕೆಯಲ್ಲಿ ವಿಷ್ಣುವರ್ಧನನವರೆಗೆ ಕಲ್ಯಾಣಚಾಲುಕ್ಯರ ಅಧೀನದಲ್ಲಿದ್ದರು. ಇವನ ಕಾಲಕ್ಕೆ (೧೧೬೦) 'ಬಳ್ಳರೆ'ಯ ಎಂದು ಶಾಸನದಲ್ಲಿ ಉಲ್ಲೇಖಿಸಲಾಗಿದೆ. ೨ನೇ ಬಲ್ಲಾಳ ನೊಳಂಬವಾಡಿಯನ್ನು ಹಲವು ಬಾರಿ ವಶಪಡಿಸಿಕೊಂಡನಲ್ಲದೆ, ಇವನು ಉಚ್ಚಂಗಿದುರ್ಗವನ್ನು ಉತ್ತರ ಭಾಗದ ರಾಜಧಾನಿ ಮತ್ತು ತುಂಗಭದ್ರ ನದಿಯನ್ನು ಉತ್ತರದ ಗಡಿಯಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದುದು ಕಂಡುಬರುತ್ತದೆ. ಕುಮ್ಮಟದುರ್ಗದ ಕಂಪಿಲರಾಯನು ಸೇವುಣರ ಪರವಾಗಿ; ಹೊಯ್ಸಳರ ವಿರೋಧಿಯಾಗಿದ್ದು ಕ್ರಿ.ಶ.೧೩೨೭ ರಲ್ಲಿ ಕುಮ್ಮಟದುರ್ಗ ಮಹಮ್ಮದಿಯರ ದಾಳಿಗೆ ತುತ್ತಾಗಿ ಅಸ್ತಂಗತವಾದುದು ತಿಳಿದುಬರುತ್ತದೆ. ಬಳ್ಳಾರಿ ಜಿಲ್ಲೆ ಸಂಡೂರು ಹತ್ತಿರವಿರುವ ಹೊಸಮಲೆದುರ್ಗದಲ್ಲಿ ಮುಮ್ಮಡಿ ಸಿಂಗೇನಾಯಕ, ಕಂಪಿಲರಾಯ ಮತ್ತು ಕುಮಾರರಾಮರು ಆರಂಭದಲ್ಲಿ ಆಳ್ವಿಕೆ ನಡೆಸಿ ನಂತರದಲ್ಲಿ ಇಂದಿನ ಗಂಗಾವತಿ ತಾಲೂಕಿನ ಕುಮ್ಮಟದುರ್ಗದಲ್ಲಿ ರಾಜ್ಯಾಳ್ವಿಕೆ ಮಾಡಿದ್ದು ಗಮನಾರ್ಹ ಅಂಶ.

ಹೊಯ್ಸಳರ ವಿಷ್ಣುವರ್ಧನನ ಕಾಲಕ್ಕೆ ಬಳ್ಳಾರಿ 'ಕೋಟೆ' ಹೊಯ್ಸಳರಿಗೆ ಸೇರಿತ್ತು. ಕ್ರಿ.ಶ. ೧೩೩೬ ರಲ್ಲಿ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾಗಿ ನಾಲ್ಕು ವಂಶಗಳು ಆಳ್ವಿಕೆ ನಡೆಸಿದವು. ಇವರ ಕಾಲದಲ್ಲಾದ ಎಲ್ಲಾ ಕ್ಷೇತ್ರಗಳ ಬದಲಾವಣೆ, ಅಭಿವೃದ್ಧಿ ಮತ್ತು ಸುಧಾರಣೆಗಳು ಚರಿತ್ರೆಯಲ್ಲಿ ತಮ್ಮದೇ ಆದ ಸ್ಥಾನವನ್ನು ಪಡೆದುಕೊಂಡಿವೆ. ವಿಜಯನಗರದ ನಂತರ ಈ ಭಾಗ ಬಿಜಾಪುರದ ೧ನೇ ಅಲಿಆದಿಲ್ ಷಾನಿಗೆ ವಶವಾಗುತ್ತದೆ. ಅನಂತರ ಸ್ಥಳೀಯ ಪಾಳೆಗಾರರು ರಾಜಕೀಯ ಪ್ರಾಬಲ್ಯ ಬೆಳೆಸಿಕೊಂಡು ಆದಿಲ್ ಷಾಹಿಗಳಿಗೆ ಅಧೀನರಾಗಿ ಈ ಭಾಗದಲ್ಲಿ ಆಳ್ವಿಕೆ ನಡೆಸಿದ್ದಾರೆ.

ಇಂತಹ ಸಾಕಷ್ಟು ರಾಜಕೀಯ ಮಾಹಿತಿಗಳು ಶಾಸನಗಳಿಂದ ದೊರೆಯುವಂತೆ, ಪೌರಾಣಿಕ ಅಂಶಗಳು ಕೂಡ ದೊರೆಯುತ್ತವೆ. ಅಂದರೆ ಶಾಸನಗಳಲ್ಲಿ ಪ್ರಮುಖವಾಗಿ ಅವರ ವಂಶವರ್ಣನೆ,

ಅರಸ ಅಥವಾ ಸಾಮಂತ ವ್ಯಕ್ತಿಯ ವರ್ಣನೆ ಮತ್ತು ಶಾಸನವಿರುವ ಸ್ಥಳದ ವರ್ಣನೆಯನ್ನು ಹೇಳಬೇಕಾದರೆ ಪೌರಾಣಿಕವಾಗಿ ಚಿತ್ರಿಸಿರುವುದನ್ನು ಕಾಣುತ್ತೇವೆ. ಗಂಗರ ದೊರೆ ದುರ್ವಿನೀತನ ಬಗ್ಗೆ ಉಲ್ಲೇಖವಿರುವ ಕ್ರಿ.ಶ.೫೪೯-೫೭೦ ಶಾಸನ ಅವನನ್ನು ಕುರಿತು ಹೀಗೆ ವರ್ಣಿಸುತ್ತದೆ.

ಧರೆಗೆಸದಿರ್ಪ (೦)ಮ್ಮೆಳೆಗುಂ
ಧರಣೀಪತಿ ದುವ್ವಿನೀತಗಂಗಂ ಪರಮಾ
ದರದಿಂದಂ ರಾಜ್ಯಚಿಹ್ನಂ
ಬೆರಸು ಕುಡಲ್ಪಡೆದನೆಸಯ ಪಶುಪತಿ ಭಟ್ಟಂ॥[೧]

ಹೀಗೆ ಶಾಸನಗಳಲ್ಲಿ ಪುರಾಣ ಉಲ್ಲೇಖಿತ ಅರಸರು, ವಂಶ, ಬಿರುದಾವಳಿಗಳು, ಪ್ರದೇಶಗಳು, ಯುದ್ಧ, ಸೋಲು-ಗೆಲುವುಗಳ ವರ್ಣನೆಯು ಎಲ್ಲರಿಗೂ ಒಪ್ಪಿತವಾದ(ಇಲ್ಲಿಯವರೆಗೆ ನಂಬಿದ್ದ ಇತಿಹಾಸ)ಇತಿಹಾಸವನ್ನು ಕಟ್ಟಿಕೊಟ್ಟರೆ, ಇಂತಹದೇ ಶಾಸನಗಳಲ್ಲಿ ಬರುವ ಸಾಮಂತರ, ತಳಸಮುದಾಯದವರ, ಸ್ತ್ರೀಯರ (ಮಹಾಸತಿ ಕಲ್ಲು) ಸಾಧು-ಸಂತರ(ನಿಷಧಿ ಕಲ್ಲು) ತಮ್ಮ ವೀರತ್ವದಿಂದ(ವೀರಗಲ್ಲುಗಳು) ಮಡಿದ ಶಾಸನಗಳಲ್ಲಿನ ವರ್ಣನೆ-ವಿವರಣೆಗಳು ಇತಿಹಾಸದ ಇನ್ನೊಂದು ಮಗ್ಗುಲನ್ನು ನೋಡಲು ಅನುವು ಮಾಡಿಕೊಡುತ್ತವೆ.

ಹೀಗೆ ಪ್ರಾಚೀನ ಕಾಲದ ಅವಶೇಷಗಳಿಂದ ಹಿಡಿದು ಪೌರಾಣಿಕವಾಗಿ, ರಾಜಕೀಯವಾಗಿ, ಸಾಂಸ್ಕೃತಿಕವಾಗಿ, ಸಮೃದ್ಧವಾಗಿರುವ ಕಾರಣಕ್ಕೆ ಬಳ್ಳಾರಿ ಪರಿಸರವನ್ನು ಮಹಾಪ್ರಬಂಧದ ವ್ಯಾಪ್ತಿಯನ್ನಾಗಿಸಿಕೊಂಡಿದೆ. ಇಂದು ಬಳ್ಳಾರಿಯೆಂದು ಗುರುತಿಸುವ ಪ್ರದೇಶವು ಏಕೀಕರಣದ ನಂತರ ರೂಪುಗೊಂಡಿದ್ದು. ಅಧ್ಯಯನದ ಸಂದರ್ಭದಲ್ಲಿ ಈ ಮಿತಿಯನ್ನು ಮೀರಲಾಗುತ್ತದೆ. ಈ ಹಿನ್ನಲೆಯಲ್ಲಿ ಬಳ್ಳಾರಿ ಪರಿಸರವೆಂಬ ಎನ್ನುವ ಶೀರ್ಷಿಕೆಯನ್ನು ಬಳಸಲಾಗಿದೆ.

**ಅಧ್ಯಯನದ ವಿಧಾನ**

ಪ್ರತಿಯೊಂದು ಅಧ್ಯಯನಕ್ಕೂ ಪ್ರತ್ಯೇಕ ಅಧ್ಯಯನದ ವಿಧಾನಗಳಿರುತ್ತವೆ. ಈ ವಿಧಾನವು ಅಧ್ಯಯನಕ್ಕೆ ಚೌಕಟ್ಟನ್ನು ಒದಗಿಸುತ್ತದೆ. ಅಂದರೆ ಈ ಅಧ್ಯಯನವನ್ನು ಯಾವ ಬಗೆಯಲ್ಲಿ ಹೇಳಲಾಗಿದೆ, ಅಲ್ಲಿ ಅಧ್ಯಯನಕ್ಕೊಳಪಡಿಸಿದ ವಿಷಯವನ್ನು ವಿಶ್ಲೇಷಿಸಿದ ಬಗೆ ಯಾವುದು ಮತ್ತು ಅಧ್ಯಯನಕ್ಕೆ ಒಳಪಡಿಸಿದ ವಿಷಯವನ್ನು ಗುರುತಿಸುವ ಪರಿಯನ್ನು ಕುರಿತು ಹೇಳುವುದೆ ವಿಧಾನವಾಗುತ್ತದೆ. ಈ ಹಿನ್ನೆಲೆಯಲ್ಲಿ ಅಧ್ಯಯನಕ್ಕೆ ಶಾಸನ, ಪುರಾಣ, ಮತ್ತು ಐತಿಹ್ಯಗಳು ಆಕಾರಗಳಾಗಿವೆ. ಕ್ಷೇತ್ರಕಾರ್ಯ ಕೈಗೊಂಡು ಶಾಸನಗಳು ದೊರೆಯುವಲ್ಲಿಗೆ ಹೋಗಿ ಪ್ರಾಥಮಿಕ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಹಾಗೆಯೇ ಕೆಲವು ಶಾಸನಗಳ ಕುರಿತು ಬಂದಿರುವ ಗ್ರಂಥಗಳನ್ನು ಅನುಷಾಂಗಿಕ ಆಕರಗಳಾಗಿ ಬಳಸಿಕೊಳ್ಳಲಾಗಿದೆ. ಸಾಮಾಜಿಕ ವ್ಯವಸ್ಥೆಯಲ್ಲಿ ಬೆಳೆದು ಬಂದಿರುವ

ಐತಿಹ್ಯಗಳನ್ನು ವಕ್ತೃಗಳಿಂದ ಸಂಗ್ರಹಿಸಲಾಗಿದೆ. ಈಗಾಗಲೇ ಕೆಲವು ಐತಿಹ್ಯ ಸಂಗ್ರಹ ಪಠ್ಯಗಳು ರಚನೆಗೊಂಡಿವೆ. ಕ್ಷೇತ್ರಕಾರ್ಯದಲ್ಲಿ ದೊರೆತ ಐತಿಹ್ಯಗೆ ಪೂರಕವಾಗಿರುವವನ್ನು ಯಥಾವತ್ತಾಗಿ ಬಳಸಿಕೊಳ್ಳಲಾಗಿದೆ. ಶಾಸನಗಳಲ್ಲಿ ದಾಖಲಾಗಿರುವ ಪುರಾಣ ಮತ್ತು ಐತಿಹ್ಯಗಳನ್ನು ಹಾಗೂ ಪ್ರಚಲಿತದಲ್ಲಿರುವ ಪುರಾಣ ಹಾಗೂ ಐತಿಹ್ಯಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**ಇದುವರೆಗೆನ ಅಧ್ಯಯನಗಳ ಸಮೀಕ್ಷೆ**

ಶಾಸನಗಳನ್ನು ಮೊಟ್ಟಮೊದಲು ವ್ಯವಸ್ಥಿತವಾಗಿ ಸಂಗ್ರಹಿಸಿದವರು ಎಂದರೆ ಬ್ರಿಟಿಷ್ ವಿದ್ವಾಂಸರು. ಇವರು ಶಾಸನಗಳನ್ನು ಸಂಗ್ರಹಿಸಿದ ಉದ್ದೇಶ ಭಾರತೀಯರ ರಾಜಕೀಯ ಇತಿಹಾಸವನ್ನು ತಿಳಿಯುದಾಗಿತ್ತು. ಅವುಗಳ ಮೂಲಕ ನಮ್ಮ ದೇಶದ ರಾಜಕೀಯ ಆಡಳಿತ ತಿಳಿದು ಭಾರತೀಯರನ್ನು ಆಳುವುದು ಬ್ರಿಟಿಷರ ಉದ್ದೇಶವಾಗಿತ್ತು. ಆದೇನೆ ಇರಲಿ ಶಾಸನ ಆಧ್ಯಯನ ಕೈಗೊಂಡವರಲ್ಲಿ ಮೊದಲಿಗರೆಂದರೆ ಬಿ.ಎಲ್.ರೈಸ್. ಇವರ ನೇತೃತ್ವದಲ್ಲಿ ಹಳೆಯ ಮೈಸೂರು ರಾಜ್ಯದ ಮೈಸೂರು, ಕೊಡಗು, ಬೆಂಗಳೂರು, ಕೋಲಾರ, ತುಮಕೂರು, ಚಿತ್ರದುರ್ಗ, ಶಿವಮೊಗ್ಗ, ಹಾಸನ, ಕಡೂರು ಜಿಲ್ಲೆಗಳಲ್ಲಿನ ಶಾಸನಗಳನ್ನು ಎಫಿಗ್ರಾಫಿಯಾ ಕರ್ನಾಟಕ ಸಂಪುಟಗಳಾಗಿ ಹೊರತಂದರು. ಈ ಸಂಪುಟಗಳಲ್ಲಿ ಸುಮಾರು ಒಂಭತ್ತು ಸಾವಿರಕ್ಕೂ ಮಿಗಿಲಾಗಿ ಶಾಸನಗಳು ಪ್ರಕಟವಾಗಿವೆ. ಪ್ರತಿಯೊಂದು ಜಿಲ್ಲೆಯ ಶಾಸನಗಳನ್ನು ಆಡಳಿತ ವಿಭಾಗಗಳಾದ ಹೋಬಳಿ, ಗ್ರಾಮವಾರು ಎಂಬುದಾಗಿ ವಿಂಗಡಿಸಿ, ಶಾಸನವಿರುವ ಸ್ಥಳ, ಅದರ ಅಳತೆ ವಿವರಗಳನ್ನು ನೀಡಿದ್ದಾರೆ.

ಎಫಿಗ್ರಾಫಿಯಾ ಕರ್ನಾಟಕ ಸಂಪುಟಗಳನ್ನು ಬಿ.ಎಲ್. ರೈಸರು ಪ್ರಕಟಿಸಲು ಆರಂಭಿಸಿದ ಮೇಲೆ ಕರ್ನಾಟಕದ ಗತ ಇತಿಹಾಸವು ಎಳೆ ಎಳೆಯಾಗಿ ಬಿಚ್ಚಿಕೊಳ್ಳಲಾರಂಬಿಸಿತು. ರೈಸರು ಸಂಪುಟಗಳ ಪ್ರಕಟನೆಗಳ ಜೊತೆಗೆ ಸಂಕ್ಷಿಪ್ತವಾದ ಪ್ರಸ್ತಾವನೆಯನ್ನು ಆ ಸಂಪುಟಗಳಿಗೆ ಬರೆದರು. ಈ ಪ್ರಸ್ತಾವನೆಯಲ್ಲಿ ಶಾಸನಗಳಲ್ಲಿ ಉಲ್ಲೇಖಿತವಾದ ಮುಖ್ಯ ರಾಜವಂಶಗಳಲ್ಲದೆ ಸ್ಥಳೀಯವಾಗಿ ಆಳಿದ ಮಾಂಡಲಿಕರ ಇತಿಹಾಸವು ಇದೆ. ಇಲ್ಲಿ ರೈಸರು ಪ್ರಮುಖವಾಗಿ ಶಾಸನಗಳನ್ನು ಸಂಗ್ರಹಿಸುವ ಕೆಲಸಕ್ಕೆ ಮಾತ್ರ ಹೆಚ್ಚಿನ ಒತ್ತು ನೀಡಿದ್ದರು. ಏಕೆಂದರೆ ಬ್ರಿಟಿಷರಿಗೆ ಇಲ್ಲಿನ ಹಿಂದಿನ ಗತಕಾಲದ ಪರಿಸರವನ್ನು ಅರಿತುಕೊಳ್ಳಲು ಶಾಸನಗಳು ಪ್ರಮುಖ ಆಕರಗಳಾಗಿದ್ದವು. ನಂತರ ಬಂದಂತಹ ವಿದ್ವಾಂಸರು ಶಾಸನಗಳನ್ನು ಕೇವಲ ಆ ಶಾಸನಗಳಲ್ಲಿ ಕಂಡುಬರುವ ಶಾಸನದ ಕಾಲ, ಆ ಶಾಸನವನ್ನು ಹಾಕಿಸಿದಂತಹ ರಾಜನ ವಂಶ, ಧರ್ಮ ಮುಂತಾದ ಮೇಲ್ನೋಟಕ್ಕೆ ಗೋಚರಿಸುವ ಅಂಶಗಳಿಗೆ ಮಾತ್ರ ಓತ್ತು ಕೊಟ್ಟು ಅಧ್ಯಯನ ನಡೆಸಿದರು. ಅತ್ತಿಂದಿಚೆಗೆ ವಿದ್ವಾಂಸರು ಒಂದೊಂದೆ ರಾಜವಂಶವನ್ನು, ಮನೆತನವನ್ನು, ವ್ಯಕ್ತಿಯನ್ನು ಆಯ್ಕೆ ಮಾಡಿಕೊಂಡು ಇತಿಹಾಸವನ್ನು ಕಟ್ಟುವ ಪ್ರಯತ್ನ ಮಾಡಿದ್ದಾರೆ.

ಹಳೆಯ ಮೈಸೂರು ಪ್ರದೇಶದಲ್ಲಿ ನಡೆದಹಾಗೆ ಸುವ್ಯವಸ್ಥಿತ ರೀತಿಯ ಶಾಸನಗಳ ಪರಿವೀಕ್ಷಣ ಕಾರ್ಯ ಬೊಂಬಾಯಿ, ಮದರಾಸು, ಆಂಧ್ರ ಪ್ರಾಂತ್ಯಗಳಿಗೆ ಸೇರಿದ್ದ ಕನ್ನಡ ಜಿಲ್ಲೆಗಳಲ್ಲಿ ಆಗಿಲ್ಲವೆಂದೆ ಹೇಳಬೇಕಾಗುತ್ತದೆ. ಬಾಂಬೆ ಕರ್ನಾಟಕದ ಕಡೆಯ ಶಾಸನಗಳ ಬಗ್ಗೆ ಮೊದಲಿಗೆ ಕೆಲಸವನ್ನು ಪ್ರಾರಂಭಮಾಡಿದವರು ಜೆ.ಫ್. ಫ್ಲೀಟ್. ಅವರು ಪ್ರಕಟಿಸಿರುವ ಶಾಸನಗಳ ಸಂಖ್ಯೆ ಕಡಿಮೆಯಾದರೂ ವಿಸ್ತೃತವಾದ ವಿವರಣೆಯನ್ನು ಅವರು ನೀಡಿದ್ದಾರೆ.

ಭಾರತೀಯರಾದ ಕೆ.ಬಿ. ಪಾಠಕ್, ರಾವ ಬಹುದ್ದೂರು ಆರ್. ನರಸಿಂಹಚಾರ್, ಆರ್. ಶಾಮಾಶಾಸ್ತ್ರಿ, ಆರ್.ಎಸ್. ಪಂಚಮುಖಿ ಡಾ.ಎಂ.ಎಚ್. ಕೃಷ್ಣ ಮುಂತಾದ ವಿದ್ವಾಂಸರು ರೈಸರ ಗಮನಕ್ಕೆ ಬಾರದ ನೂರಾರು ಶಾಸನಗಳನ್ನು ಪುರಾತತ್ವ ಇಲಾಖೆಯ ವಾರ್ಷಿಕ ವರದಿಗಳಲ್ಲಿ ಮತ್ತು ಪ್ರತಿಯೊಂದು ಜಿಲ್ಲೆಯ ಅನುಬಂಧಗಳಲ್ಲಿ ಪ್ರಕಟಿಸಿದ್ದಾರೆ.

ಆರ್. ನರಸಿಂಹಾಚಾರ್ಯರು "ಶ್ರವಣಬೆಳಗೊಳದ ಶಾಸನಗಳು" (ರೈಸ್ ಅವರ ಸಂಗ್ರಹದ ಪರಿಷ್ಕರಣೆ), ಆರ್.ಎಸ್. ಪಂಚಮುಖಿ ಮತ್ತು ಎನ್. ಲಕ್ಷ್ಮೀನಾರಯಣರಾಯರು ಸಂಪಾದಿಸಿದ "ಬೊಂಬಾಯಿ ಕರ್ನಾಟಕದ ಶಾಸನಗಳು" ಪಂಚಮುಖಿಯವರ "ಕರ್ನಾಟಕದ ಶಾಸನಗಳ ಸಂಪುಟಗಳು", ಆರ್. ಶಾಮಾಶಾಸ್ತ್ರಿ ಮತ್ತು ಎನ್. ಲಕ್ಷ್ಮೀನಾರಯಣರಾಯರು ಸಂಪಾದಿಸಿದ "ದಕ್ಷಿಣ ಭಾರತದ ಶಾಸನಗಳು" (IX,i)....ಉಲ್ಲೇಖನಾರ್ಹವಾದುದು.

ಕನ್ನಡ–ಕನ್ನಡಿಗ–ಕರ್ನಾಟಕ ಸಂಸ್ಕೃತಿಯ ಕಲ್ಪನೆಯಡಿಯಲ್ಲಿ ಅಸ್ತಿತ್ವಕ್ಕೆ ಬಂದ ಕನ್ನಡ ವಿಶ್ವವಿದ್ಯಾಲದ ಶಾಸನಶಾಸ್ತ್ರ ವಿಭಾಗ, ದೇವರಕೊಂಡರೆಡ್ಡಿಯವರ ಸಂಪಾದಕತ್ವದಲ್ಲಿ ಒಂಭತ್ತು ಶಾಸನ ಸಂಪುಟಗಳು ಪ್ರಕಟವಾಗಿವೆ. "ಈವರೆಗೂ ನಡೆದ ಆಕರಶೋಧ ಅಲ್ಪ, ನಡೆಯಬೇಕಾದದು ಅಧಿಕ. ಈಗಾಗಿ ಕನ್ನಡ ವಿಶ್ವವಿದ್ಯಾಲಯವು ವಸ್ತ, ಭಾಷೆ, ವಿಚಾರ, ಕ್ರಿಯೆ–ಈ ನಾಲ್ಕು ಬಗೆಯ ಆಕರ ಸಂಗ್ರಹಕಾರ್ಯವನ್ನು ಕೈಗೆತ್ತಿಕೊಂಡಿದೆ. ಇವುಗಳಲ್ಲಿ ಭಾಷೆಗೆ ಸಂಬಂಧಪಟ್ಟ ಆಕರವೆನಿಸಿದ ಶಾಸನಗಳ ಪರೀವೀಕ್ಷಣೆಗೆ ಇಲ್ಲಿ ಗಮನಕೊಡಲಾಗಿದೆ" ಎಂದು ಎಮ್.ಎಮ್. ಕಲಬುರ್ಗಿಯವರು ಅಭಿಪ್ರಾಯಪಡುತ್ತಾರೆ.[೨]

ಈಚಿನ ತಲೆಮಾರಿನವರಾದ ಪಿ.ಬಿ. ದೇಸಾಯಿ, ಎ.ಎಂ. ಅಣ್ಣೀಗೇರಿ, ಎಸ್.ಎಚ್. ರಿತ್ತಿ, ಕೆ.ವಿ. ರಮೇಶ, ಆರ್.ಎನ್. ಗುರುವ, ಎಸ್. ಶೆಟ್ಟರ್, ಬಿ.ಆರ್. ಗೋಪಾಲ್, ಮಾಧವ ಎನ್.ಕಟ್ಟಿ, ಚಿದಾನಂದಮೂರ್ತಿ, ಎಂ.ಎಂ. ಕಲಬುರ್ಗಿ, ಸಿ. ನಾಗಭೂಷಣ ಮುಂತಾದ ಅನೇಕ ವಿದ್ವಾಂಸರೂ ಶಾಸನಗಳನ್ನೂ ತಾಮ್ರ ಪಟಗಳನ್ನೂ ಸಂಗ್ರಹಿಸಿ ಮೌಲ್ಯಯುತವಾದ ಲೇಖನಗಳನ್ನು ಬರೆದಿದ್ದಾರೆ.

ಇಲ್ಲಿಯವರೆಗೆ ಶಾಸನಗಳನ್ನು ಕೂಡಿಹಾಕುವ, ಅವುಗಳಲ್ಲಿರುವ ರಾಜಕೀಯ ಅಂಶಗಳಿಗೆ ಮಹತ್ವವನ್ನು ನೀಡಿ ಅವುಗಳ ಕಾಲ, ಅವುಗಳನ್ನು ಹಾಕಿಸಿದಂತಹ ರಾಜನ ವಿವರಣೆ, ಅವನ

ವಂಶದ ವಿವರಣೆ, ದಾನ ಕೊಟ್ಟಂತಹ ವಿಷಯ, ಹಾಕಿಸಿದ ಸ್ಥಳ, ಶಾಸನ ಯಾರಿಗೆ ಸೇರಿದ್ದು ಎನ್ನುವಂತಹ ಭೌತಿಕ ಅಂಶಗಳಿಗೆ ಮಾತ್ರ ಪ್ರಾಮುಖ್ಯತೆಯನ್ನು ನೀಡಿದ್ದರು. ಆದರೆ ಎಂ. ಚಿದಾನಂದ ಮೂರ್ತಿಯವರ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ಗ್ರಂಥವು ಹೊರ ಬಂದನಂತರ ಶಾಸನಗಳನ್ನು ನೋಡುವ ದೃಷ್ಟಿಕೋನ ಬದಲಾಯಿತು. ಇಲ್ಲಿಯವರೆಗೆ ಕೇವಲ ರಾಜಕೀಯ ಇತಿಹಾಸಕ್ಕೆ ಮಾತ್ರ ಬಳಸಿಕೊಂಡ ಶಾಸನಗಳನ್ನು ಅವುಗಳಲ್ಲಿರುವ ಸಾಂಸ್ಕೃತಿಕ ಅಂಶಗಳಾದ ಧರ್ಮ, ವಿದ್ಯಾಭ್ಯಾಸ, ಯುದ್ಧಕಲೆ, ಕಲೆ, ಸಾಮಾಜಿಕ ವ್ಯವಸ್ಥೆ, ಆಡಳಿತ ವ್ಯವಸ್ಥೆಯ ಬಗೆ, ಆರ್ಥಿಕ ವ್ಯವಸ್ಥೆಗಳ ಬಗ್ಗೆ ಬಿಡಿ ಬಿಡಿ ಅಧ್ಯಯನಕ್ಕೆ ಹೆಚ್ಚಿನ ಒತ್ತು ಕೊಟ್ಟು ಅಧ್ಯಯನ ಮಾಡಲು ಪ್ರಾರಂಬಿಸಿದರು.

ತದನಂತರ ಶಾಸನಗಳಲ್ಲಿ ಬಳಕೆಗೊಂಡಿರುವ ಭಾಷೆಯ ಲಿಪಿ ಕುರಿತು, ಶಾಸನಗಳಲ್ಲಿ ಕೆತ್ತಿರುವ ಶಿಲ್ಪಗಳನ್ನು ಕುರಿತು ಸಂಶೋಧನೆಗಳು ನಡೆದವು. ಆರ್. ಶೇಷಶಾಸ್ತ್ರಿ ಯವರು 'ಕರ್ನಾಟಕದ ವೀರಗಲ್ಲುಗಳು' ಕುರಿತು ಅಧ್ಯಯನ ನಡೆಸಿದ್ದಾರೆ. ಪ್ರಸ್ತುತ ಕೃತಿಯು ವೀರಗಲ್ಲು, ಪ್ರತಿನಿಧಿಸುವ ವೀರನ ಸಾವಿಗೆ ಕಾರಣವಾದ ಹೋರಾಟವನ್ನು ಪರಿಚಯಿಸಿ ಕೊಡುತ್ತದೆ. ಮಡಿದವನ ಜೀವನ ಮೌಲ್ಯವನ್ನು ತಿಳಿಯುವಲ್ಲಿ ನೆರವಾಗುತ್ತದೆ. ವೀರಗಲ್ಲುಗಳ ವೀರರು ತಮ್ಮ ಅರಸರ ಪರವಾಗಿ ಹೋರಾಡಿ ಮಡಿದವರು ಮತ್ತು ಸಂಘ ಜೀವಿಯಾದ ಮಾನವನ ಕರ್ತವ್ಯಗಳನ್ನು ಸಹಜವೆಂಬಂತೆ ಭಾವಿಸಿ ಪಾಲಿಸಿದ ಮಾನವ ಶ್ರೇಷ್ಠರಾಗಿದ್ದಾರೆ. ಅವರು ಮಾಡಿದ ಹೋರಾಟ ಸಮಾಜದ ಜೀವನ ಮೌಲ್ಯಗಳನ್ನು ಎತ್ತಿ ಹಿಡಿಯುವುದರಲ್ಲಿ ಸ್ವಾರ್ಥವನ್ನು ಬಗೆಯದೆ, ಜೀವನದ ಹಂಗನ್ನು ತೊರೆದ ಅವರ ಧೀಮಂತಿಕೆ ಮೆಚ್ಚತಕ್ಕದ್ದಾಗಿದೆ. ಅವರ ಪರಾಕ್ರಮ ಕೇವಲ ಪಶುಬಲವಾಗಿರದೆ ಸಾಮಾಜಿಕ ನಿಷ್ಠೆ, ಸ್ವಾಮಿ ನಿಷ್ಠೆ, ಸ್ವಾಬಿಮಾನಗಳಿಂದ ಕೂಡಿದುದಾಗಿದೆ. ಸಣ್ಣ ಪುಟ್ಟ ಕಾರಣಗಳಿಗಾದರೂ ಹೊಡೆದಾಡುವ ಜನರ ಪ್ರವೃತ್ತಿ ಅಧಿಕಾರದ ಮದದಿಂದ ಕಿರುಕುಳ ಕೊಡುವ ಅಧಿಕಾರಿಶಾಹಿ ಮನೋಧರ್ಮ, ಅವಕಾಶ ದೊರೆಯಿತೆಂದು ಅಬಲೆಯರ ಮೇಲೆರಗುವ ಕಾಮುಕ ಕಾಮನಂತೆ ಮುಂತಾದ ಸಮಾಜ ವಿರೋಧಿ ಚಟುವಟಿಕೆಗಳ ಪರಿಚಯವೂ ಈ ವೀರಗಲ್ಲುಗಳಿಂದ ಆಗುತ್ತದೆ. ಇಂಥವರನ್ನು ಎದುರಿಸಿ ಮಡಿದವರು ವೀರಗಲ್ಲುಗಳ ವೀರರು ಎಂಬುದನ್ನು ವಿವರವಾಗಿ ಚರ್ಚಿಸಿದ್ದಾರೆ. ಪ್ರಸ್ತುತ ಕೃತಿಯು ಒಟ್ಟು ಐದು ಅಧ್ಯಾಯಗಳನ್ನು ಒಳಗೊಂಡಿದೆ.

ಒಟ್ಟಾರೆಯಾಗಿ ಶಾಸನಗಳನ್ನು ಇತ್ತೀಚಿನ ವಿದ್ವಾಂಸರು ಹಲವಾರು ವಿಧಗಳಲ್ಲಿ ಅಧ್ಯಯನ ಮಾಡಿರುವ ಅಂಶ ಕಂಡುಬರುತ್ತದೆ. ಇನ್ನೂ ಮುಂದುವರೆದು ಜಿಲ್ಲೆಯನ್ನು ಕೇಂದ್ರಿಕರಿಸಿಕೊಂಡು, ನಾಡನ್ನು ಕೇಂದ್ರಿಕರಿಸಿಕೊಂಡು, ತಾಲೂಕುಗಳನ್ನು ಕೇಂದ್ರಿಕರಿಸಿಕೊಂಡು ಇತ್ತಿಚೀಗೆ ಸಂಶೋಧನೆ ನಡೆಯುತ್ತಲಿವೆ. ಶಾಸನಗಳಲ್ಲಿ ಕಂಡುಬಂದಿರುವ ಮಹಿಳಾ ಚರಿತ್ರೆಯನ್ನು ಕುರಿತು, ಸಾಹಿತ್ಯವನ್ನು

ಕುರಿತು ಸಂಶೋಧನೆಗಳು ನಡೆದಿವೆ. ಉದಾಹರಣೆಗೆ, ಭಾರತೀ ಅಳವಂಡಿಮಠ ಅವರು 'ಬಾಗಳಿ ಶಾಸನಗಳು ಮತ್ತು ಸಂಸ್ಕೃತಿ' ಎಂಬ ಸಂಶೋಧನಾ ಪ್ರಬಂಧವನ್ನು ೨೦೦೩ ರಲ್ಲಿ ಕನ್ನಡ ವಿಶ್ವವಿದ್ಯಾಲಯ, ಹಂಪಿಗೆ ಸಲ್ಲಿಸಿ ಪಿ.ಎಚ್.ಡಿ. ಪದವಿ ಪಡೆದಿದ್ದಾರೆ. ಈ ಗ್ರಂಥದಲ್ಲಿ ಸಂಶೋಧಕರೆ ಹೇಳಿಕೊಳ್ಳುವಂತೆ 'ಶಾಸನಗಳ ಹಿನ್ನಲೆಯಲ್ಲಿ ಬಾಗಳಿಯ ಇತಿಹಾಸ ಮತ್ತು ಸಂಸ್ಕೃತಿ'ಯನ್ನು ನೋಡುವ ಉದ್ದೇಶವನ್ನು ಹೊಂದಿದ್ದು ರಾಜಕೀಯ ಇತಿಹಾಸದ ಜೊತೆಗೆ ಸಾಮಾಜಿಕ, ಆರ್ಥಿಕ, ಆಡಳಿತ, ಶೈಕ್ಷಣಿಕ ಇತಿಹಾಸ ಹಾಗೂ ಆಚರಣೆ ಪದ್ಧತಿಗಳನ್ನು ವಿವರಿಸಿದ್ದಾರೆ. ರಾಜರು ಅವರ ಪತ್ನಿಯರು ನೀಡಿದ ದಾನಗಳು, ಇವರ ಯುದ್ಧಗಳು, ದಿಗ್ವಿಜಯಗಳು, ಆ ಕಾಲದ ಸಾಮಾಜಿಕ ವಿಚಾರಗಳನ್ನು ಚರ್ಚಿಸಿದ್ದಾರೆ. ಪ್ರಸ್ತುತ ಅಧ್ಯಯನಕ್ಕೆ ಶಾಸನಗಳೆ ಮೂಲ ಆಕರಗಳಾಗಿದ್ದರಿಂದ ಬಾಗಳಿಯನ್ನೆ ವ್ಯಾಪ್ತಿಯಾಗಿಸಿಕೊಂಡಿದ್ದರೂ ಬಳ್ಳಾರಿಯಾದ್ಯಂತ ಬರುವ ಎಲ್ಲಾ ಶಾಸನಗಳನ್ನು ಒಂದೆಡೆ ಸಂಗ್ರಹಿಸಿ ಅಧ್ಯಯನ ಮಾಡಿದ್ದಾರೆ. ಈ ಶಾಸನಗಳಲ್ಲಿ ಬಾಗಳಿಯ ಶಾಸನಗಳ ಜೊತೆಗೆ ಇದಕ್ಕೆ ಪೂರಕ ಮಾಹಿತಿಯನ್ನೊದಗಿಸುವ ಇತರ ಶಾಸನಗಳನ್ನೂ ಅಧ್ಯಯನಕ್ಕೆ ಬಳಿಸಿಕೊಂಡಿದ್ದಾರೆ.

ಹಾಗೆಯೇ ಜೆ.ಎಂ ಶಿಲ್ಪಾ ಅವರು 'ರಾಯಚೂರು ಜಿಲ್ಲಾ ಶಾಸನ ಸಾಹಿತ್ಯದಲ್ಲಿ ಮಹಿಳೆಯರು', ಎಂಬ ಸಂಪ್ರಬಂಧದವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿ ಎಂ.ಫಿಲ್ ಪದವಿ ಪಡೆದಿದ್ದಾರೆ. ಪ್ರಸ್ತುತ ಪ್ರಬಂಧದಲ್ಲಿ ರಾಯಚೂರು ಜಿಲ್ಲಾ ಶಾಸನ ಸಾಹಿತ್ಯದಲ್ಲಿ ಮಹಿಳೆಯರಿಗೆ ಸಂಬಂದಿಸಿದಂತೆ ಸಾಮಾಜಿಕ, ಆರ್ಥಿಕ, ಧಾರ್ಮಿಕ, ರಾಜಕೀಯ ಪಾತ್ರವನ್ನು ತಿಳಿದುಕೊಳ್ಳುವ ಉದ್ದೇಶವನ್ನು ಹೊಂದಿದ್ದು ಈ ಅಧ್ಯಯನಕ್ಕೆ ಶಾಸನಗಳ ಸಾಹಿತ್ಯಕ ಕೃತಿಗಳನ್ನು ಮತ್ತು ಮೌಖಿಕ ಸಾಹಿತ್ಯವನ್ನು ಮೂಲ ಆಕರಗಳಾಗಿ ಬಳಸಿಕೊಂಡಿದ್ದಾರೆ. ಕರ್ನಾಟಕದಲ್ಲಿ ಶಾಸನೋಕ್ತ ಮಹಿಳೆಯರ ಇತಿಹಾಸ ಕದಂಬರ ಕಾಲದಿಂದ ಪ್ರಾರಂಭವಾಗುತ್ತದೆ. ಅಂದಿನಿಂದ ಸಾಮಾನ್ಯವಾಗಿ ಶಾಸನಗಳ ಒಡಲಲ್ಲಿ ಮೂಡಿ ನಿಂತವರು ಪ್ರಭುವರ್ಗದ ಮತ್ತು ಉನ್ನತ ವರ್ಗದ ಮಹಿಳೆಯರು ಮಾತ್ರ ಇವರಲ್ಲಿ ಚಕ್ರಾಧಿಪತಿಗಳ ರಾಣಿಯರಿಗಿಂತ ಸಾಮಂತ, ಮಾಂಡಳಿಕ, ದಂಡನಾಯಕ, ನಾಳ್ಗಾವುಂಡ ಮತ್ತು ಗಾವುಂಡ ಮನೆತನದ ಮಹಿಳೆಯರು ಹೆಚ್ಚು ಸಂಖ್ಯೆಯಲ್ಲಿ ಕಂಡುಬರುತ್ತಾರೆ. ರಾಯಚೂರು ಜಿಲ್ಲೆಯಲ್ಲಿ ವಿವಿಧ ರಾಜಮನೆತನಗಳು ಆಳ್ವಿಕೆ ನಡೆಸಿದ್ದರೂ ಆಳ್ವಿಕೆ ನಡೆಸಿದವರಲ್ಲಿ ಚಾಲುಕ್ಯ ಅರಸರ ರಾಣಿಯರು ರಾಜ್ಯದ ಸಾಮಾಜಿಕ, ಧಾರ್ಮಿಕ, ರಾಜಕೀಯ ಕ್ಷೇತ್ರಗಳಲ್ಲಿ ಆಸಕ್ತಿ ತೋರುವುದರ ಜೊತೆಗೆ ಸಾಮ್ರಾಜ್ಯದ ವಿವಿಧ ಭಾಗಗಳಲ್ಲಿ ಆಳ್ವಿಕೆ ನಡೆಸುತ್ತಿದ್ದರು ಎಂಬುದನ್ನು ರಾಣಿಯರ ಪ್ರಶಸ್ತಿ ಮತ್ತು ಬಿರುದುಗಳನ್ನು ಶಾಸನಗಳ ಉಲ್ಲೇಖಿತ ಅಧ್ಯಯನಗಳಿಂದ ವಿವರಿಸಿದ್ದಾರೆ. ಹಾಗೂ ಸಾಮಾನ್ಯ ವರ್ಗದ ಮಹಿಳೆಯರಲ್ಲಿ ವೃತ್ತಿಕಾರರಾಗಿ ಅವರು ನಿರ್ವಹಿಸಿದ ಕೆಲಸ ಕಾರ್ಯಗಳು, ಗ್ರಾಮೀಣ ಮಹಿಳೆ ಮತ್ತು ಕೆಳವರ್ಗದ ಮಹಿಳೆಯರ ಸ್ಥಿತಿಗತಿಗಳನ್ನು ಜಾತಿಯಾದಾರಿತ ವರ್ಗದ ನೆಲೆಯಲ್ಲಿ ವಿವರಿಸಿದ್ದಾರೆ. ಜೊತೆಗೆ ಮಹಿಳೆಯರ ಸ್ಥಿತಿಗತಿಗಳಲ್ಲಿ

ಮಹಿಳೆಯರ ಸಾಮಾಜಿಕ ಸೇವೆ, ಶಿಕ್ಷಣ, ಮಹಾಸತಿಯರು, ವೀರರಮಣಿಯರು, ವೇಶ್ಯಯರ ಭಾಗದಲ್ಲಿ ವಿವರಿಸಿದ್ದಾರೆ. ಇಂಥ ಸಾಕಷ್ಟು ಬೇರೆ ಬೇರೆ ವಿಷಯಗಳನ್ನು ಕುರಿತು ಸಂಶೋಧನೆಗಳು ಕಳೆದ ದಶಕಗಳಿಂದ ನಡೆದು ಬಂದಿವೆ. ಆದರೆ ಶಾಸನಗಳಲ್ಲಿರುವ ಪೌರಾಣಿಕ ಅಂಶಗಳನ್ನು ಕುರಿತು ಇಲ್ಲಿಯವರೆಗೆ ಯಾರು ಸಂಶೋಧನೆಯನ್ನು ಕೈಗೊಂಡಿಲ್ಲ. ಆರ್. ಶೇಷಶಾಸ್ತ್ರಿಯವರು 'ಕನ್ನಡ ಶಾಸನಗಳಲ್ಲಿ ಇತಿಹಾಸ ಮತ್ತು ಪುರಾಣ ಪ್ರಜ್ಞೆ' ಎನ್ನುವ ಲೇಖನವನ್ನು ಬರಗೂರು ರಾಮಚಂದ್ರಪ್ಪನವರು ಸಂಪಾಧಿಸಿದ 'ಕನ್ನಡ ಸಾಹಿತ್ಯದಲ್ಲಿ ಚರಿತ್ರೆ ಮತ್ತು ಪುರಾಣ' ಎನ್ನುವ ಕೃತಿಯಲ್ಲಿ ಕನ್ನಡ ಸಾಹಿತ್ಯ ಅಕಾಡೆಮಿಯವರು ಪ್ರಕಟಿಸಿದ್ದಾರೆ. ಇಲ್ಲಿ ಶೇಷಶಾಸ್ತ್ರಿಯವರು "ಪಾಶ್ಚಾತ್ಯರ ಇತಿಹಾಸ ಕಲ್ಪನೆ, ವಾಸ್ತವ ಮತ್ತು ನಿಖರವಾದ ಅಂಕಿ ಅಂಶಗಳಿಂದ ಕೂಡಿದ್ದು, ಕಲ್ಪನಾ ರಹಿತವಾಗಿದ್ದರೆ, ಭಾರತೀಯ ಇತಿಹಾಸ ಕಲ್ಪನೆ ಗತಿಸಿ ಹೋದ ಘಟನೆಗಳನ್ನು, ಬದುಕಿ ಬಾಳಿದ ವ್ಯಕ್ತಿಗಳನ್ನು ಕೇವಲ ಘಟನೆ, ವ್ಯಕ್ತಿಗಳನ್ನಾಗಿ ನೋಡದೆ ಅವುಗಳ ಹಿಂದಿನ ಮೌಲ್ಯಗಳಾಗಿ ಗುರುತಿಸಿ, ಅವುಗಳನ್ನು, ಅವರುಗಳನ್ನು ವಸ್ತು ಸ್ಥಿತಿಗಿಂತಲೂ ಭಿನ್ನವಾದ ಸ್ತರದಲ್ಲಿರಿಸಿ, ಅದನ್ನು ಕಥಾ ರೂಪದಲ್ಲಿ; ಸಾಂಕೇತಿಕವಾದ ರೀತಿಯಲ್ಲಿ ಹೇಳುವ ಧೋರಣೆಯಿಂದ ಕೂಡಿದ್ದಾಗಿದೆ. ಈ ಪ್ರವೃತ್ತಿಯೇ ಹಲವಾರು ಪುರಾಣಗಳ ಸೃಷ್ಟಿಗೂ ಕಾರಣವಾಗಿರಬಹುದು. ಮೇಲೆ ತಿಳಿಸಿದ ಎರಡೂ ಭಿನ್ನ 'ಇತಿಹಾಸ' ನಿರೂಪಣ ವಿಧಾನ, ನಿರ್ಮಾಣ ಮಾರ್ಗಗಳು ಬೇರೆ ಬೇರೆಯಾಗಿದ್ದರೂ ಅವುಗಳ ಹಿಂದೆ ಗತಜೀವನದ ವಿಮರ್ಶೆಯೇ ಮುಖ್ಯವಾದ–ಸಾಮ್ಯ ಅಂಶಗಳು" ಎಂದು ಅಭಿಪ್ರಾಯಿಸುತ್ತಾರೆ. ಜನಪದದ ಹಿನ್ನಲೆಯಲ್ಲಿ ಐತಿಹ್ಯಗಳು ಸಂಗ್ರಹಗೊಂಡಿವೆ. ಹಾಗೆಯೇ ಪುರಾಣ ಮತ್ತು ಐತಿಹ್ಯಗಳು ಪರಿಚಯಾತ್ಮಕ ಲೇಖನಗಳು ಪ್ರಕಟಗೊಂಡಿವೆ. ಅವು ಕೇವಲ ಜಾನಪದೀಯ ನೆಲೆಯವು. ಶಾಸನಗಳಿಗೆ ಸಂಬಂಧಿಸಿದಂತೆ ಐತಿಹ್ಯಗಳನ್ನು ನೋಡುತ್ತಿರುವಲ್ಲಿ ಪ್ರಸ್ತುತ ಮಹಾಪ್ರಬಂಧವು ವಿಶಿಷ್ಟವಾದುದಾಗಿದೆ.

**ಅಧ್ಯಾಯ ೧: ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ ಮತ್ತು ಸಮೀಕ್ಷೆ.**

ಈ ಅಧ್ಯಾಯದಲ್ಲಿ ಪ್ರಸ್ತುತ ಮಹಾಪ್ರಬಂಧದ ಮುಖ್ಯ ಉದ್ದೇಶ ಹಾಗೂ ವ್ಯಾಪ್ತಿಗೆ ಸಂಬಂಧಿಸಿದಂತೆ ತಾತ್ವಿಕ ಚೌಕಟ್ಟನ್ನು ಹಾಕಿಕೊಳ್ಳಲಾಗಿದೆ. ಪೀಠಿಕಾ ಭಾಗದಲ್ಲಿ ಮಹಾಪ್ರಬಂಧದಲ್ಲಿ ಚರ್ಚಿತವಾಗುವ ವಿಚಾರಗಳನ್ನು ಸಂಕ್ಷಿಪ್ತವಾಗಿ ಚರ್ಚಿಸಲಾಗಿದೆ. ಜೊತೆಗೆ ಅಧ್ಯಯನದ ಸಂದರ್ಭದಲ್ಲಿ ಅಳವಡಿಸಿಕೊಳ್ಳಲಾದ ಅಧ್ಯಯನದ ವೈಧಾನಿಕತೆಯನ್ನು ಕುರಿತು ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

**ಅಧ್ಯಾಯ ೨: ಇತಿಹಾಸ ನಿರ್ವಚನೆ.**

ಈ ಅಧ್ಯಾಯದಲ್ಲಿ ಇತಿಹಾಸವನ್ನು ನೋಡುವ ಹಾಗೂ ಕಟ್ಟುವ ನೆಲೆಗಳನ್ನು ಕುರಿತು ಚರ್ಚಿಸಲಾಗಿದೆ. ಅಂದರೆ ಚರಿತ್ರೆಕಾರರ ಸಂಸ್ಕೃತಿ, ಪ್ರದೇಶ, ಭಾಷೆ, ಭಾವನೆ, ಬೌದ್ಧಿಕತೆಗಳು

ಬದಲಾದಂತೆ ಚರಿತ್ರೆಯನ್ನು ನೋಡುವ ಹಾಗೂ ಕಟ್ಟುವ ನೆಲೆಗಳಲ್ಲಿಯೂ ಕೂಡ ಭಿನ್ನತೆಗಳು ಉಂಟಾಗಿವೆ. ಬೇರೆ-ಬೇರೆ ದೇಶದವರು ತಮ್ಮ ನಾಡಿನ ಚರಿತ್ರೆಯನ್ನು ವಿಭಿನ್ನ ರೀತಿಯಲ್ಲಿ ಕಟ್ಟಿ ಬೆಳೆಸಿದ್ದಾರೆ. ಇದನ್ನು ಇತಿಹಾಸ ಲೇಖನಾಶಾಸ್ತ್ರ ಕಲೆಯ ಬೆಳವಣಿಗೆಯಲ್ಲಿ ಗುರುತಿಸಲಾಗಿದೆ. ಇದರ ವಿವರಣೆಯನ್ನು ಓರಿಯಂಟಲಿಸ್ಟರು, ಮಾರ್ಕಿಸ್ಟರು, ಸಬಾಲ್ಟ್ರನಿಷ್ಟರು ಎಂಬ ಉಪಶಿರ್ಷಿಕೆಗಳಿಂದ ಚರ್ಚಿಸಲಾಗಿದ್ದು, ಅವುಗಳು ಕಟ್ಟಿ ಬೆಳೆಸಿದ ವಿಭಿನ್ನ ಮಾದರಿಯ ಚರಿತ್ರೆಗಳನ್ನು ಸಂಕ್ಷಿಪ್ತವಾಗಿ ವಿವರಿಸಲಾಗಿದೆ. ಅಲ್ಲದೆ ಭಾರತಕ್ಕೆ ಭೇಟಿ ನೀಡಿದ ವಿದೇಶಿಯರು ಇಲ್ಲಿನ ಚರಿತ್ರೆಯನ್ನು ಗುರುತಿಸಿದ ಬಗೆಯನ್ನು ಹಾಗೂ ಅವರ ಅಭಿಪ್ರಾಯವನ್ನು ಕುರಿತು ಚರ್ಚಿಸುವುದರ ಜೊತೆಗೆ ಭಾರತೀಯರಿಗೂ ತಮ್ಮದೇ ಆದ ಇತಿಹಾಸ ಲೇಖನ ಕಲೆ ಇತ್ತು ಎಂಬುದನ್ನು ನಿರೂಪಿಸಲಾಗಿದೆ. ಹಾಗೂ ವಿದೇಶಿಯರು ಅಪೇಕ್ಷಿಸುವ ಚರಿತ್ರೆಗೂ ಭಾರತೀಯರಲ್ಲಿರುವ ಚರಿತ್ರೆಗೂ ಸಾಮ್ಯತೆ ಮತ್ತು ವೈಸಾಮ್ಯತೆಗಳನ್ನು ಈ ಅಧ್ಯಾಯದಲ್ಲಿ ಸ್ಪಷ್ಟಪಡಿಸಲಾಗಿದೆ.

**ಅಧ್ಯಾಯ ೩: ಪುರಾಣ, ಐತಿಹ್ಯ, ಹಾಗೂ ಶಾಸನಗಳ ತಾತ್ವಿಕ ಚರ್ಚೆ.**

ಈ ಅಧ್ಯಾಯದಲ್ಲಿ ಪುರಾಣ, ಐತಿಹ್ಯ, ಹಾಗೂ ಶಾಸನಗಳು ಬಿಡಿಧಾರೆಗಳಲ್ಲಿ ಇದ್ದ ಬಗೆ ಮತ್ತು ಪಡೆದ ಸ್ವರೂಪವನ್ನು ಹಾಗೂ ಅವುಗಳ ಮಹತ್ವವನ್ನು ಕುರಿತು ಚರ್ಚಿಸಲಾಗಿದೆ. ಜೊತೆಗೆ ಬಿಡಿ ಬಿಡಿಯಾಗಿ ಇದ್ದಂತಹ ಅಂಶಗಳು ಚರಿತ್ರೆಯ ನಿರ್ಮಾಣ ಕಾಲದಲ್ಲಿ ಹೇಗೆ ಸಮ್ಮಿಳಿತಗೊಂಡಿವೆ ಎಂಬುದನ್ನು ಚರ್ಚಿಸುತ್ತಾ ಇವುಗಳ ಮುಖೇನ ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಳ್ಳಬೇಕಾದ ಸಂದರ್ಭದಲ್ಲಿ ಯಾವ ಬಗೆಯ ಒತ್ತಾಸೆಗಳು ಕೆಲಸ ಮಾಡಿವೆ ಎನ್ನುವುದನ್ನು ಗುರುತಿಸಲಾಗಿದೆ. ಈ ಮೂರು ಪರಿಕಲ್ಪನೆಯಲ್ಲಿ ಪುರಾಣ ಮತ್ತು ಐತಿಹ್ಯ ಮೌಖಿಕ ಪರಂಪರೆಗೆ ಸಂಬಂಧಿಸಿದರೆ ಶಾಸನವು ಲಿಖಿತ ಪರಂಪರೆಗೆ ಸಂಬಂಧಿಸಿದ್ದು ಆದಾಗ್ಯೂ ಈ ಮೂರು ಬಗೆಯ ಆಕರಗಳು ಸಾಂಸ್ಕೃತಿಕ ಚರಿತ್ರೆಯನ್ನು ಅರಿತುಕೊಳ್ಳಲು ಪರಸ್ಪರ ಹೋಲಿಕೆ ಹಾಗೂ ವ್ಯತ್ಯಾಸಗಳೊಂದಿಗೆ ಹೇಗೆ ಒಂದೇ ನೆಲೆಯಲ್ಲಿ ನಿಲ್ಲುತ್ತವೆ ಎನ್ನುವುದನ್ನು ಅಧ್ಯಯನದ ಸಂದರ್ಭದಲ್ಲಿ ಕಂಡುಕೊಳ್ಳಲಾಗಿದೆ. ಈ ಬಗೆಯ ದೃಷ್ಟಿಕೋನವನ್ನು ಸ್ಪಷ್ಟಪಡಿಸಿಕೊಳ್ಳಬೇಕಾದರೆ ಮೊದಲು ಇವುಗಳನ್ನು ಬಿಡಿಬಿಡಿಯಾಗಿ ವಿವೇಚಿಸಿ ಇವುಗಳ ಹೊರತಾದ ಇತಿಹಾಸ ನಿರ್ವಚನೆಯು ಅಪೂರ್ಣವಾದುದು ಎಂಬುದನ್ನು ತಾತ್ವಿಕವಾಗಿ ಚರ್ಚಿಸಲಾಗಿದೆ.

**ಅಧ್ಯಾಯ ೪: ಶಾಸನಗಲ್ಲಿ ಪೌರಾಣಿಕ ಅಂಶಗಳು.**

ಈ ಅಧ್ಯಾಯದಲ್ಲಿ ಶಾಸನಗಳಲ್ಲಿರುವ ಪೌರಾಣಿಕ ಅಂಶಗಳನ್ನು ವಂಶ ಸಂಬಂಧಿ ಪೌರಾಣಿಕ ಅಂಶಗಳು, ವ್ಯಕ್ತಿ ಸಂಬಂಧಿ ಪೌರಾಣಿಕ ಅಂಶಗಳು ಮತ್ತು ಸ್ಥಳ ಸಂಬಂಧಿ ಪೌರಾಣಿಕ ಅಂಶಗಳು ಎಂಬ ಉಪಶಿರ್ಷಿಕೆಯಡಿಯಲ್ಲಿ ಚರ್ಚಿಸಲಾಗಿದೆ. ಯಾವುದೇ ಕಾಲದ ರಾಜಾಶ್ರಯದ

ಶಾಸನಗಳನ್ನು ನೋಡಿದರೂ ಮೊದಲು ದೊರೆಯುವುದು ಆ ರಾಜರ ವಂಶ, ಅವರು ತಮ್ಮ ವಂಶವನ್ನು ಪೌರಾಣಿಕ ವ್ಯಕ್ತಿಗಳು, ದೈವಾಂಶ ಸಂಭೂತರೂ ಆದ ಇಂದ್ರ, ಚಂದ್ರ, ಸೂರ್ಯ ಮುಂತಾದ ದೇವ-ದೇವತೆಗಳೊಡನೆ ಸಮೀಕರಿಸಿಕೊಂಡಿರುವುದನ್ನು ಕಾಣುತ್ತೇವೆ. ಹಾಗೆಯೇ ಅವರ ವಂಶದ ಮೂಲಪುರುಷರೆಲ್ಲರೂ ದೈವಾಂಶವುಳ್ಳವರು. ಇವುಗಳ ಮೂಲ ಉದ್ದೇಶ ಜನರು ತಮ್ಮನ್ನು ದೇವರಂತೆ ಬಾವಿಸಿ, ಅವರುಗಳಿಗೆ ಕೊಡುವ ಗೌರವ, ಭಯ, ಭಕ್ತಿ, ಧನ ತಮಗೂ ನೀಡಬೇಕೆಂಬುದೇ ಆಗಿರುತ್ತದೆ. ಹಾಗೆಯೇ ಸ್ಥಳಪುರಾಣಗಳನ್ನು ಕುರಿತು ಚರ್ಚಿಸಲಾಗುವುದು. ಹೀಗೆ ಶಾಸನಗಳಲ್ಲಿರುವ ಪೌರಾಣಿಕ ಅಂಶಗಳು ಇತಿಹಾಸವನ್ನು ಕಟ್ಟುವಲ್ಲಿ ಹೇಗೆ ಸಹಾಯಕವಾಗಿವೆ ಎಂಬುದನ್ನು ವಿಶ್ಲೇಷಿಸಲಾಗಿದೆ.

**ಅಧ್ಯಾಯ ೫ : ಪುರಾಣಗಳಿಗೆ ಪೂರಕವಾಗಿ ಐತಿಹ್ಯಗಳು**

ಈ ಅಧ್ಯಾಯದಲ್ಲಿ ಪುರಾಣಗಳಂತೆ ಶಾಸನಗಳಲ್ಲಿರುವ ಐತಿಹ್ಯಗಳು ಇತಿಹಾಸವನ್ನು ಕಟ್ಟಲು ಸಹಾಯವಾಗಿವೆ ಎಂಬುದು ಸ್ಥಳ ಪ್ರಧಾನ, ಘಟನಾಪ್ರಧಾನ, ವ್ಯಕ್ತಿಪ್ರಧಾನ ಐತಿಹ್ಯಗಳು ಎಂಬ ಉಪಶೀರ್ಷಿಕೆಗಳಡಿಯಲ್ಲಿ ಚರ್ಚಿಸಲಾಗಿದೆ. ಅಂದರೆ ಯಾವುದೇ ಊರು ಅಥವಾ ಸ್ಥಳ ಅವುಗಳ ಬಗ್ಗೆ ಇರುವ ಪ್ರಚಲಿತ ಅಥವಾ ಪ್ರಾಚೀನ ಕತೆಗಳನ್ನು ಐತಿಹ್ಯ ಎನ್ನುತ್ತೇವೆ. ಈ ಕತೆಗಳು ವಾಸ್ತವಾಗಿ ನಡೆದ ಘಟನೆಗಳೆ ಆಗಿದ್ದು, ಮುಂದೆ ಕಲ್ಪಿತಾಂಶಗಳು ಮಿಳಿತಗೊಂಡು ಬೆಳೆದು ಬಂದಿವೆ. ಎಷ್ಟೋ ವೇಳೆ ಊರಿನ ಮೂಲ ಹೆಸರನ್ನು ವಿವರಿಸಲು ಹೆಸರಿನ ಉಗಮವನ್ನು ಹೇಳಲು ಐತಿಹ್ಯಗಳಿಗೆ ಮೊರೆಹೋಗಬೇಕಾಗುತ್ತದೆ. ಉದಾ: ಕೋಗಲೂರು ಎಂಬ ಊರನ್ನು 'ಕೋಲುರಾಜ' ಎಂಬುವವನು ಆಳುತ್ತಿದ್ದ ಎಂಬ ಐತಿಹ್ಯವನ್ನೇ ನೋಡಬಹುದು. ಕೋಲುರಾಜ ಹೆಸರಿನ ಮೇಲೆ ಕೋಗಲೂರು ಹೆಸರು ಬಂದಿತೆಂದು ವಿವರಿಸುತ್ತಾರೆ. ಇದರಿಂದ ಐತಿಹಾಸಿಕ ವ್ಯಕ್ತಿಯಾದ ಕೋಲುರಾಜನ ಮಾಹಿತಿಯು ಲಭ್ಯವಾಗುತ್ತದೆ. ಹೀಗೆ ಪುರಾಣಗಳಲ್ಲಿ ರಾಜರುಗಳನ್ನು ದೇವತೆಗೆ ಸಮವಾಗಿ ನಿರೂಪಿಸುವುದನ್ನು ಕಾಣುತ್ತೇವೆ. ಆದರೆ ಐತಿಹ್ಯ ಜನಸಾಮಾನ್ಯರ ನಡುವೆ ಹುಟ್ಟಿ ಬೆಳೆದುದರಿಂದ ಜನಸಾಮಾನ್ಯರ ಮಾಹಿತಿಯನ್ನು ಒದಗಿಸುತ್ತದೆ ಎಂಬುದನ್ನು ನಿರೂಪಿಸಲಾಗಿದೆ.

**ಅಧ್ಯಾಯ ೬ : ಸಮಾರೋಪ**

ಈ ಅಧ್ಯಾಯದಲ್ಲಿ ಪ್ರಸ್ತುತ ಪ್ರಬಂಧದಿಂದ ಕಂಡುಕೊಂಡ ಫಲಿತಗಳನ್ನು ಸಂಕ್ಷಿಪ್ತವಾಗಿ ಮಂಡಿಸಲಾಗಿದೆ. ಅನುಬಂಧದಲ್ಲಿ ಅಧ್ಯಯನಕ್ಕೆ ಒಳಪಡಿಸಿರುವ ಕೃತಿಗಳನ್ನು ಕೊಡಲಾಗಿದೆ. ಹಾಗೆಯೇ ಅಧ್ಯಯನಕ್ಕೆ ಪೂರಕವಾಗಿರುವಂತಹ ಶಾಸನಗಳ ಛಾಯಚಿತ್ರಗಳನ್ನೂ ಮತ್ತು ವಕ್ತೃಗಳ ಹೆಸರುಗಳನ್ನು ನೀಡಲಾಗಿದೆ.

**ಅಡಿಟಪ್ಪಣಿಗಳು**

೧. Ibid -1531083 ಅಂಬಳಿ ಕೂಡ್ಲಿಗಿ (ತಾ) ಬಳ್ಳಾರಿ ಜಿಲ್ಲೆಯ ಸಾಂಸ್ಕತಿಕ ಇತಿಹಾಸ. ಲೇ. ಜೆ.ಎಂ.ನಾಗಯ್ಯ. ಪುಟ–೧.

೨. ಸಂ.ದೇವರಕೊಂಡಾರೆಡ್ಡಿ., ಕನ್ನಡ ವಿಶ್ವವಿದ್ಯಾಲಯ, ಶಾಸನ ಸಂಪುಟ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ಮುನ್ನುಡಿಯಿಂದ.

## ಅಧ್ಯಾಯ – ಎರಡು

# ಇತಿಹಾಸ ನಿರ್ವಚನೆ

೨.೧ ಓರಿಯಂಟಲಿಸ್ಟರು

೨.೨ ಮಾರ್ಕ್ಸಿಸ್ಟರು

೨.೩ ಸಬಾಲ್ಟ್ರನಿಸ್ಟರು

## ಅಧ್ಯಾಯ–ಎರಡು

# ಇತಿಹಾಸ ನಿರ್ವಚನೆ

ಚರಿತ್ರೆ ಅನೇಕ ಘಟನೆಗಳ ಆಗರ. ಇದರ ಆಳ ಅಳತೆಗೆ ನಿಲುಕದ್ದು. ಆದರೂ ಮಾನವನಿಗೆ ತನ್ನ ಚರಿತ್ರೆಯ ಹಿಂದಿನ ಪರಂಪರೆಯನ್ನು ತಿಳಿದುಕೊಳ್ಳುವ ಹಂಬಲ ಇದ್ದೇ ಇರುತ್ತದೆ. ತನ್ನ ಪೂರ್ವಜರು ಏನನ್ನು ಮಾಡಿದರು? ಏತಕ್ಕೆ ಮಾಡಿದರು? ಅದರ ಪ್ರಸ್ತುತತೆಯೇನು? ಎಂದೆಲ್ಲಾ ತಿಳಿದುಕೊಳ್ಳುವ ಮೂಲಕ ತನ್ನ ಪೂರ್ವಜರ, ತನ್ನ ನಾಡಿನವರ ಹಿರಿಮೆ–ಗರಿಮೆಯನ್ನು ಹೆತ್ತಿ ಹಿಡಿಯಲು ಹಂಬಲಿಸುತ್ತಾನೆ. ಇದಕ್ಕಾಗಿ ಅವನು ಚರಿತ್ರೆಯ ಪುಟಗಳನ್ನು ಪರಾಮರ್ಶಿಸಲೇ ಬೇಕಾಗುತ್ತದೆ.

ಅಲೆಮಾರಿಯಾಗಿ ಬೇಟೆಯಾಡುತ್ತಾ ಜೀವನ ಸಾಗಿಸುತ್ತಿದ್ದ ನಮ್ಮ ಪುರಾತನರು ಬದುಕಲು ಬೇಕಾದ ಮೂಲ ಸವಲತ್ತುಗಳನ್ನು ನೀಡುವ ನದಿಬಯಲುಗಳಲ್ಲಿ ವಾಸಿಸತೊಡಗುವ ಮೂಲಕ ಪ್ರಕೃತಿಗೆ ಮುಖಾಮುಖಿಯಾದರು. ಉತ್ತರಿಸಲಾಗದ ಪ್ರಶ್ನೆಗಳಿಗೆ ಉತ್ತರಗಳನ್ನು ಕಂಡುಕೊಳ್ಳಲು (ಉದಾ: ಹುಟ್ಟು, ಸಾವು) ಹಾಗೂ ತಮ್ಮಲಿರುವ ಭಯವನ್ನು ದೂರಪಡಿಸಿಕೊಳ್ಳಲೋ ಎಂಬಂತೆ ದೇವರುಗಳ ಕಲ್ಪನೆಯನ್ನು ಹುಟ್ಟುಹಾಕಿ ತಮ್ಮದೆ ಆದ ಕಟ್ಟುಪಾಡುಗಳನ್ನು ವಿಧಿಸಿಕೊಂಡು ಅದಕ್ಕೆ ಬದ್ಧರಾಗಿ ಜೀವಿಸತೊಡಗಿದರು. ಸಮುದಾಯಗಳು ಬೆಳೆದಂತೆಲ್ಲಾ ಸಾಮರಸ್ಯವನ್ನು ತಂದುಕೊಳ್ಳುವ ಸಲುವಾಗಿ ಸಾಮಾಜಿಕ ಸಂಸ್ಥೆಗಳನ್ನು ಕಟ್ಟಿಕೊಂಡರು. ಹಾಗೂ ತಮ್ಮ ಬದುಕಿಗೆ ಹೊಸ–ಹೊಸ ಅರ್ಥಗಳನ್ನು ಹುಡುಕತೊಡಗಿದರು. ಈ ನಿಟ್ಟಿನಲ್ಲಿ ವಿಭಿನ್ನ ಜ್ಞಾನ ವಲಯಗಳಲ್ಲಿ ತತ್ವಜ್ಞಾನಿಗಳು, ವಿದ್ವಾಂಸರು, ದಾರ್ಶನಿಕರು, ಅಪಾರ ಸಂಖ್ಯೆಯಲ್ಲಿ ಕ್ರಿಯಾಶೀಲರಾದರು ಅವರಲ್ಲಿ ಚರಿತ್ರೆಯನ್ನು ಕಟ್ಟುವಿಕೆಯ ಕ್ರಿಯೆ ಮಹತ್ವವಾದದು.

ಮನುಷ್ಯನು ಅಲೆಮಾರಿಯಾದ ಜೀವನದಿಂದ ಹಿಡಿದು ಆಧುನೀಕರಣಕ್ಕೆ ಒಳಗಾದ ಮಾನವನವರೆಗೆ ಸಾವಿರಾರು ಶತಮಾನಗಳ ನಿರಂತರ ಪ್ರಯತ್ನದಿಂದ ಚರಿತ್ರೆಯನ್ನು ಕಟ್ಟುತ್ತಾ ಬಂದಿದ್ದಾನೆ. ಸಂಸ್ಕೃತಿ, ಪ್ರದೇಶ, ಭಾಷೆ, ಭಾವನೆ, ಬೌದ್ಧಿಕತೆಗಳು ಬದಲಾದಂತೆ ಚರಿತ್ರೆಯನ್ನು ನೋಡುವ ಹಾಗೂ ಕಟ್ಟುವ ನೆಲೆಗಳಲ್ಲಿಯೂ ಕೂಡ ಭಿನ್ನತೆಗಳು ಉಂಟಾಗಿವೆ. ಅಂದರೆ ಬೇರೆ ಬೇರೆ ದೇಶದವರು ತಮ್ಮ ನಾಡಿನ ಚರಿತ್ರೆಯನ್ನು ವಿಭಿನ್ನ ರೀತಿಯಲ್ಲಿ ಕಟ್ಟಿ ಬೆಳೆಸಿದ್ದಾರೆ. ಅದರ ವಿವರಣೆಯನ್ನು ಹೀಗೆ ನೋಡಬಹುದು.

ಪೌರಾತ್ಯರಲ್ಲಿ ಚರಿತ್ರೆ ಕಟ್ಟುವ ಸಂಪ್ರದಾಯವನ್ನು ಮೊದಲು ಚೀನಿಯರು ಪ್ರಾರಂಭಿಸಿದರು. ಇವರು ಬಹಳ ಹಿಂದಿನಿಂದಲೂ ಸಂಪ್ರದಾಯ, ಧಾರ್ಮಿಕ ಕ್ರಿಯೆಗಳು ಹಾಗೂ ಗಮನಾರ್ಹವೆನಿಸಿದ ಘಟನೆಗಳನ್ನು ಕುರಿತು ದಾಖಲು ಮಾಡುತ್ತಿದ್ದರು. ಕ್ರಮೇಣ ದಿನನಿತ್ಯದ ಘಟನೆಗಳ ದಾಖಲೆಗಳನ್ನೂ ಬರೆದಿಡಲು ಪ್ರಾರಂಭಿಸಿದರು. ಇವುಗಳನ್ನು ಋತುಗಳ ಚರಿತ್ರೆಯಾಗಿ ನೋಡಲಾರಂಭಿಸಿದರು.

ಪಾಶ್ಚಾತ್ಯರಲ್ಲಿ ವಿಶೇಷವಾಗಿ ಗ್ರೀಕರು ಅದರಲ್ಲೂ ಅಯೋನಿಯಾದ ಜನರು ಚರಿತ್ರೆ ನಿರ್ಮಾಣದ ಪರಂಪರೆಗೆ ಆಸ್ತಿಭಾರವನ್ನು ಹಾಕಿದರು. ಇವರು ಗದ್ಯಾತ್ಮಕ ಬರವಣಿಗೆಯಿಂದ ಚರಿತ್ರೆ ಲೇಖನ ಪರಂಪರೆಗೆ ಒಂದು ದೊಡ್ಡ ಬೌದ್ಧಿಕ ವಿಸ್ತಾರವನ್ನು ಒದಗಿಸಿದರು.

ಗ್ರೀಕರಂತೆ ರೋಮನ್ನರು ರೋಮನ್ ಚರಿತ್ರೆಯನ್ನು ಕಟ್ಟಿ ಬೆಳೆಸಿದರು. ಇವರಂತೆ ಅರಬ್ಬರಲ್ಲಿಯೂ ಚರಿತ್ರೆಯನ್ನು ಬರೆಯುವ ಸಂವೇದನೆಯನ್ನು ಕಾಣುತ್ತೇವೆ. 'ಇಸಬಾದ' ಹಾಗೂ 'ಪ್ರಯಾಣ ವೃತ್ತಾಂತ' ಗಳು ಅವರು ಚರಿತ್ರೆ ಲೇಖನ ಪರಂಪರೆಗೆ ನೀಡಿರುವ ಮಹತ್ವದ ಪ್ರಥಮ ಪ್ರಮುಖ ಕಾಣಿಕೆಗಳು.

ಮಧ್ಯಯುಗದ ಚರಿತ್ರೆ ಲೇಖನ ಪರಂಪರೆಯಲ್ಲಿ ಚರ್ಚ್ ಸಂಪ್ರದಾಯಕ್ಕೂ ಮಹತ್ವದ ಸ್ಥಾನವಿದೆ. ಕ್ರೈಸ್ತಧರ್ಮದ ಅನುಯಾಯಿಗಳು ಚರಿತ್ರೆಯನ್ನು ಸೃಷ್ಟಿಸಲು ಪ್ರಾರಂಭಿಸಿದರು. ಕ್ರೈಸ್ತಧರ್ಮದ ಉಗಮ ಮತ್ತು ಬೆಳವಣಿಗೆಯೇ ಒಂದು ದೊಡ್ಡ ಚರಿತ್ರೆ ಎಂಬುದರ ಹಿನ್ನಲೆಯಲ್ಲಿ ಚರಿತ್ರೆಯನ್ನು ಕಟ್ಟಿಕೊಡುವುದನ್ನು ಇವರ ಬರವಣಿಗೆಯಲ್ಲಿ ಕಾಣಬಹುದು.

ಚರಿತ್ರೆಯ ನಿರ್ಮಾಣವು ಬದಲಾವಣೆಗೆ ಒಳಗಾದದ್ದು ಆಧುನಿಕ ಕಾಲದಲ್ಲಿ, ಪುನರುಜ್ಜೀವನ ಹಾಗೂ ಜ್ಞಾನೋಧಯ ಚಳುವಳಿಗಳು ಚರಿತ್ರೆಯನ್ನು ಗ್ರಹಿಸುವ ಕ್ರಮದಲ್ಲಿ ಗುರುತರವಾದ ಬದಲಾವಣೆಗಳನ್ನು ತಂದವು. ಧರ್ಮ, ಮತೀಯ ಕೇಂದ್ರಿತ ಚರಿತ್ರೆಯನ್ನು ಕಟ್ಟುವಿಕೆಯ ಬದಲಿಗೆ, ಜಾತ್ಯಾತೀತ ದೃಷ್ಟಿಕೋನಗಳ ಚರಿತ್ರೆ ಕಟ್ಟುವಿಕೆಯು ಪ್ರಾರಂಭವಾಯಿತು. ಇದನ್ನೇ ಇನ್ನೊಂದು ರೀತಿಯಲ್ಲಿ ಹೇಳುವುದಾದರೆ ಲೌಕಿಕ ದೃಷ್ಟಿಕೋನಗಳಿಂದ ಪ್ರೇರಿತವಾದ ಚರಿತ್ರೆ

ಪ್ರಾರಂಭವಾಯಿತು. ಈ ಕಾಲದ ಚರಿತ್ರೆ ಕಟ್ಟುವಿಕೆಯ ಮುಖ್ಯ ಕಾಳಜಿ ಸಾಮಾಜಿಕ ವಾಸ್ತವಗಳನ್ನು ಕಟ್ಟಿಕೊಡುವುದಾಗಿತ್ತು. ಮಾನವೀಯ ನೆಲೆಗಳನ್ನು ಈ ಪರಂಪರೆಗಳು ಶೋಧಿಸತೊಡಗಿದವು. ಹತ್ತೊಂಭತ್ತು ಮತ್ತು ಇಪ್ಪತ್ತನೆಯ ಶತಮಾನಗಳಲ್ಲಿ ಚರಿತ್ರೆ ಕಟ್ಟುವಿಕೆಯ ಕ್ರಿಯೆಯು ಒಂದು ದೊಡ್ಡ ಬೌದ್ಧಿಕ ಚಟುವಟಿಕೆಯಾಯಿತು. ವಿಭಿನ್ನ ದೃಷ್ಟಿಕೋನಗಳಿಂದ ಚರಿತ್ರೆಯನ್ನು ವ್ಯಾಖ್ಯಾನಿಸುವ ಪರಂಪರೆ ಬೃಹದಾಕಾರವಾಗಿ ಬೆಳೆಯತೊಡಗಿತು. ಆಧುನಿಕ ಚರಿತ್ರೆ ಲೇಖನ ಪರಂಪರೆಯು ಅಗಸ್ಟ್ ಕಾಮ್ಟೆ, ಎಡ್ವರ್ಡ ಗಿಬ್ಬನ್, ಥಾಮಸ್ ಕಾರ್ಲೈಲ್, ಹೆನ್ರಿ ಥಾಮಸ್ ಬಕಲ್, ಅರ್ನಾಲ್ಡ್ ಟಾಯ್ನಬೀ, ರ್‍ಯಾಂಕೇ, ಸ್ಪೆಂಗ್ಲರ್ ಮುಂತಾದ ಶ್ರೇಷ್ಠ ಚರಿತ್ರೆಕಾರರನ್ನು ಹುಟ್ಟುಹಾಕಿತು. ಆದರೆ ಚರಿತ್ರೆಯು ಉತ್ಕೃಷ್ಠ ಚಲನಶೀಲತೆಯನ್ನು ಪಡೆದುಕೊಂಡಿದ್ದು ಹೆಗಲ್ ಮತ್ತು ಕಾರ್ಲ್‌ಮಾರ್ಕ್ಸ್‌ರ ಲೇಖನಗಳಲ್ಲಿ ಚರಿತ್ರೆಯೊಂದಿಗಿನ ನಿರಂತರ ಸಂವಾದದಿಂದ. ಚರಿತ್ರೆಗೆ ಇರಬಹುದಾದ ದೊಡ್ಡಶಕ್ತಿಯನ್ನು ಜಗತ್ತಿಗೆ ಪರಿಚಯಿಸಿದವರು ಕಾರ್ಲ್‌ಮಾರ್ಕ್ಸ್. ಅನೇಕ ದೇಶಗಳ ಒಟ್ಟಾರೆ ವ್ಯವಸ್ಥೆಗಳನ್ನು ಬದಲಿಸಲು ಇವರ ಸಿದ್ಧಾಂತಗಳು ಕಾರಣವಾದುದನ್ನು ಚರಿತ್ರೆಯ ಪುಟಗಳೇ ಹೇಳುತ್ತವೆ. ಈ ಮೇಲೆ ತಿಳಿಸಿದ ಎಲ್ಲ ಚರಿತ್ರೆಕಾರರು ಚರಿತ್ರೆಯನ್ನು ಯಾವ ಯಾವ ದೃಷ್ಟಿಕೋನಗಳಿಂದ ಅರ್ಥೈಸಿಕೊಳ್ಳಲು ಪ್ರಯತ್ನಿಸಿದ್ದಾರೆಂಬುದನ್ನು ಚರ್ಚಿಸಲಾಗಿದೆ. ಅಲ್ಲದೆ ಭಾರತೀಯರೂ ಕೂಡ ಚರಿತ್ರೆಯನ್ನು ಕಟ್ಟುತ್ತಲೇ ಬಂದಿದ್ದಾರೆ ಎಂಬುದನ್ನು ಸ್ಪಷ್ಟಪಡಿಸಲಾಗಿದೆ. ಭಾರತೀಯರು ಪಾಶ್ಚಾತ್ಯರ ಮಾದರಿಯಲ್ಲಿ ಚರಿತ್ರೆಯನ್ನು ಬರೆಯದಿರಬಹುದು. ಆದರೆ ಭಾರತೀಯ ಶಾಸನ, ಸಾಹಿತ್ಯ, ಪುರಾಣ, ಐತಿಹ್ಯಗಳು ಯಾವತ್ತು ಚರಿತ್ರೆಯೊಂದಿಗೆ ಮುಖಾಮುಖಿಯಾಗಿ ಬೆಳೆದುಬಂದಿದೆ. ಈ ಆಕರಗಳೇ ಒಂದು ಚಾರಿತ್ರಿಕ ಘಟ್ಟದ ಸೃಷ್ಟಿಯಾದ್ದರಿಂದ ಅವುಗಳಲ್ಲಿ ಯಥೇಚ್ಚ ಐತಿಹಾಸಿಕ ಅಂಶಗಳಿವೆ. ಜೈನ, ಬೌದ್ಧ ಹಾಗೂ ವೈದಿಕ ಸಾಹಿತ್ಯದಲ್ಲಿ ಅನೇಕರು ರಚಿಸಿರುವ ಧರ್ಮಶಾಸ್ತ್ರ, ಪುರಾಣ, ವೇದೋಪನಿಷತ್ತುಗಳಲ್ಲಿ ಇತರೆ ಕಾವ್ಯ ಮತ್ತು ಗದ್ಯ ಸಾಹಿತ್ಯದಲ್ಲಿ, ಪರಂಪರಗತವಾಗಿ ಬಂದಿರುವ ಮೌಖಿಕ ಸಾಹಿತ್ಯದಲ್ಲಿ ಶಾಸನ, ಐತಿಹ್ಯ ಮೊದಲಾದವುಗಳಲ್ಲಿ ಚರಿತ್ರೆಯ ಅಂಶಗಳು ಅವಿನಭಾವವಾಗಿ ಸೇರಿಕೊಂಡಿವೆ. ಇವುಗಳಿಂದ ಚರಿತ್ರೆಯನ್ನು ಕಟ್ಟುವಾಗ, ಬರೆಯುವ ಲೇಖಕನಿಗೆ ಇವುಗಳನ್ನು ಬೇರೆಯದೆ ರೀತಿಯಲ್ಲಿ ನೋಡುವ ಚಾರಿತ್ರಿಕ ವಿಮರ್ಶೆಯ ಪ್ರಜ್ಞೆ ಇರಬೇಕಾಗುತ್ತದೆ.

ಆರಂಭದಲ್ಲಿ ಧರ್ಮದ ಹಿನ್ನಲೆಯಲ್ಲಿ ಪ್ರಾರಂಭವಾದ ಚರಿತ್ರೆಯ ಬರವಣಿಗೆಯು ನಂತರದ ದಿನಗಳಲ್ಲಿ ರಾಜ–ಮಹಾರಾಜರ ಪ್ರತಿಷ್ಠಿತ ವರ್ಗದವರ ಪಾಲಾಗಿ ಆನಂತರದ ದಿನಗಳಲ್ಲಿ ಅಲಕ್ಷಿತ ವರ್ಗಕ್ಕೂ ಚಾಚಿಕೊಂಡದ್ದು ಸ್ಥೂಲವಾಗಿ ವಿವರಿಸುವ ಪ್ರಯತ್ನವನ್ನು ಪ್ರಸ್ತುತ ಅಧ್ಯಾಯದಲ್ಲಿ ಮಾಡಲಾಗಿದೆ. ಹಾಗೂ ಭಾರತಕ್ಕೆ ಭೇಟಿ ನೀಡಿದ ವಿದೇಶಿಯರು ಇಲ್ಲಿನ ಚರಿತ್ರೆ ಗುರುತಿಸಿದ ಬಗೆಯನ್ನು ಹಾಗೂ ಅವರ ಅಭಿಪ್ರಾಯಗಳನ್ನು ಕುರಿತು

ವಿವರಿಸಲಾಗಿದ್ದು, ವಿದೇಶಿಯರು ಅಪೇಕ್ಷಿಸುವ ಚರಿತ್ರೆಗೂ ಭಾರತೀಯರ ಚರಿತ್ರೆಗೂ ಇರುವ ಸಾಮ್ಯತೆ ಮತ್ತು ವೈಸಾಮ್ಯತೆಯನ್ನು ಕುರಿತು

೨.೧ ಓರಿಯಂಟಲಿಸ್ಟರು

೨.೨ ಮಾರ್ಕ್ಸಿಸ್ಟರು

೨.೩ ಸಬಾಲ್ಟ್ರನಿಸ್ಟರು ಎಂದು ಮೂರು ವಿಭಾಗಗಳಲ್ಲಿ ಚರ್ಚಿಸಲಾಗಿದೆ.

**೨.೧ ಓರಿಯಂಟಲಿಸ್ಟರ ಇತಿಹಾಸ ಗ್ರಹಿಕೆ.**

ಗ್ರಹಿಸುವಿಕೆಗೆ ಅನುಗುಣವಾಗಿ ಬೇರೆ-ಬೇರೆ ದೇಶದ ಚರಿತ್ರೆಕಾರರು ಚರಿತ್ರೆಯನ್ನು ವಿವಿಧ ಮಾದರಿಯಲ್ಲಿ ಕಟ್ಟಿದ್ದಾರೆ. ಅವುಗಳನ್ನು ಹೀಗೆ ಗ್ರಹಿಸಬಹುದು. ಯುರೋಪಿನ ಇತಿಹಾಸ ಲೇಖನ ಪ್ರಾರಂಭವಾಗುವುದು ಗ್ರೀಕರಿಂದ, ವಾಸ್ತವಿಕ ಇತಿಹಾಸ ರಚನಾಕಲೆಯನ್ನು ಕಲಿತವರಲ್ಲಿ ಗ್ರೀಕರು ಮೊದಲಿಗರು. ಅದರ ಉದ್ದೇಶಗಳು, ಕರ್ತವ್ಯಗಳು ಮತ್ತು ನಿಯಮವನ್ನು ಅವರು ಅರಿತಿದ್ದರು. ತತ್ವಜ್ಞಾನ ಮತ್ತು ವಿಜ್ಞಾನಗಳಿಗೆ ಜನ್ಮವಿತ್ತಂತೆ ಇತಿಹಾಸಕ್ಕೆ ಜನ್ಮವಿತ್ತವರು ಕೂಡ ಗ್ರೀಕರೇ.. ಯುರೋಪಿನ ಇತಿಹಾಸ ಲೇಖನ ಇದಕ್ಕಿಂತ ಹಿಂದೆ ಹೋಗುವುದಿಲ್ಲ.

ನಿಸರ್ಗದೊಡಗೂಡಿ ಸರಳ ಜೀವನವನ್ನು ನಡೆಸುತ್ತಿದ್ದ ಪ್ರಾಚೀನ ಗ್ರೀಕರು ತಮ್ಮ ಜೀವನವು ಚೈತನ್ಯರೂಪಿಗಳೊಂದಿಗೆ ವ್ಯವಹಾರದಲ್ಲಿ ತೊಡಗಿದೆ ಎಂದು ಭಾವಿಸಿದ್ದರು. ಈ ಚೈತನ್ಯರೂಪಿಗಳಲ್ಲಿ ದೇವತೆಗಳು ಸರ್ವೋತ್ತಮರಾಗಿದ್ದರು. ಸಮಾಜಜೀವನವು ಧರ್ಮದಿಂದ ನಿರ್ಬಂಧಿತವಾಗಿತ್ತು. ಅವರು ಪ್ರಾಪಂಚಿಕ ಜೀವನವನ್ನು ಪ್ರೀತಿಸುತ್ತಿದ್ದರಲ್ಲದೆ ಮಾನವರ ಇತಿಹಾಸಗಳು ದೇವರ ಹತೋಟಿಯಲ್ಲಿದೆ ಎಂದು ನಂಬಿದ್ದರು. ವ್ಯಕ್ತಿ ಸಂಬಂಧವಿಲ್ಲದ ವಿದಿ-ದೇವತೆಗಳು ಮಾನವರ ಮೇಲೆ ಪ್ರಭಾವ ಬೀರುತ್ತಿದ್ದವು. ಬುಡಕಟ್ಟಿನ ಕಲಿಗಳು ಭಾಗಶ: ದೈವಾಂಶ ಸಂಭೂತರೆಂದು ನಂಬಿದ್ದರು ಎಂಬ ವಿವರಣೆಯು ಇತಿಹಾಸದಲ್ಲಿ ಪ್ರಮುಖ ವ್ಯಕ್ತಿಗಳಿಗೆ ನೀಡಿರುವ ಮಾನ್ಯತೆಯನ್ನು ಸೂಚಿಸುತ್ತದೆ.

ಯುಗಗಳ ಕಲ್ಪನೆಯು ಗ್ರೀಕರಿಗೆ ತಿಳಿದಿತ್ತು. ಹಿಸಿಯೋಡ್ ತನ್ನ ಕೃತಿ 'ವರ್ಕ್ ಅಂಡ್ ಡೇಸ್'(Work And Days)ನಲ್ಲಿ ಸ್ವರ್ಣಯುಗ, ರಜತಯುಗ, ಕಂಚಿನಯುಗ, ವೀರಯುಗ ಮತ್ತು ಕಬ್ಬಿಣದಯುಗ ಎಂಬ ಮಾನವ ಕುಲದ ಐದು ಯುಗಗಳನ್ನು ಹೆಸರಿಸಿದ್ದಾನೆ. ಪಾಪವನ್ನೂ ಸೂಚಿಸಿದ್ದಾನೆ. ಇತಿಹಾಸದಲ್ಲಿ ಪಾಪವು ದೇವರನ್ನು ವಿರೋಧಿಸುವುದು ಮತ್ತು ದೇವರಿಗೆ ಅವಿಧೇಯತೆಯನ್ನು ತೋರುವುದರಲ್ಲಿ ಆಧಾರಿತವಾಗಿದೆ ಎಂದು ಸೂಚಿಸಿದ್ದಾನೆ.

ಗ್ರೀಸ್‌ನಲ್ಲಿ ಇತಿಹಾಸ ಸಾಹಿತ್ಯವು ವೃತ್ತಾಂತ ರೂಪಕ, ಲಾವಣಿ ಮತ್ತು ಗೀತೆಗಳಲ್ಲಿ ಗೋಚರಕ್ಕೆ ಬಂದಿತು. ಗದ್ಯಾತ್ಮಕ ಚರಿತ್ರೆ ಲೇಖಕರು ಪುರಾಣ ಕಥೆಯಿಂದ ಇತಿಹಾಸಕ್ಕೆ

ಸಂಕ್ರಮಣವನ್ನು ಅಂಕಿಸುತ್ತಾರೆ. ಸ್ಥಳೀಯ ವಿಷಯವು ಅವರ ವಿಶೇಷ ವಿಷಯವಾಗಿತ್ತು. ಸ್ಥಳೀಯ ಪುರಾಣ ಕಥೆಗಳು ಇದಕ್ಕೆ ಆಧಾರವಾಗಿತ್ತು. ಸತ್ಯವನ್ನು ಹೇಳುವುದು ಅವರ ಉದ್ದೇಶವಾಗಿತ್ತು. ಈ ತತ್ವದ ಮುಂದುವರಿಕೆಯು ಹೆಚ್ಚು ಗುರುತರವಾಗಿದೆ. ಇದು ಗ್ರೀಕ್ ಇತಿಹಾಸಕ್ಕೆ ಘನತೆಯನ್ನು ಕೊಡುತ್ತದೆ. ಗ್ರೀಕರು ಎಲ್ಲಾ ವ್ಯಕ್ತಿಗಳು ಮತ್ತು ಎಲ್ಲಾ ಪರಿಮಾಣಗಳ ಮೇಲೆ ಇತಿಹಾಸವನ್ನು ರಚಿಸಿದರು. ಅವರ ಇತಿಹಾಸಗಳು ಮಾನವರು, ವಸ್ತುಗಳು, ಪ್ರಸಿದ್ಧ ರಾಷ್ಟ್ರಗಳು, ಸಣ್ಣ ನಗರಗಳು, ಪ್ರಪಂಚ ವೃತ್ತಾಂತಗಳು, ಸ್ಥಳೀಯ ವೃತ್ತಾಂತಗಳು, ರಾಜಕೀಯ, ಸಾಹಿತ್ಯಕ ಮತ್ತು ಸೈನಿಕ ಸ್ವಾನುಭವದ ಇತಿಹಾಸಗಳು ಇವುಗಳಿಗೆ ಸಂಬಂಧಿಸಿವೆ. ಗ್ರೀಕರು ಯಾವುದನ್ನು ಮರೆಯಲಿಲ್ಲ ಮತ್ತು ಯಾವುದನ್ನೂ ಅಲಕ್ಷಿಸಲಿಲ್ಲ.

ವಾಸ್ತವಿಕ ಇತಿಹಾಸವನ್ನು ರಚಿಸುವ ಕಲೆಯಲ್ಲಿ ಗ್ರೀಕರು ಮೊದಲಿಗರಾಗಿದ್ದಾರಾದರೂ, ಅವರು ಸಮಕಾಲೀನ ಇತಿಹಾಸದಲ್ಲಿ ಆಸಕ್ತರಾಗಿರಲಿಲ್ಲ ಎಂಬ ಅಂಶವು ಕುತೂಹಲ ಕೆರಳಿಸುವಂತಹುದಾಗಿದೆ. ಪ್ರಾಚೀನ ಇತಿಹಾಸದ ಬಗ್ಗೆ ಉದಾಸೀನರಾಗಿದ್ದ ಅವರು, ತಮ್ಮ ಮೂಲಗಳಲ್ಲಿಯೂ ಸಹ ಆಸಕ್ತರಾಗಿರಲಿಲ್ಲ. ತಾವು ಏನಾಗಿದ್ದೇವೆಂಬುದರಲ್ಲಿ ಸಮಾಧಾನ ತಳೆದಿದ್ದರು. ಕೆಲವು ತಲೆಮಾರುಗಳಲ್ಲಿ ಮಾತ್ರ ಆಸಕ್ತರಾಗಿದ್ದರು. ದೇವತೆಗಳಿಂದ ತಾವು ಜನಿಸಿದವರೆಂದು ಅವರು ತಿಳಿದಿದ್ದರು.

**ಹೆರೋಡೊಟಸ್(ಕ್ರಿ.ಪೂ.೪೮೪–೪೨೫)**

ಹೆರೋಡೊಟಸ್ ವೈಜ್ಞಾನಿಕ ಇತಿಹಾಸದ ಜನಕರಾಗಿದ್ದಾರೆ. ಇವರು ಇತಿಹಾಸವು ವೈಜ್ಞಾನಿಕವಾಗಿದೆ ಎಂದೂ ಮತ್ತು ವೈಜ್ಞಾನಿಕವಾಗಿರಬಲ್ಲದೆಂದು ಪರಿಗಣಿಸಿದ್ದರು.

ಗ್ರೀಸ್ ಮತ್ತು ಪರ್ಷಿಯನ್ನರ ನಡುವಣ ಯುದ್ಧ ಹೆರೋಡೊಟಸ್ ಅವರ ಇತಿಹಾಸದ ವಿಷಯವಸ್ತು. ಅವರ ಕೃತಿ "ಪರ್ಷಿಯನ್ ವಾರ್ಸ್" ತಾನು ವೈಯಕ್ತಿಕ ಸಂಬಂಧ ಹೊಂದಿದ್ದ ಪ್ರತ್ಯಕ್ಷ ದರ್ಶಿಗಳ ದೃಷ್ಟಾಂತದ ಮೇಲೆ ಈ ಕೃತಿ ಆಧಾರಿತವಾಗಿದೆ. ಸಂಶೋಧಕರಾಗಿ ಅವರು ಪ್ರತ್ಯಕ್ಷ ಸಾಕ್ಷಿಗಳನ್ನು ಪಾಟೀ ಸವಾಲುಗೊಳಿಸಿ ನಿಶ್ಚಿತವಾದ ಸಂಗತಿಗಳನ್ನು ಪಡೆಯುತ್ತಿದ್ದರು. ಇದು ಅವರ ವೃತ್ತಾಂತಗಳ ಅಸಾಧಾರಣ ನಿಶ್ಚಿತತೆ ಮತ್ತು ಏಕರೂಪತೆಗೆ ಸಾಕ್ಷಿಯಾಗಿದೆ. ಆದರೆ ತಮ್ಮ ನಿರೂಪಣೆಯನ್ನು ಪ್ರತ್ಯಕ್ಷದರ್ಶಿಗಳ ಅವಧಿಗೆ ಸೀಮಿತಗೊಳಿಸಿ ಇತಿಹಾಸ ಬಳಕೆದಾರರ ಮೇಲೆ ಒಂದು ಸಂಕುಚಿತ ಯಥಾದೃಷ್ಟಿಯನ್ನು ಹೊರಸುತ್ತಾರೆ. ಮಿಗಿಲಾಗಿ ಮಾನವನ ಜೀವನವು ಭಗವಂತನ ನಿಯಂತ್ರಣಕ್ಕೆ ಒಳಪಟ್ಟಿದೆ ಎಂದು ಅವರು ನಂಬಿದ್ದರು. ದೇವವಾಣಿಗಳು, ಕನಸುಗಳು ಮೊದಲಾದವುಗಳ ಮೂಲಕ ಭಗವಂತನು ಮಾನವರಿಗೆ ತಿಳಿವು ನೀಡುತ್ತಾನೆಂದು ನಂಬಿದ್ದರೂ ವಿಧಿಯ ಅಣತೆಯಿಂದ ತಪ್ಪಿಸಿಕೊಳ್ಳುವುದು ದೇವರಿಗೂ ಅಸಾಧ್ಯವೆಂದು ಅವರು ಹೇಳುತ್ತಾರೆ.

ದಂತಕಥೆಗಳನ್ನು ವೈಜ್ಞಾನಿಕ ಇತಿಹಾಸವಾಗಿ ಪರಿವರ್ತಿಸುವ ಕಲೆಯನ್ನು ಹೆರೋಡೊಟಸ್ ಪರಿಶೋಧಿಸಿದರು. ಇತಿಹಾಸವು ಪೌರಾಣಿಕ ಅಥವಾ ಧಾರ್ಮಿಕವಾಗಿರದೆ ಮಾನವನ ಕಲ್ಯಾಣದ ಉದ್ದೇಶವನ್ನು ಹೊಂದಿದೆ ಎಂದು ಅವರು ನಂಬಿದ್ದರು. 'ಮಾನವನಿಗೆ ಮಾನವನ ಅರಿವನ್ನು ತಂದುಕೊಡಲು ಮಾನವನ ಕಾರ್ಯಗಳನ್ನು ವಿವರಿಸುವುದೇ ಇತಿಹಾಸದ ಉದ್ದೇಶ. ಮಾನವರು ಏನು ಮಾಡಿದರು ಮತ್ತು ಏಕೆ ಮಾಡಿದರು ಎಂಬುದನ್ನು ಶೋಧನೆ ಮಾಡುವುದು ಇತಿಹಾಸದ ಕರ್ತವ್ಯ' ಎಂಬುದಾಗಿ ಅಭಿಪ್ರಾಯಪಡುತ್ತಾರೆ. ವಿವರಿಸಲ್ಪಟ್ಟಿರುವ ಘಟನೆಗಳು ಮಾನವೀಯತೆಯಿಂದ ಪರಿಗಣಿಸಲ್ಪಟ್ಟಿವೆ. ಈ ಘಟನೆಗಳು ಮಾನವರ ಕೃತ್ಯಗಳಾಗಿದ್ದು ಅವರು ಹಾಗೆ ಮಾಡಲು ಕಾರಣಗಳಿದ್ದವು ಎಂಬ ದೃಷ್ಟಿಕೋನದಿಂದ ಪರೀಕ್ಷಿಸಲ್ಪಟ್ಟಿವೆ. ಈ ಕಾರಣಗಳು ಇತಿಹಾಸಕಾರನಿಗೆ ಸಂಬಂಧಿಸಿವೆ. ಹೆರೋಡೊಟಸ್ ಪುರಾವೆಗಳನ್ನು ತಿಳಿಸುವುದಿಲ್ಲವಾದ್ದರಿಂದ ಪುರಾವೆಯ ಬಗ್ಗೆ ಆತನ ಗ್ರಂಥದಿಂದ ತಿಳಿಯಬೇಕಾಗುತ್ತದೆ.

**ಥೂಸಿಡೈಡ್ಸ್**

ಹೆರೋಡೊಟಸ್ ಅವರ ಕೃತಿಯಿಂದ ಪ್ರಭಾವಿತರಾದ ಥೂಸಿಡೈಡ್ಸ್ ಯುದ್ಧವನ್ನು ತಮ್ಮ ಕೃತಿಯ ವಸ್ತು ವಿಷಯವಾಗಿ ಆರಿಸಿಕೊಂಡರು. ಪುರಾತನ ಗ್ರೀಸಿನ ಕುತಾರ್ಕಿಕರ ಪ್ರಭಾವಕ್ಕೊಳಗಾದ ಅವರು ಅಧಿಕಾರ ಮತ್ತು ಸಂಪ್ರದಾಯದ ಪೂರ್ವಗ್ರಹವಿಲ್ಲದೆ ಸಂಗತಿಗಳ ಪರಿಗಣನೆಗೆ ಮತ್ತು ವಿಮರ್ಶೆ ಹಾಗೂ ರಾಜಕೀಯ ಮತ್ತು ನೀತಿಶಾಸ್ತ್ರಗಳನ್ನು ವಿಶ್ಲೇಷಣೆ ಮಾಡಿ ಜಗತ್ತಿನಲ್ಲಿರುವ ಪ್ರತಿಯೊಂದನ್ನು ತಾರ್ಕಿಕವಾಗಿ ವಿಮರ್ಶಿಸುವ 'ಆಧುನಿಕ' ಚಿಂತನಾ ಮಾರ್ಗದಲ್ಲಿ ಪರಿಣಿತರಾದರು. ಈ ಪರಿಣತೆ ಅವರ ಕೃತಿ 'ದಿ ಹಿಸ್ಟರಿ ಆಫ್ ದಿ ಪೆಲೊಪೊನೀಶಿಯನ್ ವಾರ್' ನಲ್ಲಿ ಕೇವಲ ಯುದ್ಧದ ಮತ್ತು ಯುದ್ಧದಲ್ಲಿ ತೊಡಗಿರುವ ರಾಜ್ಯಗಳ ಸಂಬಂಧದ ಇತಿಹಾಸಕ್ಕೆ ಸೀಮಿತವಾಗಿದೆ. ಈ ಕಾರಣಕ್ಕಾಗಿ ಅವರನ್ನು ರಾಜಕೀಯ ಇತಿಹಾಸದ ಸ್ಥಾಪಕರೆಂದು ಪರಿಗಣಿಸಲಾಗಿದೆ.

ಥೂಸಿಡೈಡ್ಸ್ ನಿಷ್ಪತೆಯ ಬಗ್ಗೆ ಭಾವೋದ್ರೇಕ ಹೊಂದಿದ್ದರು. ಮಿಥ್ಯೆಗೆ ಅವಕಾಶ ಕೊಡಲಿಲ್ಲ. ಮಾನವ ಇತಿಹಾಸವು ಸ್ಪಷ್ಟವಾಗಿ ಮಾನವರ ವ್ಯವಹಾರವೆಂದು ದೃಢವಾಗಿ ನಂಬಿದ್ದರು. ವೈಯಕ್ತಿಕ ಹರಟೆಗಳು ಮತ್ತು ಐತಿಹ್ಯಗಳನ್ನು ತಿರಸ್ಕರಿಸಿದರು. ವಾಸ್ತವಿಕ ಆಧಾರಗಳು ಲಭ್ಯವಿಲ್ಲದಿದ್ದಾಗ ವಿಪರ್ಯಯ ಪರ್ಯಾಲೋಚನೆಯ ಕ್ರಮದಲ್ಲಿ ತೊಡಗಿ, ಹಿಮ್ಮುಖದ ಪರ್ಯಾಲೋಚನೆಯಿಂದ ಅಜ್ಞಾತವಾದುದ್ದನ್ನು ತಿಳಿದಿದ್ದರಿಂದ ಅರಿಯಲು ಪ್ರಯತ್ನಿಸಿದರು. ಮಾನವ ಸ್ವಭಾವದ ಸಾರ್ವತ್ರಿಕ ಗುಣಗಳ ಬೆಳಕಿನಲ್ಲಿ ವೈಯಕ್ತಿಕ ಘಟನೆಗಳನ್ನು ವಿವರಿಸುವ ಇತಿಹಾಸ ರಚಿಸುವಲ್ಲಿ ಸಫಲರಾದರು. ರಾಂಕೆ ತಿಳಿಸಿರುವಂತೆ "ಮಾನವ ಸ್ವಭಾವದ ನೈತಿಕ

ವಿಧಿನಿಯಮದಲ್ಲಿ ಮಾನವ ಇತಿಹಾಸದ ಪ್ರವರ್ತಕ ಉದ್ದೇಶಗಳು ಅಂತರ್ಭೂತವಾಗಿದೆ ಎಂದು ತಿಳಿದುದು ಬಹುಶಃ ಥೂಸಿಡೈಡ್ಸ್ ಸಾಧಿಸಿದ ನಿಜವಾದ ಮುನ್ನಡೆಯಾಗಿದೆ". ಅವರ ಗ್ರಂಥಗಳಲ್ಲಿ ಮಿತಿಗಳನ್ನು ಗುರುತಿಸಬಹುದಾದರೂ ವಿಷಯ ನಿರೂಪಣೆಯಲ್ಲಿ ಥೂಸಿಡೈಡ್ಸ್ ಹೆರೋಡೊಟಸ್ ಅವರಿಗಿಂತ ಹೆಚ್ಚು ವೈಜ್ಞಾನಿಕವಾಗಿ ತೋರುತ್ತಾರಲ್ಲದೆ ಇತಿಹಾಸ ದರ್ಶನದ ಹೇಳಿಕೆಯನ್ನು ನೀಡುವಾಗ ಅವರಿಗಿಂತ ಸ್ಪಷ್ಟವಾಗಿದ್ದಾರೆ. ಇತಿಹಾಸವು ಪ್ರಚಲಿತದಲ್ಲಿರುವ ರೂಪಕ್ಕೆ ಮಾರ್ಪಡಿಸಲು ಒಂದು ಲಂಬವಾದ ಹಾಗೂ ನಿರ್ಣಾಯಕವಾದ ಹೆಜ್ಜೆಯಿರಿಸಿದ ಏಕೈಕ ವ್ಯಕ್ತಿ ಥೂಸಿಡೈಡ್ಸ್ ಎಂಬುದನ್ನು ಅಲ್ಲಗಳೆಯಲಾಗುವುದಿಲ್ಲ.

ಥೂಸಿಡೈಡ್ಸ್ ನಂತರದ ಇತಿಹಾಸ ಲೇಖನದಲ್ಲಿ ಇತಿಹಾಸಕಾರನ ನಿರೀಕ್ಷೆಯು ಕಾಲಾವಧಿಯಲ್ಲಿ ವಿಸ್ತಾರವಾಯಿತು. ಪ್ಲೇಟೊ ಸಂವಾದಗಳು ಇತಿಹಾಸದ ಸ್ವರೂಪ ಮತ್ತು ಮಹತ್ವ ಕುರಿತಾಗಿ ಕೆಲವು ಸೂಚನೆಗಳನ್ನಿತ್ತವು. ಮಾನವನ ಗುಣಗಳು ಪ್ರಾಣಿಗಳಿಗೆ ಸಮವೆಂದು ವಿವೇಚಿಸಿದರು. ಅರಿಸ್ಟಾಟಲ್‌ರವರು ವಿವೇಕವು ಮಾನವನನ್ನು ಪ್ರಾಣಿಗಳಿಂದ ಪ್ರತ್ಯೇಕಿಸುತ್ತದೆಂದು ತಿಳಿಸಿದರು. ಇತಿಹಾಸದಲ್ಲಿ ಇದ್ದಿರಬಹುದಾದ ಅಥವಾ ನಿಜವಾಗಿ ಇದ್ದ ಸರ್ಕಾರಗಳ ರೂಪಗಳ ಸಮೀಕ್ಷೆಯನ್ನು ಅವರು ನಡೆಸಿದರು. ಇದು ಇತಿಹಾಸಕಾರನ ನೋಟವನ್ನು ವಿಸ್ತರಿಸಲು ಮತ್ತು ಗ್ರೀಕ್ ಇತಿಹಾಸ ಲೇಖನವನ್ನು ಮರೆಮಾಡಿದ್ದ ವೈಶಿಷ್ಟ್ಯತೆಯನ್ನು ಹೋಗಲಾಡಿಸಲು ಸಹಾಯಕವಾಯಿತು. ಇತಿಹಾಸ ಲೇಖನದ ಮುಂದಿನ ಬೆಳವಣಿಗೆಯನ್ನು ರೋಮನ್ ಸಂಪ್ರದಾಯದಲ್ಲಿ ಕಾಣಬಹುದು.

ರೋಮನ್ನರು ಬುದ್ಧಿ ವಿಷಯಕ ಜನಕರಾಗಿರದೆ ವ್ಯವಹಾರ ದೃಷ್ಟಿಯುಳ್ಳವರಾಗಿದ್ದರು. ಅವರು ಕುಟುಂಬ ಜೀವನವನ್ನು ಗೌರವಿಸುತ್ತಿದ್ದರು. ಮನೆಯ ಸಂಸಾರದ ಧಾರ್ಮಿಕ ಸಂಸ್ಕಾರಗಳು ಮಹತ್ವದ್ದಾಗಿದ್ದವು. ದೇವತೆಗಳ ಬಗ್ಗೆ ಪೌರಾಣಿಕ ಕಥೆಗಳನ್ನು ಸೃಷ್ಟಿಸುವಲ್ಲಿ ಅವರು ಆಸಕ್ತರಾಗಿರಲಿಲ್ಲ, ಬದಲಿಗೆ ಐತಿಹಾಸಿಕ ದಾಖಲುಗಳಲ್ಲಿ ಹೆಚ್ಚು ಆಸಕ್ತರಾಗಿದ್ದರು.

**ಪೊಲಿಬಿಯಸ್ (ಕ್ರಿ.ಪೂ.೨೦೪-೧೨೨)**

ರೋಮನ್ ಇತಿಹಾಸ ಲೇಖನ ಕಲೆಯು ಗ್ರೀಕ್ ದೇಶದವನಾದ ಪೊಲಿಬಿಯಸ್‌ನಿಂದ ಪ್ರಾರಂಭವಾಗುತ್ತದೆ. ಪೊಲಿಬಿಯಸ್ ಅವರು ಇತಿಹಾಸವನ್ನು ಗ್ರೀಕ್ ಇತಿಹಾಸಕಾರರಂತೆ ಒಂದು ಪೀಳಿಗೆಗೆ ಸೀಮಿತಗೊಳಿಸದೆ, ಐದು ತಲೆಮಾರುಗಳವರೆಗೆ ಅಂದರೆ ೧೫೦ ವರ್ಷಗಳವರೆಗೆ ವಿಸ್ತರಿಸಿದರು. ಇದು ರೋಮನ್ನರ ಐತಿಹಾಸಿಕ ಪ್ರಜ್ಞೆಗೆ ಅನುಗುಣವಾಗಿತ್ತು. ಒಂದು ನಿಜವಾದ ಇತಿಹಾಸದ ದೃಷ್ಟಿ ಸಮಸ್ತವನ್ನೂ ಅದಕ್ಕೆ ಸಂಬಂಧಿಸಿದ ಇತರ ಭಾಗಗಳೊಡನೆ ಸಮೀಕ್ಷಿಸುವುದು ಅಗತ್ಯವೆಂದು ಅವರು ಸೂಚಿಸಿದರು.

ರೋಮನ್ನರು ಹೆಚ್ಚು ಕಡಿಮೆ ಆಗ ವಾಸಿಸುತ್ತಿದ್ದ ಸಮಸ್ತ ಪ್ರಪಂಚವನ್ನು ತಮ್ಮ ಸರಕಾರದ ಆಧೀನಕ್ಕೆ ಹೇಗೆ ಒಳಪಡಿಸಿಕೊಂಡರೆಂಬುದನ್ನು ಪ್ರಮಾಣಿಸಿ ವಿಚಾರಿಸುವದರಲ್ಲಿ ಆವರು ಆಸಕ್ತನಾಗಿದ್ದರು. ಗತಿಸಿದ ಕಾಲದೊಂದಿಗೆ ಅವರ ಅಖಂಡತೆಯ ಬಗ್ಗೆ ರೋಮನ್ನರ ಅರಿವು, ಅವರ ರಾಷ್ಟ್ರೀಯ ಚೇತನ ಮತ್ತು ಅವರ ಪ್ರಾಚೀನ ಸ್ಮಾರಕಗಳನ್ನು ಶ್ರದ್ಧೆಯಿಂದ ಜೋಪಾನ ಮಾಡಿರುವುದು ಇವು ಸಿದ್ಧಪಡಿಸಿದ ವಿಷಯಗಳನ್ನು ಒದಗಿಸಿದವು. ಆದರೆ ಈ ಮೂಲಾಧಾರಗಳನ್ನು ಉಪಯೋಗಿಸಿಕೊಳ್ಳುವಾಗ ಪೊಲಿಬಿಯಸ್ ವಿಮರ್ಶಾತ್ಮಕ ಕಾರ್ಯ ಪ್ರವೃತ್ತಿಯನ್ನು ಅನುಸರಿಸುತ್ತಾರೆ. ಇತಿಹಾಸ ದಾಖಲೆಗಳಲ್ಲಿ ಮೂಢನಂಬಿಕೆಗಳನ್ನು ಕಡೆಗಣಿಸಿ, ವ್ಯವಹಾರ ದೃಷ್ಟಿಯಿಂದ ಪರಿಗಣಿಸಿ ಬರೆಯುತ್ತಾರೆ.

ಪೊಲಿಬಿಯಸ್ "ಇತಿಹಾಸ" ಎಂಬ ಪದವನ್ನು ಯಾವುದಾದರೂ ರೀತಿಯ ಅನ್ವೇಷಣೆ ಎಂಬ ಅರ್ಥದಲ್ಲಿ ಉಪಯೋಗಿಸದೆ, ಸಾರ್ವತ್ರಿಕ ಮೌಲ್ಯವುಳ್ಳ ಚಿಂತನೆಯ ಒಂದು ರೂಪವೆಂದು ಆಧುನಿಕ ಅರ್ಥದಲ್ಲಿ ಬಳಸಿದ್ದಾರೆ. ಇತಿಹಾಸವು ರಾಜಕೀಯ ಜೀವನಕ್ಕೆ ತರಬೇತಿ ಕೇಂದ್ರವಾಗಿದ್ದುದರಿಂದ ಅಧ್ಯಯನಕ್ಕೆ ಯೋಗ್ಯವಾದುದೆಂದು ಅವರು ಭಾವಿಸಿದ್ದರು. ಇತಿಹಾಸದ ಉದ್ದೇಶವು ಓದುಗರ ಮನೋರಂಜನೆಯಾಗಿರದೆ ಅವರ ಆತ್ಮವನ್ನು ಸುಧಾರಿಸುವುದು ಮತ್ತು ಇತಿಹಾಸದಲ್ಲಿ ನಡೆದುಹೋದ ದುರಂತಗಳು ಭವಿಷ್ಯತ್ತಿನಲ್ಲಿ ನಮಗೆ ಎದುರಾದಾಗ ಅವುಗಳನ್ನು ಧೈರ್ಯದಿಂದ ಎದುರಿಸಲು ಸಹಾಯಕವಾಗುತ್ತದೆ. ಭವಿಷ್ಯತ್ತಿನ ಈ ಕಲ್ಪನೆಯು ಇತಿಹಾಸಕ್ಕೆ ದೃಢಸಂಕಲ್ಪದ ಹೊಸ ಅರ್ಥವನ್ನು ಕೊಡುತ್ತದೆ.

ಇತಿಹಾಸಕಾರನಿಗೆ ಮೂರು ವಿಷಯಗಳು ಅಗತ್ಯವೆಂದು ಅವರು ಸಮರ್ಥಿಸಿದರು. ೧. ಭೌಗೋಳಿಕ ಪರಿಜ್ಞಾನ ೨. ಯುದ್ಧವೂ ಸೇರಿದಂತೆ ಪ್ರಾಯೋಗಿಕ ರಾಜಕೀಯದ ಪರಿಜ್ಞಾನ ಮತ್ತು ೩. ಇತಿಹಾಸದ ಲಿಖಿತ ಆಧಾರಗಳ ಸಂಗ್ರಹಣ, ವರ್ಗೀಕರಣ ಮತ್ತು ಅವುಗಳ ಪರ್ಯಾಲೋಚನೆ. ಇತಿಹಾಸವು ಉತ್ಪ್ರೇಕ್ಷೆಗಳಿಂದ ಕೂಡಿರಬಾರದು ಮತ್ತು ಇತಿಹಾಸಕಾರನು ವಿಶ್ವಾಸಕ್ಕೆ ಯೋಗ್ಯನಾಗಿರಬೇಕೆಂದು ಅವರು ಪ್ರತಿಪಾದಿಸಿದರು. ಒಟ್ಟಿನಲ್ಲಿ ತಮ್ಮ ಇತಿಹಾಸದತ್ತ ರೋಮನ್ನರ ಕಣ್ಣು ತೆರೆಸಿದವರಲ್ಲಿ ಪೊಲಿಬಿಯಸ್ ಮೊದಲಿಗರಾಗಿದ್ದಾರೆ.

### ಲಿವಿ (ಕ್ರಿ.ಪೂ.೫೦–ಕ್ರಿ.ಶ.೧೭)

ಲಿವಿ ಅವರ "ಹಿಸ್ಟರಿ ಆಫ್ ರೋಮ್" ಕೃತಿಯು ರೋಮ್ ನಗರ ಸ್ಥಾಪನೆಯಾದ ದಿನದಿಂದ ಅವರ ಕಾಲದವರೆಗಿನ ವ್ಯಾಪ್ತಿಯನ್ನು ಹೊಂದಿದೆ. ಎಲ್ಲಾ ರೋಮನ್ನರಂತೆ ಲಿವಿಯೂ ಸಹ ಇತಿಹಾಸವೂ ಪ್ರಭೋಧಕವಾಗಿರಬೇಕು, ನೀತಿಯನ್ನು ಉಪದೇಶಿಸಬೇಕು ಎಂದು ದೃಢವಾಗಿ ನಂಬಿದ್ದರು. ಅದು ಪೌರಾಯ ಸದ್ಗುಣಗಳನ್ನು ಬೋಧಿಸಬೇಕು ಮತ್ತು

ದೇಶಭಕ್ತಿಯನ್ನು ಪ್ರವರ್ದಿಸಬೇಕೆಂಬುದು ಅವರ ಆಶಯವಾಗಿತ್ತು. ಈ ಅಂಶಗಳು ರೋಮನ್ನರ ಇತಿಹಾಸದ ಪ್ರಧಾನ ಗುಣಗಳಾಗಿವೆ.

ಲಿವಿಯ 'ರೋಮ್ ಇತಿಹಾಸ'ವು ದೀರ್ಘವಾದ ಯುಗಕ್ಕೆ ಸಂಬಂಧಿಸಿದ್ದು ಸವಿಸ್ತಾರವಾಗಿದೆ. ಪ್ರಾಚೀನ ರೋಮನ್ನರ ಇತಿಹಾಸದ ಸಂಪ್ರದಾಯಿಕ ದಾಖಲುಗಳನ್ನು ಜೋಡಿಸಿ ಒಂದು ಅಖಂಡ ವೃತ್ತಾಂತವನ್ನು ರಚಿಸಿದ್ದಾರೆ. ಒಬ್ಬ ತತ್ವಜ್ಞಾನವುಳ್ಳ ಇತಿಹಾಸಕಾರರಾಗಿದ್ದ ಲಿವಿಯು ವಿಮರ್ಶಾತ್ಮಕ ಇತಿಹಾಸಕಾರರೆಲ್ಲದಿದ್ದರೂ ನಿಶ್ಚಿತತೆಗೆ ಉದಾಸೀನರಾಗಿರಲಿಲ್ಲ. ಆದರೆ ಈ ನಿಶ್ಚಿತತೆಯನ್ನು ಗೊತ್ತುಪಡಿಸುವ ಸಲುವಾಗಿ ಮೂಲಸಂಶೋಧನೆ ಮಾಡಲಿಕ್ಕಾಗಲಿ ಅಥವಾ ವಿಮರ್ಶಾತ್ಮಕ ಪರಿಶ್ರಮ ಪಡುವುದಕ್ಕಾಗಲೀ ಸಿದ್ಧರಿರಲಿಲ್ಲ. ಅವರ ಗ್ರಂಥದ ಅಪರಿಮಿತ ವಿಷಯವಸ್ತುಗಳ ರಾಶಿಯು ಅವರ ಮೇಲೆ ಮೀತಿಮಿರಿದ ಭಾರವನ್ನು ಹೊರಿಸಿದವು. ಅವುಗಳನ್ನು ಕ್ರಮಪಡಿಸುವುದಾಗಲೀ ಅಥವಾ ಸಂಯೋಜಿಸುವುದಾಗಲೀ ಅವರಿಗೆ ಸಾಧ್ಯವಾಗುತ್ತಿರಲಿಲ್ಲ. ಈ ಕಾರಣದಿಂದಾಗಿ ಅವರ ಗ್ರಂಥದಲ್ಲಿ ಅಸಂಗತವಾದ ಅಸಂಖ್ಯಾತ ದೋಷಗಳು ಕಂಡು ಬರುತ್ತವೆ. ಆದರೆ ಮೂಲಾಧಾರಗಳನ್ನು ಸಂಗ್ರಹಿಸುವಲ್ಲಿ ಅವರು ಹಲವಾರು ತೊಂದರೆಗಳನ್ನು ಎದುರಿಸಬೇಕಾಯಿತು. ಅವರಿಗೆ ಹೆಚ್ಚಾಗಿ ಲಿಖಿತ ಪುರಾವೆಗಳು ದೊರೆಯಲಿಲ್ಲ. ಸೆನೆಟ್‌ನ ಪತ್ರಾಗಾರವು ಅವರಿಗೆ ಅಸಾಧ್ಯವಾಗಿತ್ತು. ಸಾಧ್ಯವಾದಾಗ ಹಳೆಯ ವಿಧಗಳ ಮೂಲಗ್ರಂಥಗಳನ್ನು ಪರೀಕ್ಷಿಸಿದ ಅವರು ವಾಡಿಕೆಯಲ್ಲಿಲ್ಲದ ಆ ಭಾಷೆಯ ಸ್ವರೂಪವನ್ನು ಅರ್ಥಮಾಡಿಕೊಳ್ಳಲಾರದೆ ದೂರುತ್ತಾರೆ. ಅಲ್ಲದೆ ಭೂಗೋಳಶಾಸ್ತ್ರ ಮತ್ತು ಸ್ಥಳವರ್ಣನೆಗೆ ಅವರು ಉದಾಸೀನರಾಗಿದ್ದರು. ಒಬ್ಬ ಬರಹಗಾರರಾಗಿ ಅವರ ಬಲ ಹಾಗೂ ಸೊಗಸು ಶೋಭಾಯಮಾನವಾದ ವಿವರಣೆ ಮತ್ತು ಸ್ವರೂಪದರ್ಶಕ ಸಂವೇದನೆಯ ಮೇಲೆ ಒರಗಿದೆ. ಅವರ ಈ ಗುಣವನ್ನು "ಲಿವಿಯ ಚಿತ್ರಕ್ಕೆ ಪುಟ" ಎಂಬ ಬೈರನ್‌ರ ವಾಕ್ಚಾರವು ಸಂಕ್ಷಿಪ್ತಗೊಳಿಸುತ್ತದೆ. ಒಬ್ಬ ಇತಿಹಾಸಕಾರರಾಗಿ ಅವರ ಪ್ರಮುಖ ಗುಣಗಳು ಅವರ ವರ್ಣನಾತ್ಮಕ ಶಕ್ತಿ ಮತ್ತು ಸಾಹಿತ್ಯಕ ಭಾವಚಿತ್ರದಲ್ಲಿ ಅಂತರ್ಭೂತವಾಗಿದೆ. ಅವರ ಈ ಕಡೆಯ ಗುಣವು ಜೀವನ ಚರಿತ್ರೆಗೆ ಅವರು ತೋರುವ ಒಲವಿನಲ್ಲಿ ವ್ಯಕ್ತವಾಗುತ್ತದೆ.

**ಟ್ಯಾಸಿಟಸ್(ಕ್ರಿ.ಶ.೫೪–೧೨೦)**

ರೋಂ ದೇಶದ ಮತ್ತೊಬ್ಬ ಪ್ರಸಿದ್ಧ ಇತಿಹಾಸಕಾರರಾದ ಇವರು ಡಯಲಾಗ್ ಆನ್ ಆರೇಟರ್ಸ್, ಲೈಫ್ ಆಫ್ ಅಗ್ರಿಕೋಲ, ಜರ್ಮನಿಯ, ಆನಲ್ಸ್ ಮತ್ತು ಡಿಸ್ಟೋರಿಯ ಎಂಬ ಕೃತಿಗಳನ್ನು ರಚಿಸಿದರು. ಅವರು ತಮ್ಮ ಸಂಶೋಧನೆಯನ್ನು ರೋಮನ್ ಇತಿಹಾಸದ ಚಿಕ್ಕ ಅವಧಿಗೆ ಮಿತಿ ಗೊಳಿಸಿದರು. ಆ ಅವಧಿಯು ಆಪತ್ತುಗಳಲ್ಲಿ ಶ್ರೀಮಂತವಾಗಿತ್ತು. ಮತ್ತು ಶಾಂತಿಯೂ ಸಹ ದಿಗಿಲಿನಿಂದ ಕೂಡಿತ್ತು. ಆತನ ಗ್ರಂಥಗಳಾದ 'ಹಿಸ್ಟರಿ' ಮತ್ತು 'ಆನಲ್ಸ್'ಗಳಲ್ಲಿ

ಅವರ ಆಸಕ್ತಿಯೂ ಇತಿಹಾಸವು ಜನತೆಯ ವೈಯಕ್ತಿಕ ಗುಣಗಳು, ಅವರ ನಡತೆಗಳ ಶಕ್ತತೆ ಮತ್ತು ಅಶಕ್ತತೆ ಅವರ ದೃಷ್ಟಿಕೋನದ ವ್ಯಾಪ್ತಿ ಅಥವಾ ಅಜ್ಞಾನ ಮತ್ತು ಅವರ ಸದ್ಗುಣ ಮತ್ತು ದುರ್ಗುಣಗಳನ್ನು ಅವಲಂಬಿಸಿದೆ ಎಂದು ವರ್ಣಿಸುವದರಲ್ಲಿ ಕೇಂದ್ರಿಕೃತವಾಗಿರುತ್ತದೆ. ಟ್ಯಾಸಿಟಸ್ ಇತಿಹಾಸದಲ್ಲಿ ನಡತೆಯ ಪರಿಣಾಮವನ್ನು ವ್ಯಕ್ತಪಡಿಸುವ ನೈತಿಕ ಇತಿಹಾಸಕಾರ ರಾಗಿದ್ದಾರೆ. ಅವರು ಶ್ರದ್ಧಾಯುಕ್ತ ಚಿಂತಕಾರಾಗಿರುವುದಕ್ಕಿಂತ ಲಾಕ್ಷಣಿಕವಾಗ್ಮಿಯಾಗಿದ್ದಾರೆ. ಅವರು ವಿವರಿಸುತ್ತಿರುವ ಅನುಭವಗಳನ್ನು ಮನಸ್ಸಿನಲ್ಲಿ ಪುನರ್ ಅನುಭವಿಸಿ ವೈಜ್ಞಾನಿಕ ರೀತಿಯ ಇತಿಹಾಸ ರಚನೆಗೆ ತೊಡಗಲಿಲ್ಲ. ಅವರ ವ್ಯಕ್ತಿಗಳು ಹೊರ ಜಗತ್ತಿನ ಸದ್ಗುಣ ಮತ್ತು ದುರ್ಗುಣಗಳ ಪ್ರತೀಕಗಳಾಗಿದ್ದಾರೆ. ಅವರ ತೀರ್ಪುಗಳೂ ಸಹ ಪ್ರಾಪಂಚಿಕ ಸ್ಥಿತಿಗಳ ಮೇಲೆ ಆಧಾರಿತವಾಗಿವೆ.

ಟ್ಯಾಸಿಟಸ್‌ನ ಮರಣದೊಂದಿಗೆ ಸತ್ವಯುತ ಇತಿಹಾಸದ ಬರವಣಿಗೆಯು ಕೊನೆಗೊಂಡಿತಲ್ಲದೆ ಸಮಸ್ತ ಶ್ರೇಷ್ಠ ಲ್ಯಾಟಿನ್ ಸಾಹಿತ್ಯವೂ ಅಂತ್ಯಗೊಂಡಿತು. ಒಟ್ಟಿನಲ್ಲಿ ಅವರ ನಂತರದ ಇತಿಹಾಸ ಲೇಖನ ಶೈಲಿಯಲ್ಲಿ ಹೆಚ್ಚಿನ ಬದಲಾವಣೆಗಳು ಕಂಡು ಬರುವುದಿಲ್ಲ. ಇವರ ನಂತರದ ಬರವಣಿಗೆಯು ಚರ್ಚ್ ಸಂಪ್ರದಾಯದಲ್ಲಿ ವ್ಯಕ್ತವಾಗಿದೆ.

### ಚರ್ಚ್ ಸಂಪ್ರದಾಯ

ಇತಿಹಾಸ ಲೇಖನದ ಮುಂದಿನ ಬೆಳವಣಿಗೆ ಚರ್ಚ್ ಸಂಪ್ರದಾಯದಲ್ಲಿ ವ್ಯಕ್ತವಾಗಿದೆ. ಕ್ರಿ.ಶ ಐದನೇಯ ಶತಮಾನದಿಂದ ಹದಿಮೂರನೆಯ ಶತಮಾನದವರೆಗೆ ಪಾಶ್ಚಾತ್ಯ ದೇಶಗಳಲ್ಲಿ ಇತಿಹಾಸ ರಚನೆಯು ಕ್ರೈಸ್ತ ಪುರೋಹಿತ ವರ್ಗ, ಕ್ರೈಸ್ತ ಸನ್ಯಾಸಿಗಳು ಮತ್ತು ಕ್ರೈಸ್ತ ವಿದ್ವಾಂಸರುಗಳಿಗೆ ಸೀಮಿತವಾದುದ್ದರಿಂದ ಮತ್ತು ಆ ಧರ್ಮಕ್ಕೆ ಸಂಬಂಧಿಸಿದುದರಿಂದ ಇದನ್ನು ಕ್ರೈಸ್ತ ಸಂಪ್ರದಾಯ ಎಂದು ಕರೆಯಲಾಗಿದೆ. ಈ ಸಂಪ್ರದಾಯದ ಲೇಖಕರು ಕ್ರೈಸ್ತ ಧರ್ಮವೇ ನಿಜವಾದ ಧರ್ಮವೆಂದು ನಂಬಿದ್ದರಲ್ಲದೆ, ಅದು ಮಾನವ ವಿಶಿಷ್ಟ ಚಟುವಟಿಕೆಗಳಿಗೆ ಪ್ರಧಾನವಾದ ಹಾಗೂ ಕಾರಣಿಭೂತವಾದ ಸಂಗತಿಯೆಂದು ಭಾವಿಸಿದ್ದರು.

ಯೆಹೂದ್ಯರ ಧರ್ಮವು ಕ್ರೈಸ್ತ ಧರ್ಮಕ್ಕೆ ದೇವರಿಗೆ ಸಂಬಂಧಿಸಿದ ಇತಿಹಾಸ ಮತ್ತು ಐತಿಹಾಸಿಕವಾಗಿ ನಿರ್ಧರಿಸಿದ ಧರ್ಮವನ್ನು ನೀಡಿತು. ಇತಿಹಾಸವು ದೈವಿಕ ಪ್ರಕ್ರಿಯೆ ಹಾಗೂ ದೈವ ನಿಮಿತ್ತವಾದ ಗುರಿಯತ್ತ ಚಲಿಸುತ್ತದೆ ಎಂಬ ಕಲ್ಪನೆಯನ್ನು ಕ್ರೈಸ್ತರು ನಂಬಿದ್ದರು. ಯೆಹೂದ್ಯ ಪರಂಪರೆಗನುಗುಣವಾಗಿ ಮುಂಚಿನ ಕ್ರೈಸ್ತರು ಜೀಸಸ್ ಕ್ರೈಸ್ತನ ಜನನವು ಒಂದು ಐತಿಹಾಸಿಕ ಘಟನೆ ಮಾತ್ರವಲ್ಲದೆ ದೇವರು ಮಾನವನ ಪ್ರಪಂಚದಲ್ಲಿ ಹೇಗೆ ಪ್ರವೇಶಿಸುತ್ತಾನೆಂಬುದನ್ನು ವ್ಯಕ್ತಪಡಿಸುತ್ತದೆ ಎಂದು ವಿವೇಚಿಸುತ್ತಾರೆ. ಈ ಯೆಹೂದ್ಯ ಮತಕ್ಕೆ ಕ್ರೈಸ್ತರು ದೇವರ ಕ್ರಿಯೆಯು

ಅವತಾರದಲ್ಲಿ ತನ್ನ ಪರಾಕಾಷ್ಠತೆಯನ್ನು ತಳೆಯುತ್ತದೆ ಎಂಬ ಅಂಶವನ್ನು ಅಳವಡಿಸಿದರು. ಈ ಬೆಳವಣಿಗೆಯಿಂದಾಗಿ ಮೋಕ್ಷವನ್ನು ಪಡೆಯುವುದು ಮಾನವ ಇತಿಹಾಸದ ಪ್ರಮುಖ ಗುರಿಯಾಯಿತು. ಈ ಸಂಪ್ರದಾಯದ ಪ್ರಸಿದ್ಧ ಚಿಂತಕರಲ್ಲಿ ಸಂತ ಅಗಸ್ಟೈನ್ ಒಬ್ಬರಾಗಿದ್ದಾರೆ.

**ಸಂತ ಅಗಸ್ಟೈನ್**

ಕ್ರೈಸ್ತ ಧರ್ಮದ ಪ್ರಸಿದ್ಧ ಚಿಂತಕರಾದ ಇವರು ಆ ಧರ್ಮವನ್ನು ಸಮರ್ಥಿಸಲು "ದೇವನಗರ" (City of god) ಎಂಬ ಗ್ರಂಥವನ್ನು ರಚಿಸಿದರು. ಇದರಲ್ಲಿ ಪ್ರತಿಪಾದನೆಗೊಂಡಿರುವ ಕ್ರೈಸ್ತ ಇತಿಹಾಸ ತತ್ವವು ಮಧ್ಯಕಾಲೀನ ಯುರೋಪಿನ ಇತಿಹಾಸ ಪ್ರಜ್ಞೆಯ ಮೇಲೆ ಹೆಚ್ಚು ಪ್ರಭಾವವನ್ನು ಬೀರಿತು.

ಅವರ ಕೃತಿಯು 'ದೇವನಗರ' ಮತ್ತು ಮಾನವನಗರಗಳ ರೂಪದ ಚೌಕಟ್ಟಿನಲ್ಲಿ ನಿಯೋಜಿಸಿದ್ದಾರೆ. ಈ ನಗರಗಳ ಇತಿಹಾಸ ದೈವ ಯೋಜನೆಯೊಂದನ್ನು ಅನಾವರಣಗೊಳಿಸುತ್ತದೆ. ಇದರೊಂದಿಗೆ ಸಂತ ಅಗಸ್ಟೈನ್‌ರವರು ತಮ್ಮ ಇತಿಹಾಸ ಕಲ್ಪನೆಯ ತತ್ವಗಳನ್ನು ಪ್ರತಿಪಾದಿಸಿದ್ದಾರೆ. ಯೆಹೂದ್ಯರು ಮತ್ತು ಕ್ರೈಸ್ತಧರ್ಮದ ಪೂರ್ವದ ಇತಿಹಾಸದಲ್ಲಿ ಅಡಗಿದ್ದ ಪ್ರಮುಖ ಭಾವನೆಗಳನ್ನು ಗತಕಾಲದ ಒಂದು ವ್ಯಾಪಕವಾದ ವಿಭಾಗದ ಮೇಲೆ ಪ್ರಯೋಗಿಸಿದ ಇವರು ಘಟನಾವಳಿಗಳ ಕ್ರಮಾನುಗತಿಯನ್ನು ದೈವ ನಿಮಿತ್ತವಾದವುಗಳೆಂದು ವರ್ಣಿಸಿ, ಕ್ರೈಸ್ತರ ಬರುವಿಕೆಯನ್ನು ಮಾನವ ಇತಿಹಾಸದ ಒಂದು ನಿರ್ಣಾಯಕ ಘಟನೆಯೆಂದು ಪ್ರದರ್ಶಿಸಿ ಗತಕಾಲ ಮತ್ತು ಭವಿಷ್ಯತ್‌ಕಾಲಗಳನ್ನು ಅವತಾರ ಮತ್ತು ಪ್ರಾಯಶ್ಚಿತ್ತದ ಬೆಳಕಿನಲ್ಲಿ ಅರ್ಥೈಸಿದ್ದಾರೆ. ಇದರ ಪೂರ್ವದ ಘಟನೆಗಳು ಕ್ರೈಸ್ತನ ಬರುವಿಕೆಯ ಪೂರ್ವ ಸಿದ್ಧತೆಗಳಾಗಿ ಹೊಸ ಮಹತ್ವ ಪಡೆದವು. ನಂತರ ಘಟನೆಗಳನ್ನು ಕ್ರೈಸ್ತನ ಜೀವನದಲ್ಲಿ ವ್ಯಕ್ತಪಡಿಸಿರುವ ಹೊಸ ಗುರಿಯತ್ತ ಅಥವಾ ಮೋಕ್ಷದತ್ತ ಮತ್ತೊಂದು ನೇರಸಾಲಿನಲ್ಲಿ ಚಲಿಸುತ್ತಿರುವವುಗಳೆಂದು ಕಾಣಲಾಯಿತು. ಆದ್ದರಿಂದ ಸಂತ ಅಗಸ್ಟೈನ್ ಮತ್ತು ಮಧ್ಯಕಾಲೀನ ಕ್ರೈಸ್ತ ಜಗತ್ತು ಇತಿಹಾಸವನ್ನು "ಒಂದು ಏಕಮಾರ್ಗ ಸೂಚಕ, ಮೂಲ ಸಂಕಲ್ಪಸಾರ ಜಗದ್ವಿಕಾಸದ ಕ್ರಮ" ಎಂದು ಗ್ರಹಿಸಿದರು. ಒಟ್ಟಿನಲ್ಲಿ ಸಂತ ಅಗಸ್ಟೈನ್ ತಮ್ಮ ಸಿದ್ಧಾಂತದ ನಿರ್ಣಾಯಕ ಅಭಿಪ್ರಾಯವನ್ನು ಹೀಗೆ ಮಂಡಿಸಿದ್ದಾರೆ, "ಕ್ರೈಸ್ತನು ನಮ್ಮ ಪಾಪಗಳಿಗಾಗಿ ಒಂದು ಸಾರಿ ಪ್ರಾಣತೆತ್ತನು; ಸಾವಿನಿಂದ ಪುನಃ ಜೀವ ಪಡೆದಮೇಲೆ ಮತ್ತೆಂದೂ ಆತನು ಸಾಯುವುದಿಲ್ಲ" ಪ್ರಾಯಶ್ಚಿತ್ತ ಮತ್ತು ಪುನರುತ್ಥಾನ ಪುನರಾವರ್ತಿಯಾಗುವುದಿಲ್ಲ.

ಚರ್ಚ್ ಇತಿಹಾಸ ಪರಂಪರೆಯ ಲಕ್ಷಣಗಳನ್ನು ವಿಶ್ಲೇಷಿಸುತ್ತಾ ಕಾಲಿಂಗ್‌ವುಡ್ ಈ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. "ಕ್ರೈಸ್ತ ಧರ್ಮದ ತತ್ವಗಳ ಆಧಾರದ ಮೇಲೆ ರಚಿಸಿದ

ಯಾವ ಇತಿಹಾಸವೂ ಅಗತ್ಯವಾಗಿ ಸರ್ವವ್ಯಾಪಿ, ದೈವಿಕ, ಕಾಲಜ್ಞಾನಿಕ ಮತ್ತು ನಿರ್ದಿಷ್ಟ ಅವಧಿಗಳನ್ನುಳ್ಳದ್ದಾಗಿರುತ್ತದೆ". ಇತಿಹಾಸದ ವಿಶಿಷ್ಟ ದೃಷ್ಟಿಯು ಸರ್ವವ್ಯಾಪಿ ದೃಷ್ಟಿಗೆ ಎಡೆಮಾಡಿಕೊಟ್ಟಿತು. ಇತಿಹಾಸವು ಮಾನವ ಹಿತೋತ್ಸಾಹ ಲಕ್ಷಣವನ್ನು ಕಳೆದುಕೊಂಡು ದೈವಾಸ್ತಿಕ್ಯವಾಯಿತು. ಕ್ರೈಸ್ತನು ಈ ಜಗತ್ತಿನಲ್ಲಿ ಜನಿಸಿದುದನ್ನು ಕೇಂದ್ರಬಿಂದುವನ್ನಾಗಿಸಿಕೊಂಡು ಇತಿಹಾಸವನ್ನು ಎರಡು ಪ್ರಧಾನ ಯುಗಗಳಾಗಿ ಜನನ ಪೂರ್ವ-ಜನಿಸಿದ ನಂತರದ ಯುಗ ಎಂದು ವಿಭಜಿಸಿದರು. ಈ ಎರಡು ಯುಗಗಳನ್ನು ಅಂಧಾಕಾರ ಯುಗ ಮತ್ತು ಪ್ರಕಾಶಮಾನ ಯುಗ ಎಂದು ಕರೆಯಲಾಯಿತು. ವಿಭಜಿಸಿದ ಇತಿಹಾಸವನ್ನು ಕಾಲಿಂಗ್‌ವುಡ್ ಭವಿಷ್ಯ ದರ್ಶನದ ಅಥವಾ ಕಾಲಜ್ಞಾನದ ಇತಿಹಾಸವೆಂದು ಕರೆದಿದ್ದಾರೆ.

ಯುರೋಪಿನ ಆಧುನಿಕ ಇತಿಹಾಸ ಲೇಖನ ಸಂಪ್ರದಾಯ ಪ್ರಾರಂಭವಾದುದು ಪುನರುಜ್ಜೀವನ ಯುಗದಲ್ಲಿ. ಇತಿಹಾಸದ ಯೋಜನೆಯನ್ನು ನಿರ್ಧರಿಸುತ್ತಿದ್ದ ದೇವತಾಶಾಸ್ತ್ರ ಮತ್ತು ತತ್ವಶಾಸ್ತ್ರಗಳಲ್ಲಿನ ಆಸಕ್ತಿ ಮಾನವನಿಗೆ ಸಂಬಂಧಿಸಿದ ವಿಷಯಗಳ ಆಸಕ್ತಿಗೆ ವರ್ಗಾಯಿಸಲ್ಪಟ್ಟಿತ್ತು. ಇದರಿಂದ ಇತಿಹಾಸವು ಪ್ರಾಪಂಚಿಕ ಹಾಗೂ ಪಕ್ಷೇತರವಲ್ಲದ ರೂಪವನ್ನು ತಳೆಯಿತು. ಇದರ ಪರಿಣಾಮವಾಗಿ ಪುನರುಜ್ಜೀವನ ಯುಗದಲ್ಲಿ ಆಧುನಿಕ ಇತಿಹಾಸ ಚಿಂತನೆಯ ವಸ್ತ್ರಕ್ಕೆ ಅನೇಕ ಹೊಸ ಎಳೆಗಳನ್ನು ನೇಯಲಾಯಿತು. ಒಂದು ಸ್ವತಂತ್ರವಾದ ಮತ್ತು ಸಾಮಾನ್ಯ ಜನಜೀವನವನ್ನು ಚಿತ್ರಿಸುವ ಸಾಹಿತ್ಯವಾಗಿ ಇತಿಹಾಸದ ಬರವಣಿಗೆಯಲ್ಲಿ ಬೆಳವಣಿಗೆಯಾಯಿತು. ನೈತಿಕ ಹಾಗೂ ರಾಜಕೀಯ ಶಿಕ್ಷಣಕ್ಕೆ ಉಪಯುಕ್ತ ಉದಾಹರಣೆಗಳ ಆಧಾರವಾಗಲು ಉನ್ನತ ಬೋಧಪರ ಮೌಲ್ಯಗಳನ್ನು ಅಳವಡಿಸಿಕೊಳ್ಳಲು ಇತಿಹಾಸ ರಚನೆಗೆ ಪ್ರೇರಣೆಯನ್ನು ನೀಡುವ ದೃಢಪ್ರಯತ್ನ ಈ ಯುಗದಲ್ಲಿ ನಡೆಯಿತು. ಈ ಬೆಳವಣಿಗೆಯ ಪರಿಣಾಮವಾಗಿ, ಗತಕಾಲದ ಬಗ್ಗೆ ಮಧ್ಯಕಾಲೀನ ದೃಷ್ಟಿಯಲ್ಲಿದ್ದ ಐತಿಹಾಸಿಕ ಲಕ್ಷಣಗಳನ್ನು ತೊಡೆದುಹಾಕಿ, ವಿಭಿನ್ನತೆ ಬದಲಾವಣೆ ಮತ್ತು ಅಸಂಗತಿಗಳ ಬಗ್ಗೆ ಮೂಲ ಐತಿಹಾಸಿಕ ಪಡೆಯಲು ಸಾಧ್ಯವಾಯಿತು. ಅಲ್ಲದೆ ಕಥಾರೂಪದ ಇತಿಹಾಸ ರಚನೆ, ವಿದ್ವತ್ತಿನ ಪ್ರಯೋಗದ ವಿಧಾನದ ಬೆಳವಣಿಗೆ ಮತ್ತು ಇತಿಹಾಸ ರಚನೆಯ ಬಗ್ಗೆ ಹೊಸ ಅರಿವು ಮೊದಲಾದ ಪ್ರವೃತ್ತಿಗಳಿಂದ ಹದಿನೆಂಟನೆಯ ಶತಮಾನವು ಒಂದು ಶ್ರೀಮಂತ ಇತಿಹಾಸ ಲೇಖನ ಸಂಪ್ರದಾಯವನ್ನು ಪಡೆಯಿತು.

ಹದಿನೆಂಟನೆಯ ಶತಮಾನದ ಉತ್ತರಾರ್ಧ ಹಾಗೂ ಹತ್ತೊಂಭತ್ತನೆಯ ಶತಮಾನದ ಪೂರ್ವಾರ್ಧ ಕಾಲದಲ್ಲಿದ್ದ "ಜ್ಞಾನೋದಯ ಚಳುವಳಿಯು ಬೌದ್ಧಿಕ ಕ್ರಾಂತಿಯ ಪರಾಕಾಷ್ಠೆಯನ್ನು ಪ್ರತಿನಿಧಿಸುತ್ತಿತ್ತು. ಈ ಚಳುವಳಿಯು ಚಿಂತನೆ ಮತ್ತು ಜೀವನದ ಪ್ರತಿಕ್ಷೇತ್ರವನ್ನು ಲೌಕಿಕಗೋಳಿಸುವ ಗುರಿಯನ್ನು ಹೊಂದಿದ್ದಿತು. ಈ ಯುಗದ ಬರಹಗಾರರಲ್ಲಿ ಡೇವಿಡ್ ಹ್ಯೂಂ, ವಾಲ್ಟೈರ್

ಮತ್ತು ಎಡ್ವರ್ಡ್ ಗಿಬ್ಬನ್ ಪ್ರಮುಖರು. ಇತಿಹಾಸವು ಕೇವಲ ಕಥನವಾಗಿರದೆ ಮಾನವನ ವಿಶಿಷ್ಟ ಚಟುವಟಿಕೆಗಳನ್ನು ಅರಿತುಕೊಳ್ಳುವ ಒಂದು ವ್ಯವಸ್ಥಿತ ಕ್ರಮವೆಂದು ಸಾರಿದರು. ಈ ದೃಷ್ಟಿಯಿಂದ ಅವರು ಆಧುನಿಕ ಚಿಂತನದ ಸ್ಥಾಪಕರಾಗಿದ್ದಾರೆ. ಇತಿಹಾಸದ ಚಿಂತನೆಗೆ ಒಳಪಡಬೇಕಾದ ವಿಷಯಗಳಲ್ಲಿ ನಡತೆಗಳು, ಸಂಪ್ರದಾಯಗಳು, ನಂಬಿಕೆಗಳು, ಕಟ್ಟಳೆಗಳು, ವಿಜ್ಞಾನ, ದರ್ಶನ, ಕಲೆ, ತಂತ್ರಜ್ಞಾನ, ವ್ಯಾಪಾರ, ಕೈಗಾರಿಕೆ, ಯುದ್ಧ ಮುಂತಾದ ಮಾನವನ ಚಿಂತನ ಹಾಗೂ ಕಾರ್ಯ ಚಟುವಟಿಕೆಗಳು ಸೇರಿಸಲ್ಪಟ್ಟವು. ನಾಗರಿಕತೆಗಳ ಕ್ರಮಾನುಗತಿಯನ್ನು ಚಿತ್ರಿಸುವ ಹಾಗೂ ಪ್ರಾಚೀನ ಇತಿಹಾಸವನ್ನು ತಿಳಿಯುವ ಹೊಸ ವಿಧಾನದ ಕಲ್ಪನೆಯು ಬೆಳಕಿಗೆ ಬಂದಿತು.

ಜ್ಞಾನೋದಯದ ಲೇಖಕರು ಇತಿಹಾಸದ ಆಳವನ್ನು ಹೆಚ್ಚಿಸುದುದರ ಪರಿಣಾಮವಾಗಿ ಇತಿಹಾಸ ಕೇವಲ ಘಟನೆಗಳ ಕಣಜವಾಗಿರದೆ ಚಿಂತನೆಗಳ, ಕಲ್ಪನೆಗಳ ಮತ್ತು ಚೈತ್ಯನದ ಅಭಿವೃದ್ಧಿಯ ಸರಪಣಿಯಾಗಿ ಪರಿಣಮಿಸಿತು. ಈ ಯುಗದಲ್ಲಿ ಇತಿಹಾಸ ರಚನಾಕಲೆಯಲ್ಲಿ ಹೊಸತನ ಕಂಡುಬಂದಿತಲ್ಲದೆ, ಇತಿಹಾಸದ ಪೂರ್ಣ ಭಾವನೆಯಲ್ಲಿ ಕ್ರಾಂತಿಕಾರಿ ಬದಲಾವಣೆಗಳು ಉಂಟಾದವು.

ಇತಿಹಾಸದ ಮುಂದಿನ ಬೆಳವಣಿಗೆಗೆ ಎರಡು ವಿಷಯಗಳು ಅಗತ್ಯವಾಗಿದ್ದವು. ಒಂದು; ಇತಿಹಾಸದ ಕ್ಷೇತ್ರವನ್ನು ವಿಸ್ತರಿಸಿ ಗತಕಾಲದ ಘಟನೆಗಳನ್ನು ಅನುಕಂಪದಿಂದ ವಿಚಾರಣೆ ಮಾಡುವುದು. ಎರಡು; ಮಾನವನ ಸ್ವಭಾವವು ಏಕರೀತಿಯದು ಮತ್ತು ಬದಲಾವಣೆಯಾಗದಿರುವುದು ಎಂಬ ಭಾವನೆಯನ್ನು ವಿರೋಧಿಸುವುದು. ಈ ಬೆಳವಣಿಗೆಗಳಿಂದ ಆಧುನಿಕ ಇತಿಹಾಸ ಲೇಖನ ಪರಂಪರೆ ರೂಪುಗೊಂಡಿತು. ಈ ಪರಂಪರೆಯ ಪ್ರಥಮ ಪ್ರಾಶಸ್ತ್ಯ ವ್ಯಕ್ತಿ ಜರ್ಮನಿಯ ನೆಬರ್, ಪ್ರತಿಯೊಂದು ರಾಷ್ಟ್ರದ ಪ್ರಾಚೀನ ಇತಿಹಾಸವು ಘಟನೆಗಳಿಗಿಂತ ಸಂಸ್ಥೆಗಳ, ವ್ಯಕ್ತಿಗಳಿಗಿಂತ ವರ್ಗಗಳ, ನಿಯಮಗಳಿಗಿಂತ ಪದ್ಧತಿಗಳ ಅಥವಾ ಸಂಪ್ರದಾಯಗಳ ಇತಿಹಾಸವಾಗಿರಬೇಕೆಂಬ ಸತ್ಯವನ್ನು ಅವರು ಗ್ರಹಿಸಿದರು. ಮತ್ತು ಅದರ ವ್ಯವಸಾಯಕ್ಕೆ ಸಂಬಂಧಿಸಿದ ಸಮಸ್ಯೆಗಳನ್ನು ವಿಚಾರಿಸಿದರು. ಅವರ ಚಟುವಟಿಕೆಗಳು ಭಾಷಾಶಾಸ್ತ್ರದ ಎಲ್ಲ ವಿಭಾಗಗಳಿಗೂ ವಿಸ್ತರಿಸಿತ್ತಲ್ಲದೆ, ಅದರ ವಿಮರ್ಶೆಗೆ ಒಂದು ವಿಧಾನವನ್ನು ರೂಪಿಸಿದರು. ಈ ವಿಧಾನ ಎರಡು ಕಾರ್ಯಚರಣೆಗಳನ್ನು ಒಳಗೊಂಡಿತ್ತು. ೧. ಆಧಾರಗಳನ್ನು ಅವುಗಳ ಅಂಗಭಾಗಗಳೊಂದಿಗೆ ವಿಶ್ಲೇಷಿಸಿ ನಿಷ್ಪಷ್ಟತೆಯನ್ನು ಕಂಡುಹಿಡಿಯುವುದು. ೨. ವಿಶ್ವಾಸಾರ್ಹವಾದ ಭಾಗಗಳನ್ನು ಆಂತರಿಕ ವಿಮರ್ಶೆಗೆ ಒಳಪಡಿಸಿ ಹೇಗೆ ಕರ್ತೃವಿನ ಸಂಗತಿಗಳ ಹೇಳಿಕೆಗಳು ಅವರ ಅಭಿಪ್ರಾಯವನ್ನು ಬಾಧಿಸಿತೆಂಬುದನ್ನು ತೋರಿಸುವುದು. ಈ ರೀತಿಯ ರೂಪವಿಕಾರಗಳಿಗೆ ಸ್ವಲ್ಪ ಅವಕಾಶ ನೀಡಲು ಈ ವಿಧಾನ ಇತಿಹಾಸಕಾರರಿಗೆ ನೆರವಾಗುತ್ತದೆ.

ಮಾಂಸೆಸ್ ತಿಳಿಸಿರುವಂತೆ ನೆಬರ್ ಅವರ ಪ್ರಭಾವಕ್ಕೆ ಎಲ್ಲ ಹೆಸರಾಂತ ಇತಿಹಾಸಕಾರರು ಒಳಗಾಗಿದ್ದಾರೆ. ಅವರಲ್ಲಿ ರಾಂಕೆ ಪ್ರಮುಖರು.

**ರಾಂಕೆ**

ಜರ್ಮನ್ ದೇಶದಲ್ಲಿ ಜನ್ಮತಾಳಿದ ಇತಿಹಾಸಕಾರರಲ್ಲಿ ಹೆಚ್ಚು ಪ್ರಸಿದ್ಧರಾದವರು ರಾಂಕೆ. ಅವರು ಇತಿಹಾಸದ ಬದಲಾವಣೆ ಭಾವಕ್ಕೆ ಅನುಗುಣವಾಗಿ ಮೂಲಾಧಾರಗಳನ್ನು ವಿಮರ್ಶಾತ್ಮಕವಾಗಿ ಉಪಯೋಗಿಸುವ ಮೂಲಕ ಇತಿಹಾಸ ಅಧ್ಯಯನಕ್ಕೆ ಎಣಿಸಲಾಗದ ಸೇವೆಯನ್ನು ಸಲ್ಲಿಸಿದ್ದಾರೆ. ಈ ಕಾರಣಕ್ಕಾಗಿ ರಾಂಕೆಯವರನ್ನು ಆಧುನಿಕ ಇತಿಹಾಸದ ಶಿಸ್ತಿನ ಸ್ಥಾಪಕ, ಪ್ರಖ್ಯಾತ 'ಶುದ್ಧ ಇತಿಹಾಸಕಾರ' ಎಂದು ಕರೆಯಲಾಗಿದೆ.

ಇತಿಹಾಸ ಕಥನವನ್ನು ರಚಿಸುವಾಗ ಪಕ್ಷಪಾತವಿಲ್ಲದ ವಾಸ್ತವಿಕ ಸಂಶೋಧನೆಯಲ್ಲಿ ತೊಡಗಿದ ರಾಂಕೆಯವರಿಗೆ ಮಾನವನ ಪರವಾದ ಇತಿಹಾಸವು ಹೆಚ್ಚಾಗಿ ಆಕರ್ಷಿಸಿತು. "ಸಮಸ್ತ ಶತಮಾನಗಳ ಸಂವೃದ್ಧಿಯಲ್ಲಿ ಆನಂದಪಡುವುದು, ನಾಯಕರನ್ನು ಎದುರಾಗಿ ಬೇಟಿಮಾಡುವುದು ಪ್ರತಿಯೊಂದರ ಮೂಲಕ ಪುನರ್ಜಿಸುವುದು ಮನೋಹರವಾಗಿರುತ್ತದೆ" ಎಂಬುದಾಗಿ ಅಭಿಪ್ರಾಯಪಡುತ್ತಾರೆ. ಕಾರ್ಯತತ್ಪರವಾದ ಮಾನವರು ಇತಿಹಾಸದ ನಿರ್ಣಾಯಕ ಅಂಶವಾಗಿದ್ದಾರೆಂದು ಅವರು ಪದೇ ಪದೇ ಘೋಷಿಸಿದ್ದಾರೆ. ಜನರಿಗಿಂತ ಮಿಗಿಲಾಗಿ ರಾಜಕುಮಾರರು ಮತ್ತು ಪರಿಸ್ಥಿತಿಗಳಿಗಿಂತ ಹೆಚ್ಚಾಗಿ ಕೃತ್ಯಗಳು ಹೆಚ್ಚಾಗಿ ಅವರ ಗ್ರಂಥಗಳಲ್ಲಿ ಎದ್ದು ಕಾಣುತ್ತವೆ. ನೈತಿಕ ಹಾಗೂ ಧಾರ್ಮಿಕ ಪಾಠಗಳನ್ನು ಕಲಿಸುವುದು ಇತಿಹಾಸದ ಉದ್ದೇಶವೆಂದು ಹೇಳಿ 'ಸಂಭವಿಸಿದುದನ್ನು ವಿವೇಚಿಸುವ, ಮುಂಬರುವ ಯುಗಗಳ ಪ್ರಯೋಜನ ಅಥವಾ ಒಳತಿಗಾಗಿ ಈಗಿನ ಕಾಲದಲ್ಲಿ ಉಪದೇಶಿಸುವ ಕೆಲಸವನ್ನು ಇತಿಹಾಸವು ತನಗೆ ನೇಮಿಸಿಕೊಂಡಿದೆ' ಎಂಬುದಾಗಿ ಅಭಿಪ್ರಾಯಪಡುತ್ತಾರೆ. ಅಲ್ಲದೆ ಸಂಭವಿಸಿದ ಘಟನೆಗಳು ಪುನಃ ಸಂಭವಿಸದಂತೆ ನಿಖರವಾಗಿ ವಿಶ್ಲೇಷಿಸುವುದು ಇತಿಹಾಸದ ಉದ್ದೇಶವೆಂದು ಅವರು ಸಾರಿದರು. ಈ ಉದ್ದೇಶದ ಈಡೇರಿಕೆಗಾಗಿ "ಸಂಗತಿಗಳು ಎಷ್ಟೇ ನಿರುಪಾದಿಕವಾದುದು ಮತ್ತು ಸುಂದರವಲ್ಲದುದು ಆಗಿದ್ದರೂ ಅವುಗಳನ್ನು ನಿಷ್ಠುರವಾಗಿ ಪರಿಚಯಿಸಬೇಕೆಂಬ ಶ್ರೇಷ್ಠ ನಿಯಮವನ್ನು" ಸೇರಿಸಿದರು. ಇತಿಹಾಸದ ಆಧಾರಗಳ ವಿಮರ್ಶೆಯನ್ನು ಅಭಿವೃದ್ಧಿಗೊಳಿಸಿ ಆಧುನಿಕ ವಿಮರ್ಶಾತ್ಮಕ ಇತಿಹಾಸ ಲೇಖನ ಪರಂಪರೆಯನ್ನು ಪ್ರಾರಂಭಿಸಿದರು. ಸಾರ್ವತ್ರಿಕ ಇತಿಹಾಸಗಳು ಆಧಾರಗಳಾಗಿ ಉಪಯುಕ್ತವಾಗಿಲ್ಲವೆಂಬುದನ್ನು ತೋರಿಸಿದರಲ್ಲದೆ ಜವಾಬ್ದಾರಿಯುತವಲ್ಲದ ದತ್ತಾಂಶಗಳನ್ನು ನಿರಾಕರಿಸಿ ಇತಿಹಾಸಕಾರರು ಪತ್ರಾಗಾರಗಳು ಮತ್ತು ದಾಖಲೆಗಳನ್ನು ಬಳಸಬೇಕೆಂದು ಕರೆಯಿತ್ತರು.

ಒಟ್ಟಿನಲ್ಲಿ ಪತ್ರಾಗಾರಗಳಲ್ಲಿನ ಆಧಾರಗಳನ್ನು ಉಪಯೋಗಿಸಿಕೊಂಡು ಇತಿಹಾಸವನ್ನು ರಚಿಸಿದವರಲ್ಲಿ ರಾಂಕೆ ಮೊದಲಿಗರು. ಬರವಣಿಗೆಯಲ್ಲಿ ರಕ್ಷಿಸಿರುವ ಆಧಾರಗಳ ಮೇಲೆಯೇ ಇತಿಹಾಸವನ್ನು ರಚಿಸಬೇಕೆಂದು ಪ್ರತಿಪಾದಿಸಿದ ಇವರಿಗೆ ಸಂಪ್ರದಾಯ ಹೇಳಿಕೇಳಿದ್ದು ಬೀದಿಮಾತು ಪ್ರಮಾಣ ಕೊಟ್ಟು ದೃಢಿಕರಿಸಲಾಗದ ಯಾವುದರಲ್ಲಿಯೂ ನಂಬಿಕೆಯಿರಲಿಲ್ಲ. ಅವರು ಸಮರ್ಥನಿಯವಾದುದನ್ನು ಮಾತ್ರ ಅರಸುತ್ತಿದ್ದರಲ್ಲದೆ ಇತಿಹಾಸಕಾರರಿಂದ ಅದನ್ನು ಅಪೇಕ್ಷಿಸುತ್ತಿದ್ದರು. ಹೀಗಾಗಿ ಅವರು ರೂಪಿಸಿದ ವಿಧಾನವು ಹೆಚ್ಚಿನ ನಿಷ್ಪಕ್ಷಪಾತ ಉತ್ತಮಗುಣದ ಸಮಸ್ಥಾಯಿತ್ವ ಮತ್ತು ವಿಶಾಲವಾದ ಹೊರನೋಟಕ್ಕೆ ಎಡೆಮಾಡಿಕೊಟ್ಟಿತ್ತು.

**ಕಾಮ್ಟ್ (೧೭೯೮–೧೮೫೭)**

ಕಾಮ್ಟ್ ಅವರನ್ನು ಸಮಾಜಶಾಸ್ತ್ರದ ಶಿಸ್ತಿನ ಸ್ಥಾಪಕರೆಂದು ಪರಿಗಣಿಸಲಾಗಿದೆ. ಸಮಾಜದ ಅಧ್ಯಯನಕ್ಕೆ ಪ್ರಾಕೃತಿಕ ಅಥವಾ ನಿಶ್ಚಿತ ವಿಜ್ಞಾನ ವಿಧಿಗಳನ್ನು ಅಳವಡಿಸಿಕೊಳ್ಳುವುದು ಅವರ ಉದ್ದೇಶವಾಗಿತ್ತು. ಇತಿಹಾಸವು ಸಮಾಜದ ಅಧ್ಯಯನಕ್ಕೆ ಅವಶ್ಯವಾದ ಕಚ್ಚಾ ಸಾಮಾಗ್ರಿಗಳನ್ನು ಒದಗಿಸುತ್ತದೆಂಬುದು ಅವರ ಅಭಿಪ್ರಾಯವಾಗಿತ್ತು. ಈ ಉದ್ದೇಶದಿಂದ ಅವರು ಇತಿಹಾಸ ಅಧ್ಯಯನವನ್ನು ಪ್ರಾರಂಭಿಸಿದರು. ಇತಿಹಾಸದ ಬೆಳವಣಿಗೆಯಲ್ಲಿ ಅಡಕವಾಗಿರುವ ವಿಧಿಗಳನ್ನು ಅವರು ಅರಸುತ್ತಿದ್ದರು. ಈ ವಿಧಿಗಳು ಮುಂದಿನ ಘಟನೆಗಳ ಗತಿಯನ್ನು ನಿರ್ಧರಿಸಲು ಮಾನವನಿಗೆ ನೆರವಾಗುತ್ತದೆಂದು ಅವರು ಭಾವಿಸಿದ್ದರು.

ತಮ್ಮ ತತ್ವಜ್ಞಾನದಲ್ಲಿ ಕಾಮ್ಟ್ ಸಮಸ್ತ ಜ್ಞಾನ ಮತ್ತು ಕ್ರಿಯೆಗಳನ್ನೊಳಗೊಂಡ ಪರಿಪೂರ್ಣ ಹಾಗೂ ವ್ಯಾಪಕವಾದ ಸಿದ್ಧಾಂತವನ್ನು ಪರಿಷ್ಕೃತ ಮಾಡುವ ಪರಿಶ್ರಮದ ಪ್ರಯತ್ನವನ್ನು ಮಾಡಿದರು ಆದರೆ ಅವರು ವಿಶೇಷವಾದ ಅಮುಖ್ಯ ವಿಧಿಗಳನ್ನು ಶೋಧಿಸುವುದರಲ್ಲಿ ಅಥವಾ ಪ್ರತ್ಯೇಕವಾದ ಭಾವನೆಗಳನ್ನು ಸೃಷ್ಟೀಕರಿಸುವಲ್ಲಿ ಅಥವಾ ಸತ್ಯವನ್ನು ವಿವರವಾಗಿ ಅಧ್ಯಯನ ಮಾಡಲು ಒಂದು ವಿಭಾಗವನ್ನು ಸ್ಥಾಪಿಸಲು ಪ್ರಯತ್ನಿಸಲಿಲ್ಲ. ಬದಲಿಗೆ ಐತಿಹಾಸಿಕ ಆಧಾರವುಳ್ಳ ಅಂತಸ್ತಿಗನುಗುಣವಾಗಿ ವರ್ಗೀಕರಿಸಲ್ಪಟ್ಟು ಮತ್ತು ವ್ಯವಹಾರಿಕವಾಗಿ ಉಪಯುಕ್ತವಾದ ಚಿಂತನೆಯ ಒಂದು ವ್ಯವಸ್ಥೆಯನ್ನು ರಚಿಸುವುದು ಅವರ ಉದ್ದೇಶವಾಗಿತ್ತು.

ಸಾರ್ವತ್ರಿಕ ಸಿದ್ಧಾಂತದಲ್ಲಿ ಇತಿಹಾಸದ ತತ್ವಜ್ಞಾನವು ವಿಜ್ಞಾನವಾಗಿ ವರ್ಗೀಕರಿಸಲ್ಪಡದೆ, ವಿಜ್ಞಾನದ ಒಂದು ಭಾಗವಾಗಿ, ಸಮಾಜಶಾಸ್ತ್ರದ ಎರಡನೆಯ ಭಾಗವಾಗಿ ವರ್ಗೀಕರಿಸಲ್ಪಡುತ್ತದೆ. ಸಮಾಜಶಾಸ್ತ್ರವನ್ನು ಸಮಾಜಿಕ ಸಂಖ್ಯಾವಿಜ್ಞಾನ ಮತ್ತು ಸಾಮಾಜಿಕ ಗತಿವಿಜ್ಞಾನ ಎಂದು ವಿಭಾಗಿಸಲಾಗಿದೆ. ಈ ಎರಡು ವಾದಗಳೂ ಒಂದಕ್ಕೊಂದು ಕೂಡಿಕೆಯಾಗಿ ಅಥವ ಪೂರಕವಾಗಿದೆಯೆಂದು ಪರಿಗಣಿಸುವುದು ಅವಶ್ಯವೆಂದು ಕಾಮ್ಟ್ ಊಹಿಸಿ ಹೇಳುತ್ತಾರೆ.

ಸಮಾಜಶಾಸ್ತ್ರದಲ್ಲಿ ಕಂಡು ಬರುವ ಶಿಸ್ತು ಭಾವನೆಗಳು ಪ್ರಾಣಿಶಾಸ್ತ್ರದ ವ್ಯವಸ್ಥೆ ಮತ್ತು ಜೀವದ ಭಾವನೆಗಳಿಗೆ ಸರಿಸಮವಾಗಿವೆ. ಈ ಎರಡನ್ನೂ ಸಂಯೋಜಿಸುವುದರಲ್ಲಿ ಕಾಮ್ಟ್ ವಿಜಯಿಯಾದುದರಿಂದ ಅವರನ್ನು ಸಮಾಜಶಾಸ್ತ್ರದ ಸ್ಥಾಪಕನೆಂದು ಕರೆಯಲಾಗಿದೆ.

ಈ ಮೂರುಹಂತಗಳ ವಿಧಿಗಳು ಕ್ರಮಾಗತ ಹಂತಗಳಾಗಿದ್ದು, ಇವುಗಳ ಮುಖಾಂತರ ಮಾನವನ ಮನಸ್ಸು ತನ್ನ ಇತಿಹಾಸದ ಗತಿಯಲ್ಲಿ ಸಾಗುತ್ತವೆಂದು ಪ್ರತಿಪಾದಿಸಲಾಗಿದೆ. ಈ ನಿಶ್ಚಿತತೆ (ಪಾಸಿಟಿವಿಸಂ)ನಿಂದ ಆಧುನಿಕ ಸಮಾಜಶಾಸ್ತ್ರ ಉದಯಿಸಿತು.

**ಓಸ್ವಾಲ್ ಸ್ಪೆಂಗ್ಲರ್**

ಯೂರೋಪಿನ ಇತಿಹಾಸ ಸಂದಿಗ್ಧ ಕಾಲದಲ್ಲಿದ್ದ ಸಂದರ್ಭದಲ್ಲಿ ಸಂಸ್ಕೃತಿಯ ಮೇಲಿನ ತಮ್ಮ ವಿನೂತನ ವಿಚಾರ ಸರಣಿಯೊಂದಿಗೆ ಇತಿಹಾಸ ರಂಗವನ್ನು ಪ್ರವೇಶಿಸಿದರು ಓಸ್ವಾಲ್ ಸ್ಪೆಂಗ್ಲರ್. ಇವರ ಮೇರು ಕೃತಿ "ದಿ ಡಿಕ್ಲೈನ್ ಆಫ್ ದಿವೆಸ್ಟ" ಪಶ್ಚಿಮ ಯೂರೋಪಿನ ಇತಿಹಾಸವನ್ನು ಪ್ರಾಚೀನ, ಮಧ್ಯಕಾಲೀನ ಮತ್ತು ಆಧುನಿಕ ಯುಗಗಳಾಗಿ ಅಧ್ಯಯಿಸುವ ವಿಭಜಿತ ಯೋಜನೆಯನ್ನು ಅವರು ವಿರೋಧಿಸಿದರು. ಈ ವಿಭಜನೆಯು ಸಂಸ್ಕೃತಿಯ ದೃಷ್ಟಿಯಿಂದ ಅರ್ಥಹೀನ ಹಾಗೂ ಉತ್ಕೃಷ್ಟವಾದ ಸಂಸ್ಕೃತಿಯನ್ನು ಪಡೆದಿದ್ದ ಭಾರತ, ಬೆಬಿಲೋನ್, ಚೀನಾ, ಈಜಿಪ್ಟ್ ಮೊದಲಾದುವನ್ನು ಕಡೆಗಣಿಸಿ ಪಾಶ್ಚಿಮಾತ್ಯ ಸಂಸ್ಕೃತಿಗೆ ಗಣ್ಯಸ್ಥಾನವನ್ನು ನೀಡುವುದಾಗಿದೆ. ಇದಕ್ಕೆ ಬದಲಾಗಿ ಚಕ್ರಗತಿಯ ವಿಧಾನವು ಸೂಕ್ತವೆಂದು ಸ್ಪೆಂಗ್ಲರ್‌ರವರು ಪ್ರತಿಪಾದಿಸಿದರು.

ಇತಿಹಾಸವು ಜೈವಿಕ ಏಕತೆಯನ್ನು ಸೂಚಿಸುತ್ತದೆ "ಸಂಸ್ಕೃತಿಗಳು ಜೀವಿಗಳಾಗಿದ್ದು ಪ್ರಪಂಚದ ಇತಿಹಾಸ ಅವುಗಳ ಸಂಯುಕ್ತ ಜೀವನ ಚರಿತ್ರೆ, ಅವು ಜನ್ಮ ತಾಳಿ ಬೆಳೆದು, ತಮ್ಮ ನಿಯತಿಯನ್ನು ಪೂರೈಸಿ ಮರಣವನ್ನಪ್ಪುತ್ತವೆ. ಪ್ರತಿಯೊಬ್ಬ ಮಾನವನ ಜೀವನದಲ್ಲಿ ಕಾಣುವ ನಾಲ್ಕು ಹಂತಗಳ ಹಾದಿಯಲ್ಲಿ ಸಂಸ್ಕೃತಿಯೂ ಮುನ್ನಡೆಯುತ್ತದೆ. ಪ್ರತಿಯೊಂದು, ಸಂಸ್ಕೃತಿಯೂ ಬಾಲ್ಯವಸ್ಥೆ, ಯೌವನ, ಪ್ರಾಯ ಮತ್ತು ಮುಪ್ಪು ಈ ಅವಸ್ಥೆಗಳನ್ನು ಹೊಂದಿರುತ್ತವೆ". ಬಾಲ್ಯಾವಸ್ಥೆಯಲ್ಲಿ ಸಂಸ್ಕೃತಿಯು ಎಳೆಯದಾಗಿ ನಡುಗುತ್ತಿರುವ ಜೀವನವನ್ನು ಹೊಂದಿದ್ದು ಹೆಚ್ಚು ದಿಗಿಲಿನಿಂದ ಕೂಡಿರುತ್ತದೆ. ಯೌವನಾವಸ್ಥೆಗೆ ಬರುವ ವೇಳೆಗೆ ಅದು ಓಜಸ್ವಿಯಾಗಿ ದೃಢವಾಗಿ ನಿಯಂತ್ರಿತಗೊಂಡು ತನ್ನ ವೈಯಕ್ತಿಕ ವೈಲಕ್ಷಣ್ಯಗಳನ್ನು ಸ್ಪಷ್ಟಗೊಳಿಸುತ್ತಾ ಬರುತ್ತದೆ. ಆಗ ಅದು ತನ್ನ ಶಕ್ತಿಯಲ್ಲಿ ಆತ್ಮವಿಶ್ವಾಸವುಳ್ಳದ್ದಾಗಿರುತ್ತದೆ. ಸಂಸ್ಕೃತಿಯ ಜೀವಜ್ವಾಲೆಯು ನಶಿಸಿದಾಗ ತನ್ನ ಅಂತಿಮ ಹಂತವಾದ ನಾಗರಿಕತೆಯನ್ನು ತಲುಪುತ್ತದೆ. ನಾಗರಿಕತೆಯು ಸಂಸ್ಕೃತಿಯ ಅನಿವಾರ್ಯವಾದ ನಾಗರಿಕತೆಯ ಹಂತವು ಕೆಲವು ವೈಯಕ್ತಿಕ ವೈಲಕ್ಷಣಗಳಿಂದ

ಕೂಡಿರುತ್ತದೆ. ಕೊನೆಯಲ್ಲಿ ನಾಹರಿಕತೆಯು ಉತ್ಸಾಹಹೊಂದಿ, ಹೆಣಗಾಡುತ್ತಾ, ವಿಶ್ವಾಸಹೀನವಾಗಿ ಶಿಥಿಲಗೊಳ್ಳುತ್ತಾ ಇತಿಹಾಸವಿಲ್ಲದ ನಿರಾಕಾರ ಸ್ಥಿತಿಗೆ ಮರಳುತ್ತದೆ. ಇದು ಸ್ಪೆಂಗ್ಲರ್ ಪ್ರಕಾರ ಸಂಸ್ಕೃತಿ ನಾಗರಿಕತೆಯ ಜೀವನ ಚಕ್ರದ ಅವಶ್ಯವಾದ ಅಂಶಗಳು. ಈ ಜೀವನ ಚಕ್ರಕ್ಕೆ ಬೆಂಬಲವಾಗಿ "ವಿಶ್ವದ ಚೈತನ್ಯ" ಇರುತ್ತದೆ. ಈ ಚೈತನ್ಯ ನಮ್ಮನ್ನು ಪ್ರೇರೆಪಿಸುತ್ತದಲ್ಲದೆ ಸಂಗತಿಯನ್ನು ಚೈತನ್ಯಗೊಳಿಸಿ ಅದರ ಜೀವನ ಚಕ್ರವನ್ನು ನಿರ್ಣಾಯಿಸುತ್ತದೆ. ಒಟ್ಟಿನಲ್ಲಿ ಅವರು ಸಂಸ್ಕೃತಿ ಮತ್ತು ನಾಗರಿಕತೆಯ ಬಗೆಗಿನ ನಿಲುವಿಗೆ ನೀಡುವ ಸಮರ್ಥನೆಗಳು ಅತಿ ನಿಷ್ಠುರವಾಗಿ ತೋರುತ್ತವೆ.

### ಅರ್ನಾಲ್ಡ್ ಜೆ ಟಾಯನ್ ಬಿ (೧೮೮೩-೧೯೭೩)

ಟಾಯನ್ ಬಿ ಅವರು ನಾಗರಿಕತೆಗಳ ಸೃಷ್ಟಿಯ ಸಮಸ್ಯೆಗಳ ಬಗ್ಗೆ ಆಲೋಚಿಸುತ್ತಿರುವಾಗ ಸ್ವಾಭಾವಿಕವಾಗಿ ಸ್ಪೆಂಗ್ಲರ್ ಅವರ ಇತಿಹಾಸ ದರ್ಶನದಲ್ಲಿ ಆಕರ್ಷಿತರಾದರು. ಆದರೆ ಅವರ ಅತಿ ನಿಷ್ಠುರ ಕಾರಣ ಪೂರ್ವಕ ತರ್ಕ ಹೆಚ್ಚು ಮೌಲ್ಯವುಳ್ಳದ್ದಾಗಿಲ್ಲವೆಂದು ನಿರ್ಧರಿಸಿ ತಮ್ಮದೇ ವಿಧಾನವನ್ನು ರೂಪಿಸಿದರು. ಈ ವಿಚಾರಸರಣಿ ಹನ್ನೆರಡು ಬೃಹತ್ ಸಂಪುಟಗಳಿಂದ ಕೂಡಿದ ಅವರ ಇತಿಹಾಸ ಅಧ್ಯಯನದಲ್ಲಿ ರೂಪುಗೊಂಡಿದೆ.

ಟಾಯನ್ ಬಿ ಅವರು ತಮ್ಮ ವಿಚಾರ ಸರಣಿಯನ್ನು ಹೀಗೆ ಪ್ರಾರಂಭಿಸುತ್ತಾರೆ. ಅನಂತ ರೂಪದ ಅಥವ ವಿಸ್ತಾರದ ಅಪೂರ್ವಸಂಭವವನ್ನು ವಿಸ್ತರಿಸುವುದೇ ಆಗಲಿ ಅಥವ ಮಾನವ ಜನಾಂಗದ ರಾಜ್ಯಾಂಗಗಳ ಇತಿಹಾಸವನ್ನು ಒಂದು ಐಕ್ಯತೆಯೆಂದು ಭಾವಿಸುವುದಾಗಲಿ ಇತಿಹಾಸ ಅಧ್ಯಯನದ ಸಮಂಜಸವಾದ ಕ್ಷೇತ್ರವಾಗಲಾರದು. ಸಮಾಜ ಒಂದು ಅರ್ಥಪೂರ್ಣವಾದ ಕ್ಷೇತ್ರ, ಇದು ಸ್ವರೂಪ ಹಾಗೂ ವಿಸ್ತಾರದಲ್ಲಿ ನಗರ ರಾಜ್ಯಗಳು, ರಾಷ್ಟ್ರೀಯತೆಯ ರಾಜ್ಯಗಳು, ಸೈನ್ಯ ಮತ್ತು ಇತರೆ ರಾಜಕೀಯ ಅಣುಗಳು, ಇವೇ ಇತಿಹಾಸ ಅಧ್ಯಯನದ ಪ್ರಧಾನವಸ್ತುಗಳು. ಈ ಮೇರೆಗೆ ಅವರು ಇಪ್ಪತ್ತಾರು ಸಂಸ್ಕೃತಿಗಳನ್ನು ಕೂಲಂಕಶ ವಿವರಣೆಗೆ ಒಳಪಡಿಸಿದ್ದಾರೆ. ಅವರ ಪ್ರಕಾರ ಪ್ರಸಿದ್ಧ ನಾಗರಿಕತೆಗಳ ಉದಯಕ್ಕೆ ಮೂರು ಅಂಶಗಳು ಕಾರಣ ೧. ಹೆಚ್ಚು ಆದರಣೀಯ ಅಥವ ಹೆಚ್ಚು ಅನಾದರಣೀಯವಲ್ಲದ ಭೌಗೋಳಿಕ ವಾತವರಣ ೨. ಸಮಾಜದಲ್ಲಿನ ಸೃಷ್ಟಿಕಾರಕ ಅಥವ ರಚನಾತ್ಮಕ ಅಲ್ಪಸಂಖ್ಯಾತರು ೩. ಸವಾಲು (ಪ್ರತಿಭಟನೆ), ಹಾಗೂ ಜವಾಬು (ಪ್ರತ್ಯುತ್ತರ) ಮತ್ತು ಹಿಂಜರಿಯುವುದು ಹಾಗೂ ಮರಳುವಿಕೆ ಇವುಗಳ ನಿರಂತರ ಪ್ರಕ್ರಿಯೆ, ಇದೇ ಆ ಮೂರು ಅಂಶಗಳು. ಸೃಷ್ಟಿಕಾರಕ ಅಲ್ಪಸಂಖ್ಯಾತರು ಮತ್ತು ಹೆಚ್ಚು ಆದರಣೀಯವು ಅಥವ ಹೆಚ್ಚು ಅನಾದರಣೀಯವಲ್ಲದ ಪರಿಸ್ಥಿತಿಯಲ್ಲಿರುವ ಪಂಗಡಗಳು ಮಾತ್ರ ನಾಗರಿಕತೆಯ ಹೊಸ್ತಿಲನ್ನು ಮೆಟ್ಟಿದವು. ಇವುಗಳಿಗೆ

ಹೊರತಾದ ಪಂಗಡಗಳು ನಾಗರಿಕತೆಯ ಕೆಳಸ್ತರದಲ್ಲಿ ಉಳಿದವೆಂದು ಅವರು ತಿಳಿಸುತ್ತಾರೆ. ಅವರ ಪ್ರಕಾರ ೨೬ ನಾಗರಿಕತೆಗಳಲ್ಲಿ ಒಂದು ಮಾತ್ರ ಪಾಶ್ಚಾತ್ಯ ನಾಗರಿಕತೆಯು ಇಂದಿಗೂ ಜೀವಂತವಾಗಿದೆ. ಆದರೆ ಅದೂ ಕೂಡ ಅವನತಿಯ ಹಾದಿಯಲ್ಲಿದೆ. ಇತರ ನಾಗರಿಕತೆಗಳು ಮರಣವನ್ನಪ್ಪಿವೆ ಅಥವಾ ಅರೆಜೀವ ಹೊಂದಿವೆ. ಇದು ಟಾಯನ್ ಬಿ ಅವರ ಇತಿಹಾಸ ಅಧ್ಯಯನದ ಮುಖ.

## ೨.೨ ಮಾರ್ಕ್ಸ್‌ನ ಇತಿಹಾಸ ಗ್ರಹಿಕೆ

ಮಾರ್ಕ್ಸ್‌ಗೆ ಚರಿತ್ರೆಯಲ್ಲಿ ವಿಶೇಷ ಆಸಕ್ತಿ. ಇವನು ಬರೆದ "ನೋಟ್ಸ್ ಆನ್ ಇಂಡಿಯನ್ ಹಿಸ್ಟರಿ" ಹಾಗೂ "ಜಾಗತಿಕ ಘಟನೆಗಳ ಸಂಗ್ರಹ"ಗಳನ್ನು ನೋಡಿದಾಗ ಮಾರ್ಕ್ಸ್ ಹೇಗೆ ಚಾರಿತ್ರಿಕ ಘಟನೆಗಳ ಮೂಲಕ ವರ್ಗ ಹೋರಾಟ ಹಾಗೂ ಶ್ರಮಿಕರ ಸುಲಿಗೆಗಳ ರೀತಿಯನ್ನು ಅಭ್ಯಾಸ ಮಾಡಿದನು ಎಂಬ ಅರಿವಾಗುತ್ತದೆ. ಚಾರಿತ್ರಿಕ ಬೆಳವಣಿಗೆಯಲ್ಲಿ ವಿವಿಧ ಹಂತಗಳಲ್ಲಿ ಹೇಗೆ ಪ್ರಗತಿಮಾರ್ಗದ ಆಸಕ್ತಿಗಳೊಡನೆ ಸಂಭಾಷಣೆ ನಡೆಯಿತೆಂಬುದನ್ನು ಗಮನಿಸಿದ್ದ ಎಂದೂ ತಿಳಿಯುತ್ತದೆ. ಮಾರ್ಕ್ಸ್ ಚರಿತ್ರೆಯ ಅಭ್ಯಾಸ ಬಹಳ ಮುಖ್ಯವೆಂದು ಭಾವಿಸಿದ್ದ ಎಂಗೆಲ್ಸ್ ಹೇಳುವಂತೆ "ಮಾರ್ಕ್ಸ್‌ನ ದೃಷ್ಟಿಯಲ್ಲಿ ವಿಜ್ಞಾನವು ಚಾರಿತ್ರಿಕ ಉದ್ದೇಶ, ಕ್ರಾಂತಿಕಾರಿ ಶಕ್ತಿ". ಹೀಗಾಗಿ ಚರಿತ್ರೆ–ವಿಜ್ಞಾನಗಳ ವೈಜ್ಞಾನಿಕ, ಚಾರಿತ್ರಿಕ ಅಭ್ಯಾಸ ಮಾಡಿ ಶ್ರಮಿಕರ ಕ್ರಾಂತಿಗೆ ಆ ಮೂಲಕ ಶ್ರಮಿಕರ ರಾಜ್ಯ ಸ್ಥಾಪನೆಗೆ ಒಂದು ಸಮಗ್ರ ಮಿಮಾಂಸವನ್ನು ಮಾರ್ಕ್ಸ್ ಒದಗಿಸಿದ.

ಮಾರ್ಕ್ಸ್ ಸಮಾಜದ ಬೆಳವಣಿಗೆಯನ್ನು ಅಭ್ಯಾಸ ಮಾಡಲು ವೈಜ್ಞಾನಿಕ ದೃಷ್ಟಿಯನ್ನು ಒದಗಿಸಿ, ಚರಿತ್ರೆಯನ್ನು ಕೂಡ ವೈಜ್ಞಾನಿಕ ಅಭ್ಯಾಸವಾಗಿ ಪರಿವರ್ತಿಸಿದನು. ಭೌತವಾದದ ಮೂಲ ತತ್ವಗಳನ್ನು ಮಾರ್ಕ್ಸ್ ಮಾನವ ಸಮಾಜ ಹಾಗೂ ಅದರ ಇತಿಹಾಸಕ್ಕೆ ವಿಸ್ತರಿಸಿದನು.

ಮಾರ್ಕ್ಸ್‌ಗಿಂತ ಪೂರ್ವದಲ್ಲಿ ಸಮಾಜಶಾಸ್ತ್ರದ ಅಭ್ಯಾಸ ವೈಜ್ಞಾನಿಕವಾಗಿರಲಿಲ್ಲ. ಭಾವನಾವಾದದ ದೃಷ್ಟಿ ಸಮಾಜಶಾಸ್ತ್ರದ ಅಭ್ಯಾಸಕ್ಕೆ ಬುನಾದಿಯಾಗಿತ್ತು. ಮಾರ್ಕ್ಸ್ ಪೂರ್ವದಲ್ಲಿ ಫ್ರೆಂಚ್ ಭೌತವಿಜ್ಞಾನಿಗಳು ಸಮಾಜದ ಪರಿಸರವು ಮಾನವನ ಮೇಲೆ ಪರಿಣಾಮ ಬೀರುತ್ತದೆಂದು ಸೂಚಿಸಿದ್ದರೂ, ಪರಿಸರವು ಮಾನವನ ಭಾವನೆಗಳಿಂದ ರೂಪುಗೊಳ್ಳತ್ತದೆಂಬ ತಪ್ಪು ಕಲ್ಪನೆಯನ್ನು ತಾಳಿದ್ದರು. "ಭಾವೆನಗಳು ಜಗತ್ತನ್ನು ಆಳುತ್ತದೆ **"Ideas Ruls The World"** ಎಂಬ ಅಳತೆಗೋಲಿನಿಂದ ಸಮಾಜದ ಬೆಳವಣಿಗೆಯನ್ನು ವೀಕ್ಷಿಸುತ್ತಿದ್ದರು.

ಅಂತಯೇ ಇತರ ಭಾವನಾವಾದಿಗಳೂ ತಮ್ಮ ತತ್ವಶಾಸ್ತ್ರವನ್ನು ಸಾಮಾಜಶಾಸ್ತ್ರದ ದೃಷ್ಟಿಯಿಂದ ಪ್ರತಿಪಾದಿಸಿದರು. ಅವರದೂ ಅವೈಜ್ಞಾನಿಕ ದೃಷ್ಟಿಯೇ ಆಗಿತ್ತು. ಹೆಗೆಲನು

ತತ್ವಶಾಸ್ತ್ರಕ್ಕೆ ಬಹುಪ್ರಧಾನ ಕಾಣಿಕೆಯನ್ನು ಅರ್ಪಿಸಿದ್ದರೂ ಚಾರಿತ್ರಿಕ ಅವಶ್ಯಕತೆಯ ಬಗ್ಗೆ ಅವನ ವಿಚಾರಗಳನ್ನು ಪರಿಶೀಲಿಸಿದಾಗ ಚರಿತ್ರೆಯನ್ನು ತಾರ್ಕಿಕ ದೃಷ್ಟಿಯಿಂದ ನೋಡಬೇಕೆಂಬ ಅಭಿಪ್ರಾಯವನ್ನು ಹೆಗೆಲನು ಪ್ರತಿಪಾದಿಸಿದರೂ ಸಮಾಜ ದೇವರ ಇಚ್ಛೆಯಂತೆ ನಡೆಯುತ್ತದೆ ಎಂಬ ದೋಷಯುಕ್ತ ನಿರ್ಧಾರಕ್ಕೆ ಬಂದನು. ಹೆಗೆಲನು ಚರಿತ್ರೆಯ ತತ್ವಶಾಸ್ತ್ರದ ಬಗ್ಗೆ ಹೇಳುತ್ತ "ದೇವರು ಜಗತ್ತನ್ನು ಆಳುತ್ತಾನೆ. ಅವನ ಆಳ್ವಿಕೆಯ ರೀತಿ ಅವನ ಉದ್ದೇಶಗಳ ಸಫಲತೆ ಇವೇ ಜಾಗತಿಕ ಇತಿಹಾಸ" ಎಂದಿದ್ದಾನೆ. ಇದನ್ನು ಗಮನಿಸಿದಾಗ ಹೆಗೆಲನು ತಾರ್ಕಿಕತೆಯ ಸೂತ್ರ ಹಿಡಿದರೂ ಭಾವನಾವಾದ ಮಾರ್ಗ ಹಿಡಿದನೆಂಬುದು ಸ್ಪಷ್ಟವಾಗುತ್ತದೆ. ಹೀಗಾಗಿ ಇದು ಅವೈಜ್ಞಾನಿಕವಾಯಿತು.

ಮಾರ್ಕ್ಸ್ ಪೂರ್ವದ ಸಮಾಜಶಾಸ್ತ್ರಜ್ಞರು ಚರಿತ್ರೆಕಾರರು ಇನ್ನೊಂದು ತಪ್ಪನ್ನು ಮಾಡಿದರು. "ಸಮಾಜದ ಬೆಳವಣಿಗೆ ಭಾವನೆಗಳಿಂದ ರೂಪುಗೊಳ್ಳುತ್ತವೆ. ಈ ಭಾವನೆಗಳು ಅಸಾಧರಣ ವ್ಯಕ್ತಿಗಳಿಂದ ಉದ್ಭವಗೊಳ್ಳುತ್ತವೆ. ಆದ್ದರಿಂದ ಅಸಾಧರಣ ವ್ಯಕ್ತಿಗಳೇ ಚರಿತ್ರೆಯ ನಿರ್ಮಾಪಕರು. ಈ ದೃಷ್ಟಿಯನ್ನು ಅವರು ತಾಳಿದವರಾದ್ದರಿಂದ ಚಾರಿತ್ರಿಕ ಬೆಳವಣಿಗೆಯಲ್ಲಿ ಜನತೆಯ ನಿರ್ಣಯಾತ್ಮಕ ವಾಕ್ಯವನ್ನು ಅವರು ಗುರುತಿಸಲಿಲ್ಲ. ಅವರು ಚಾರಿತ್ರಿಕ ಪ್ರಕ್ರಿಯೆ ತರ್ಕವಾದವನ್ನು ನಿರೂಪಿಸುವಲ್ಲಿ ಕೂಡ ಅಸಮರ್ಥರಾದರು. ಅವರು ಭಾವನಾವಾದಿಗಳಾದ್ದರಿಂದ ಸಮಾಜ ಜೀವನದ ಐಕ್ಯತೆ ಹಾಗೂ ಅಂತರ ಸಂಬಂಧಗಳನ್ನು ಅರಿತುಕೊಳ್ಳಲು ಅವರಿಗೆ ಚಾರಿತ್ರಿಕ ಘಟನೆಗಳ ಹಿನ್ನಲೆಯಲ್ಲಿಯ ಭೌತಮೂಲಗಳು ಹಾಗೂ ನಿಜವಾದ ಚಾಲನಶಕ್ತಿಗಳ ನಡುವಿನ ಸಂಬಂಧವೂ ತಿಳಿಯಲಿಲ್ಲ.

ಮಾರ್ಕ್ಸ್ ಹಾಗೂ ಎಂಗೆಲ್ಸ್ ಇವರು ಸಮಾಜದ ಆಳವಾದ ವಿಶ್ಲೇಷಣೆಯನ್ನು ಮಾಡಿ ಸಮಾಜದ ಬೆಳವಣಿಗೆಗೆ ತಮ್ಮ ಹೊಸ ತತ್ವವನ್ನು ಅಂದರೆ ಚಾರಿತ್ರಿಕ ಭೌತವಾದವನ್ನು ವಿಸ್ತರಿಸಿದರು. ಈ ಹೊಸ ದೃಷ್ಟಿ ಸಮಾಜದ ಬಗೆಗಿನ ಅಭಿಪ್ರಾಯದಲ್ಲಿ ಕ್ರಾಂತಿಯನ್ನೇ ಉಂಟುಮಾಡಿತು. ಮಾರ್ಕ್ಸ್ ಮತ್ತು ಏಂಗೆಲ್ಸ್ ಸಮಾಜವಿಜ್ಞಾನದಲ್ಲಿ ಭಾವನವಾದವನ್ನು ತಿರಸ್ಕರಿಸಿದರು. ಅವರು ತತ್ವಶಾಸ್ತ್ರವನ್ನು ಸಮಾಜಕ್ಕೆ ಅನ್ವಯಿಸುವ ಮೂಲ ಸಮಸ್ಯೆಯನ್ನು ಪರಿಹರಿಸಿದರಲ್ಲದೆ "ಸಾಮಾಜಿಕ ವಸ್ತುಸ್ಥಿತಿಯು ಸಾಮಾಜಿಕ ಪ್ರಜ್ಞೆಯನ್ನು ನಿರ್ಧರಿಸುತ್ತದೆ". **"Social Being Determines Social Consciousness"** ಎಂಬ ಚಾರಿತ್ರಿಕ ಭೌತವಾದದ ಪ್ರಧಾನ ತರ್ಕವನ್ನು ರೂಪಿಸಿದರು. ಸಾಮಾಜಿಕ ವಸ್ತುಸ್ಥಿತಿಯ ವಲಯವು ಸಮಾಜದ ಪ್ರಾಪಂಚಿಕ (ಭೌತ) ಜೀವನವನ್ನು ಒಳಗೊಂಡಿರುತ್ತದೆ. ಇಷ್ಟೇ ಅಲ್ಲದೆ ಪದಾರ್ಥ ಉತ್ಪಾದನೆಯ ಕ್ಷೇತ್ರದಲ್ಲಿ ಮಾನವನ ಕಾರ್ಯಚಟುವಟಿಕೆ ಹಾಗೂ ಉತ್ಪಾದನಾ ಪ್ರಕ್ರಿಯೆಯಲ್ಲಿ ಜನರ ನಡುವಿನ ಆರ್ಥಿಕ ಸಂಬಂಧವನ್ನು ಒಳಗೊಂಡಿರುತ್ತದೆ. ಸಾಮಾಜಿಕ ಪ್ರಜ್ಞೆಯು

ಜನತೆಯ ಕಾರ್ಯದಲ್ಲಿ ಮಾರ್ಗದರ್ಶನ ನೀಡುವ ತಾತ್ವಿಕ ಜೀವನ, ಭಾವನೆಗಳು, ತತ್ವಗಳು ಹಾಗೂ ಅಭಿಪ್ರಾಯಗಳನ್ನು ನಿರ್ಮಿಸುತ್ತದೆ.

ಮಾರ್ಕ್ಸ್ ಹಾಗೂ ಏಂಗೆಲ್ಸ್‌ರ ದೃಷ್ಟಿಯಲ್ಲಿ ಸಾಮಾಜಿಕ ವಸ್ತುಸ್ಥಿತಿ ಪ್ರಾಥಮಿಕವಾದದ್ದು. ಸಾಮಾಜಿಕ ಪ್ರಜ್ಞೆ ಎರಡನೆಯದು. ಇದನ್ನು ಸಮರ್ಥಿಸಲು ಇವರು ಕೊಟ್ಟ ಉದಾಹರಣೆ– ಜನತೆಯು ವಿಜ್ಞಾನ, ಕಲೆ, ತತ್ವಜ್ಞಾನ ಮುಂತಾದವುಗಳಲ್ಲಿ ತೊಡಗಬೇಕಾದರೆ ತಮಗೆ ಅನ್ನ ಅರಿವೆ ಹಾಗೂ ವಾಸಸ್ಥಳ ಬೇಕು; ಇದಕ್ಕಾಗಿ ಅವರು ಕೆಲಸ ಮಾಡಬೇಕು, ಉತ್ಪಾದನೆ ಮಾಡಬೇಕು, ಆದ್ದರಿಂದ ಜೀವಂತವಿರಲು ಬೇಕಾದ ಪದಾರ್ಥಗಳ ಉತ್ಪಾದನೆ ಹಾಗೂ ಇದರ ಪರಿಣಾಮವಾಗಿ ಜನತೆ ಸಾಧಿಸುವ ಆರ್ಥಿಕ ಅಭಿವೃದ್ಧಿಯ ಪ್ರಮಾಣ, ಇವು ಇದೇ ರಾಜ್ಯದ ಸಂಸ್ಥೆಗಳು, ಕಾಯ್ದೆಯ ಕಲ್ಪನೆಗಳ ಮತೀಯ ಅಭಿಪ್ರಾಯಗಳ ಬುನಾದಿಗೆ ಕಾರಣವಾಗುತ್ತದೆ. ಈ ನಿಟ್ಟಿನಲ್ಲಿ ನೋಡಿದಾಗ ಸಮಾಜಶಾಸ್ತ್ರಜ್ಞರು ಮಾರ್ಕ್ಸ್ ಪೂರ್ವ ಹಂತದಲ್ಲಿ ಕೊಡುವ ವಿವರಣೆಯು ಅದರ ತದ್ವಿರುದ್ಧವಾಗಿವೆ ಎಂದು ತಿಳಿಯುತ್ತದೆ. ಭಾವನವಾದಿ ಸಮಾಜಶಾಸ್ತ್ರಜ್ಞರು ಭಾವನೆಗಳು ಸಮಾಜದ ಬೆಳವಣಿಗೆಯನ್ನು ರೂಪಿಸುತ್ತವೆ ಎಂದು ಹೇಳುತ್ತಾರೆ. ಇದು ಅವೈಜ್ಞಾನಿಕ. ಆದರೆ ಚಾರಿತ್ರಿಕ ಭೌತವಾದವು ಯಥಾರ್ಥವಾಗಿ ವೈಜ್ಞಾನಿಕವಾಗಿದೆ. ಇದು ಚರಿತ್ರೆಯ ಭೌತಿಕ ಉಲ್ಲೇಖವಾಗಿದೆ.

ಮಾರ್ಕ್ಸ್ ಮತ್ತು ಏಂಗೆಲ್ಸ್ ರವರ ದೃಷ್ಟಿಯಲ್ಲಿ ಜನತೆ ಅಂದರೆ ಶ್ರಮಿಕವರ್ಗ ಇವರೆ ನಿಜವಾದ ಇತಿಹಾಸ ನಿರ್ಮಾಪಕರು. ಜನತೆಯು ತಮ್ಮ ದುಡಿಮೆಯಿಂದ ಪದಾರ್ಥ ಸಂಪತ್ತನ್ನು ಉತ್ಪಾದಿಸುತ್ತದೆ. ಲಕ್ಷಾಂತರ ಸ್ತ್ರೀ ಪುರುಷರ ದುಡಿಮೆಯೇ ಮಾನವ ಜನಾಂಗದ ಜೀವನ ಹಾಗೂ ಪ್ರಗತಿಗೆ ಬುನಾದಿ.

ಮಾರ್ಕ್ಸ್ ಹಾಗೂ ಏಂಗೆಲ್ಸ್ ಚರಿತ್ರೆಯ ವೈಜ್ಞಾನಿಕ ದೃಷ್ಟಿಯಿಂದ ಸಮಾಜ ಬೆಳವಣಿಗೆಯ ವಾಸ್ತವಿಕ ತರ್ಕ ಪ್ರತಿಪಾದನೆ ಮಾಡಿದ್ದಾರೆ. ಇದರಿಂದಾಗಿ ಚರಿತ್ರೆ ಅಸಂಬದ್ಧ ವಿಷಯಗಳ ಸಂಗ್ರಹ ಎಂಬ ಅಪವಾದದಿಂದ ಪಾರಾಗಿ ತಾರ್ಕಿಕ ನಿಯಮಗಳನ್ನು ಒಳಗೊಂಡ ಸಮಗ್ರ ಹಾಗೂ ಸುಸಂಗತ ವಸ್ತುಸ್ಥಿತಿಗಳ ಪ್ರಕ್ರಿಯೆಯಾಗಿದೆ.

ಚಾರಿತ್ರಿಕ ಭೌತವಾದವು ಸಮಾಜವನ್ನು ಅದರ ಬೆಳವಣಿಗೆಯ ನಿಯಮಗಳನ್ನು ಅಭ್ಯಾಸ ಮಾಡುತ್ತದೆ. ಈ ನಿಯಮಗಳು ಪ್ರಕೃತಿ ನಿಯಮಗಳು ಎಷ್ಟು ವಾಸ್ತವವೋ ಅಷ್ಟೇ ವಾಸ್ತವವಿದ್ದು, ಮಾನವ ಪ್ರಜ್ಞೆಯಿಂದ ಸ್ವತಂತ್ರವಾಗಿದೆ. ಈ ಪ್ರಕೃತಿ ನಿಯಮಗಳನ್ನು ಹೇಗೆ ಮಾನವನು ಅರಿತುಕೊಂಡು ತನ್ನ ಕಾರ್ಯಕ್ಕೆ ಪ್ರಯೋಗಿಸುತ್ತಾನೋ ಹಾಗೆಯೇ ಚಾರಿತ್ರಿಕ ಭೌತವಾದದ ನಿಯಮಗಳನ್ನು ಮಾನವನು ಪ್ರಯೋಗಿಸುವ ಕಾರ್ಯಚಟುವಟಿಕೆಗೆ

ಉಪಯೋಗಿಸಲು ಸಾಧ್ಯ. ಆದರೆ ಪ್ರಕೃತಿ ನಿಯಮಗಳಿಗೂ ಸಮಾಜ ನಿಯಮಗಳಿಗೂ ಕೆಲ ಅವಶ್ಯಕ ವ್ಯತ್ಯಾಸಗಳಿವೆ. ಪ್ರಕೃತಿ ನಿಯಮಗಳು ಕುರುಡು ಹಾಗೂ ಸ್ವಪ್ರೇರಿತ ಶಕ್ತಿಗಳ ಕಾರ್ಯವನ್ನು ಪ್ರತಿಬಿಂಬಿಸಿದರೆ, ಸಮಾಜ ಬೆಳವಣಿಗೆಯ ನಿಯಮಗಳು ಜನತೆ ಬುದ್ಧಿಜೀವಿಗಳಾಗಿ ನಿರ್ದಿಷ್ಟ ಗುರಿಗಳನ್ನಿರಿಸಿಕೊಂಡು ಆ ಗುರಿಗಳ ಸಾಧನೆಗೆ ಕಾರ್ಯಚಟುವಟಿಕೆಯ ಮೂಲಕ ಆವಿರ್ಭಾವಗೊಳ್ಳುತ್ತವೆ.

ಸಾಮಾಜಿಕ ವಿಜ್ಞಾನಗಳಿಗೂ ಚಾರಿತ್ರಿಕ ಭೌತವಾದಕ್ಕೂ ಇರುವ ಮುಖ್ಯ ವ್ಯತ್ಯಾಸವೆಂದರೆ ಚಾರಿತ್ರಿಕ ಭೌತವಾದವು ಸಮಾಜ ಬೆಳವಣಿಗೆಯ ಅತಿ ಸಾಮಾನ್ಯ ನಿಯಮಗಳನ್ನು ಅಭ್ಯಾಸ ಮಾಡುತ್ತದೆ. ಇದು ಸಾಮಾಜಿಕ ಜೀವನದ ಘಟನೆಗಳ ವೈಜ್ಞಾನಿಕ, ತಾರ್ಕಿಕ, ಭೌತಿಕ, ಉಲ್ಲೇಖವನ್ನು ಒದಗಿಸುತ್ತದೆ. ಸಾಮಾಜಿಕ ವಸ್ತುಸ್ಥಿತಿ ಹಾಗೂ ಸಾಮಾಜಿಕ ಪ್ರಜ್ಞೆ ಇವುಗಳ ಸಂಬಂಧ ಜನತೆಯ ಜೀವನದಲ್ಲಿ ಪದಾರ್ಥ ಉತ್ಪಾದನೆಯ ಮಹತ್ವ ಸಾಮಾಜಿಕ ಸಂಸ್ಥೆಗಳು ಹಾಗೂ ಆಯಾ ಸಂಸ್ಥೆಗಳಿದ್ದ ವೇಳೆಯಲ್ಲಿ ರೂಢಿಯಲ್ಲಿದ್ದ ಸಾಮಾಜಿಕ ಭಾವನೆಗಳು ಹಾಗೂ ಅವುಗಳ ಜನನ ಮಹತ್ವ ಮುಂತಾದ ಚಾರಿತ್ರಿಕ ಬೆಳವಣಿಗೆಯ ಮುಖ್ಯವಾದ ಸಾಮಾನ್ಯ ಸಂಸ್ಥೆಗಳು ಇವುಗಳನ್ನೆಲ್ಲ ಚಾರಿತ್ರಿಕ ಭೌತವಾದ ವಿಶ್ಲೇಷಿಸುತ್ತದೆ. ಇದಲ್ಲದೆ ವರ್ಗಗಳ ಜನನ, ವರ್ಗ ಹೋರಾಟದ ಮಹತ್ವ, ಚರಿತ್ರೆಯ ನಿರ್ಮಾಣದಲ್ಲಿ ವ್ಯಕ್ತಿಗಳ ಜನತೆಯ ಪಾತ್ರ, ಸಾಮಾಜಿಕ ಕ್ರಾಂತಿಗಳು ಹಾಗೂ ಚರಿತ್ರೆಯ ಬೆಳವಣಿಗೆಯಲ್ಲಿ ಅವುಗಳ ಮಹತ್ವ ಮುಂತಾದ ಅಂಶಗಳನ್ನು ಚಾರಿತ್ರಿಕ ಭೌತವಾದ ಅಭ್ಯಸಿಸುತ್ತದೆ. ಇತಿಹಾಸದಾದ್ಯಂತ ಜನತೆಯ ಪ್ರಾಯೋಗಿಕ ಅನುಭವಗಳನ್ನು ಹಾಗೂ ಸಾಮಾಜಿಕ ವಿಜ್ಞಾನಗಳ ಸಾಧನೆಗಳನ್ನು ಕ್ರೋಡೀಕರಿಸಿಕೊಂಡು ಚಾರಿತ್ರಿಕ ಭೌತವಾದ ಉದ್ಭವವಾಯಿತು. ಆದ್ದರಿಂದ ಚಾರಿತ್ರಿಕ ಭೌತವಾದವಿಲ್ಲದೆ ಯಾವ ಸಾಮಾಜಿಕ ವಿಜ್ಞಾನವೂ ಪರಿಪೂರ್ಣತೆಯ ಮಟ್ಟ ಮುಟ್ಟಲಾರದು. ಯಾಕೆಂದರೆ ಚಾರಿತ್ರಿಕ ಭೌತವಾದವು ಎಲ್ಲ ಸಾಮಾಜಿಕ ವಿಜ್ಞಾನಗಳಿಗೆ ಕ್ರಮಬದ್ಧ ಬುನಾದಿಯಾಗಿದೆ.

ಚಾರಿತ್ರಿಕ ಭೌತವಾದದ ಜ್ಞಾನದಿಂದ ಸಾಮಾಜಿಕ ಘಟನೆಗಳ ಅರ್ಥವತ್ತತೆ ತಿಳಿಯುತ್ತದೆ. ಅಷ್ಟೇ ಅಲ್ಲ ಇದರಿಂದ ಸಾಮಾಜಿಕ ಜೀವನದ ಮೇಲೆ ಪ್ರಭಾವ ಬೀರಿ ಅದನ್ನು ಶ್ರಮಿಕರ ಹಿತಕ್ಕಾಗಿ ಪರಿವರ್ತಿಸಲು ಕೂಡ ಸಾಧ್ಯವಾಗುತ್ತದೆ. ಇದರರ್ಥ ಮಾನವನ ಪ್ರಗತಿಪರ ಬೆಳವಣಿಗೆಯ ಚಾರಿತ್ರಿಕ ಅವಶ್ಯಕತೆಯನ್ನು ಗುರುತಿಸಿದಂತಾಗುತ್ತದೆ. ಈ ಬೆಳವಣಿಗೆಯ ಕ್ರಿಯೆಯಲ್ಲಿ ಸುಸಂಗತ ಸ್ವಾಂತಂತ್ರ್ಯ ಲಭ್ಯವಾಗುತ್ತದೆ.

ಈ ಹಂತದಲ್ಲಿ ಚಾರಿತ್ರಿಕ ಅವಶ್ಯಕತೆ ಹಾಗೂ ಮಾನವ ಸ್ವಾತಂತ್ರ್ಯಗಳ ಅರ್ಥವಿಸ್ತಾರವನ್ನು ತಿಳಿದುಕೊಳ್ಳವುದು ಅವಶ್ಯ; ಪ್ರತಿಗಾಮಿ ಸಮಾಜಶಾಸ್ತ್ರಜ್ಞರು ಹಾಗೂ ಧರ್ಮಶಾಸ್ತ್ರಜ್ಞರು ಚಾರಿತ್ರಿಕ

ಅವಶ್ಯಕತೆ ಎಂಬ ಅಂಶಕ್ಕೆ ಮನ್ನಣೆ ಕೊಡುವುದಿಲ್ಲ. ಇವರು ದೇವರ ಪೂರ್ವ ನಿರ್ಧಾರದಂತೆ ಎಲ್ಲ ಚಾರಿತ್ರಿಕ ಘಟನೆಗಳು, ಪ್ರಕ್ರಿಯೆಗಳು ನಡೆಯುತ್ತವೆ ಎಂಬುದು ನಂಬುತ್ತಾರೆ. ಪರಮಾತ್ಮನ ಆಜ್ಞೆ-ಅನುಮತಿಯಿಲ್ಲದೆ ತೃಣವೂ ಚಲಿಸಲಾರದು ಎಂದು ಇವರ ಪ್ರತಿಪಾದನೆ. ಆದರೆ ವಾಸ್ತವಿಕ ಅವಶ್ಯಕತೆಯನ್ನು ಅರ್ಥಮಾಡಿಕೊಂಡಾಗ ಮಾನವನು ತನ್ನ ಇಚ್ಛೆಗೆ ಪ್ರಕೃತಿಯ ನಿಯಮಗಳನ್ನಷ್ಟೇ ಅಲ್ಲ, ಸಾಮಾಜಿಕ ಘಟನೆಗಳನ್ನು ಶರಣಾಗತಗೊಳಿಸಿಕೊಳ್ಳುವುದು ಸಾಧ್ಯವೆಂದು ಪ್ರಾಯೋಗಿಕ ಅನುಭವದಿಂದ ಸಿದ್ಧವಾಗಿದೆ. ಆದ್ದರಿಂದ ವಾಸ್ತವಿಕ ಅವಶ್ಯಕತೆಯ ಜ್ಞಾನ ಹಾಗೂ ಮಾನವನ ಹಿತಕ್ಕಾಗಿ ಅದರ ಬಳಕೆ, ಇವೆ ಮಾನವ ಸ್ವಾತಂತ್ರ್ಯವನ್ನು ನಿರ್ಮಾಣ ಮಾಡುತ್ತವೆ.

ಸ್ವಾತಂತ್ರ್ಯವು ವಾಸ್ತವಿಕ ಅವಶ್ಯಕತೆಯನ್ನು ನಾಶ ಮಾಡುವುದಿಲ್ಲ. ಮನುಷ್ಯ ಅವಶ್ಯಕತೆಯನ್ನರಿತು ಅದನ್ನು, ತನ್ನ ಗುರಿ ಸಾಧನೆಗಾಗಿ ಬಳಸುತ್ತಾನೆ ಎಂದು ತೋರುತ್ತದೆ. ಮಾನವನ ಸ್ವಾತಂತ್ರ್ಯವು ಸಮಾಜದ ಹಾಗೂ ಪ್ರಕೃತಿಯ ನಿಯಮಗಳ ಕಾಲ್ಪನಿಕ ಸ್ವಾತಂತ್ರ್ಯದಲ್ಲಿ ಅಡಕವಾಗಿರುವುದಿಲ್ಲ. ಆದರೆ ಈ ನಿಯಮಗಳನ್ನು ಅರ್ಥ ಮಾಡಿಕೊಂಡು ಅವುಗಳನ್ನು ಮಾನವ ಅವಶ್ಯಕತೆಗಳ ಪೂರೈಕೆಗೆ ಬಳಸುವುದರಲ್ಲಿ ಅಡಕವಾಗಿದೆ. ಸುಸಂಗತವಾದ ಸ್ವಾತಂತ್ರ್ಯವನ್ನು ಸ್ಥಾಪಿಸಬೇಕಾದರೆ ಉತ್ಪಾದನೆ ಹಾಗೂ ರಾಜಕೀಯ ರಂಗಗಳಲ್ಲಿ ಮಾರ್ಕ್ಸ್‌ವಾದದ ಆಧಾರದ ಮೇಲೆ ಕಾರ್ಯೋನ್ಮುಖವಾಗುವ ಪ್ರಜ್ಞಾವಂತ ಜನತೆಯ ಕಾರ್ಯ ಚಟುವಟಿಕೆ ಬೇಕು. ಅವಶ್ಯಕತೆ ಹಾಗೂ ಸ್ವಾತಂತ್ರ್ಯ ಇವೆರಡೂ ಸಂಯೋಜಿತವಾಗಿ ಸಾಗುವಂತೆ ಮಾಡುವ ಚಾರಿತ್ರಿಕ ಭೌತವಾದ ಸಮತಾವಾದದ ಸ್ಥಾಪನೆಗೆ ನೆರವಾಗುತ್ತದೆ.

**ಸಾಮಾಜಿಕ-ಆರ್ಥಿಕ ನಿರ್ಮಾಣ**

ಚಾರಿತ್ರಿಕ ಭೌತವಾದದ ಒಂದು ಮುಖ್ಯ ಪ್ರತಿಪಾದನೆ ಸಾಮಾಜಿಕ, ಆರ್ಥಿಕ ನಿರ್ಮಾಣ ಸಿದ್ಧಾಂತ. ಈ ಸಿದ್ಧಾಂತದ ಮೂಲವು ಚಾರಿತ್ರಿಕವಾಗಿ ಖಚಿತವಾದ ಪದಾರ್ಥ ಸಂಪತ್ತಿನ ಉತ್ಪಾದನಾ ವಿಧಾನ. ಆದರೆ ಉತ್ಪಾದನೆಯು ಸಾಧ್ಯವಾಗಬೇಕಾದರೆ ಕೆಲವು ಖಚಿತ ಸಹಜ ಪರಿಸ್ಥಿತಿಗಳು ಬೇಕಾಗುತ್ತವೆ. ಇವುಗಳೆಂದರೆ ಭೌಗೋಳಿಕ ಪರಿಸರ ಹಾಗೂ ಜನಸಂಖ್ಯೆ.

ಮಾನವ ಸಮಾಜ ಹಾಗೂ ಪ್ರಕೃತಿ ಇವು ಅವಿಭಾಜ್ಯ ಅಂಗಗಳು, ಇವು ಒಂದರ ಮೇಲೊಂದು ಪರಸ್ಪರ ಪರಿಣಾಮ ಬೀರುತ್ತವೆ. ಆದರೆ ಸಮಾಜದೊಡನೆ ವಿಶೇಷ ಸಂಬಂಧ ಹೊಂದಿರುವುದು ಭೌಗೋಳಿಕ ಪರಿಸರ. ಭೌಗೋಳಿಕ ಪರಿಸರವು ಮಾನವನ ಉತ್ಪಾದನಾ ಕ್ರಿಯೆಗೆ ಅವಶ್ಯಕ. ಪ್ರಕೃತಿಯೊಡನೆ ಹೋರಾಡುವುದರಿಂದ ಮಾನವನು ತನ್ನ ಜೀವನೋಪಾಯಕ್ಕೆ ಬೇಕಾದುದನ್ನು ಪಡೆಯುತ್ತಾನೆ. ಆದ್ದರಿಂದ ಪ್ರಕೃತಿಯೊಡನೆ ಪರಸ್ಪರ ಕ್ರಿಯೆಯಿಲ್ಲದೆ ದುಡಿಮೆಯಿಲ್ಲ. ಅಂತೆಯೇ ಉತ್ಪಾದನಾ ಕಾರ್ಯಚಟುವಟಿಕೆಯನ್ನು ಭಾವಿಸಲು ಸಾಧ್ಯವಿಲ್ಲ.

ಆದರೆ ಸಮಾಜ ಬೌಗೋಳಿಕ ಪರಿಸರವನ್ನು ಎಷ್ಟರ ಮಟ್ಟಿಗೆ ಪ್ರಭಾವಗೊಳಿಸುತ್ತದೆ ಎಂಬುದು ಸಮಾಜದಲ್ಲಿ ಯಾವ ಪದ್ಧತಿ ಜಾರಿಯಲ್ಲಿದೆಯೋ ಅದರ ಮೇಲೆ ಆಧಾರಪಟ್ಟಿರುತ್ತದೆ. ಉತ್ಪಾದನಾ ಮಟ್ಟವನ್ನು ಅವಲಂಬಿಸಿರುತ್ತದೆ. ಸಮಾಜವಾದಿ ಪದ್ಧತಿಯು ಪ್ರಕೃತಿಯನ್ನು ನಿರ್ಮಾಣಗೊಳಿಸುತ್ತದೆ. ಏಕೆಂದರೆ ಚರಿತ್ರೆಯಲ್ಲೇ ಪ್ರಪ್ರಥಮವಾಗಿ ಪ್ರಕೃತಿಯನ್ನು ಉದ್ದೇಶಪೂರಿತವಾಗಿಯೂ ಯೋಜನಾಬದ್ಧವಾಗಿಯೂ ಜನತೆಯ ಕಲ್ಯಾಣಕ್ಕಾಗಿ ಬಳಸಲು ಸಮಾಜಕ್ಕೆ ಈ ಪದ್ಧತಿಯಲ್ಲಿ ಅವಕಾಶ ಸಿಗುತ್ತದೆ. ಆದರೆ ಭೌಗೋಳಿಕ ಪರಿಸರವು ಸಮಾಜ ಬೆಳವಣಿಗೆಗೆ ನಿರ್ಣಾಯಕ ಕಾರಣವಲ್ಲ. ಸಮಾಜ ಜೀವನಕ್ಕೆ ಒಂದು ಅವಶ್ಯಕವಷ್ಟೇ.

ಜನಸಂಖ್ಯೆ ಸಮಾಜದ ಜೀವನಕ್ಕೆ ಅವಶ್ಯವಾದ ಇನ್ನೊಂದು ಅಂಶ. ಉತ್ಪಾದನೆಯು ಜನತೆ ಇಲ್ಲದೆ ಅಸಾಧ್ಯ. ಏಕೆಂದರೆ ದುಡಿಮೆಯು ಪ್ರಕೃತಿಯನ್ನು ಮಾನವನ ಅವಶ್ಯಕತೆಗಳ ಪೂರೈಕೆಗೆ ಅಧೀನಗೊಳಿಸಬಲ್ಲ ಬಲಿಷ್ಠ ಶಕ್ತಿ. ದುಡಿಮೆ ಜನಸಂಖ್ಯೆಗೆ ನೇರ ಸಂಬಂಧ ಹೊಂದಿದ್ದು, ಹೆಚ್ಚು ಜನತೆಯಾದರೆ ಹೆಚ್ಚು ದುಡಿಮೆ. ಆದರೆ ಜನಸಂಖ್ಯೆ ಸಮಾಜದ ಬೆಳವಣಿಗೆಯಲ್ಲಿ ನಿರ್ಣಾಯಕ ಪಾತ್ರ ವಹಿಸುತ್ತದೆಯೇ? ಇಲ್ಲ, ಏಕೆಂದರೆ ಹೆಚ್ಚು ಜನಸಂಖ್ಯೆಯಿದ್ದ ರಾಷ್ಟ್ರಗಳಲ್ಲಿ ಮಂದಗತಿಯ ಸಮಾಜ ಬೆಳವಣಿಗೆ ಹಾಗೂ ಕಡಿಮೆ ಜನಸಂಖ್ಯೆಯಿದ್ದ ರಾಷ್ಟ್ರಗಳಲ್ಲಿ ಶೀಘ್ರಗತಿಯ ಬೆಳವಣಿಗೆಯನ್ನು ಕಾಣುತ್ತೇವೆ. ಆದ್ದರಿಂದ ಕೇವಲ ಜನಸಂಖ್ಯೆಯೊಂದೇ ಸಮಾಜ ಬೆಳವಣಿಗೆಯನ್ನು ನಿರ್ಧರಿಸುವುದಿಲ್ಲ. ಇದು ಸಮಾಜ ಜೀವನವನ್ನು ನಿರ್ಧರಿಸುವ ಒಂದು ಅಂಶವಷ್ಟೆ.

ಜನಸಂಖ್ಯೆಯ ಬಗ್ಗೆ ಮಾಲ್‌ಥೂಸನು ಒಂದು ಸಿದ್ಧಾಂತ ಪ್ರತಿಪಾದಿಸಿದ. ಜೀವನೋಪಾಯ ಸಾಧನೆಗಳು ಬೆಳಯುವುದಕ್ಕಿಂತ ಶೀಘ್ರಗತಿಯಲ್ಲಿ ಜನಸಂಖ್ಯೆ ಬೆಳೆಯುತ್ತದೆ. ಇದೇ ಬಡತನ, ನಿರುದ್ಯೋಗ ಮುಂತಾದ ಕಷ್ಟಗಳಿಗೆ ಕಾರಣ. ಇದನ್ನು ಪರಿಹರಿಸಲು ಜನನ ನಿಯಂತ್ರಣವನ್ನು ಪ್ರತಿಪಾದಿಸಿದನು. ಆದರೆ ಮಾರ್ಕ್ಸ್, ಜನತೆಯ ಬಡತನ ಹಾಗೂ ಅನ್ನವಿಲ್ಲದೆ ಉಪವಾಸ ಬೀಳುವ ಸ್ಥಿತಿಗಳು ಬಂಡವಾಳಶಾಹಿ ಪದ್ಧತಿಯಲ್ಲಿ ಬೇರುರಿವೆಯೇ ಹೊರತು ಜನಸಂಖ್ಯೆಯ ನಿಯಮಗಳಲ್ಲಿಯಲ್ಲಾ ಎಂದು ನಿರೂಪಿಸಿದನು. ಬಡತನಕ್ಕೆ ಬಂಡವಾಳಶಾಹಿಯಲ್ಲಿ ರೂಢಿಯಲ್ಲಿರುವ ವಿತರಣ ಪದ್ಧತಿಯೂ ಕಾರಣವಾಗಿದೆ. ಬಂಡವಾಳಶಾಹಿಗಳು ಬಹುಪಾಲು ಲಾಭವನ್ನು ತಾವು ಸುಲಿಗೆ ಮಾಡಿ ಶ್ರಮಿಕರಿಗೆ ಕನಿಷ್ಟ ಜೀವನಾವಶ್ಯಕಗಳನ್ನು ಕೂಡ ಕೊಡುವುದಿಲ್ಲ ಎಂಬುದಾಗಿ ಪ್ರತಿಪಾದಿಸಿದನು. ಮಾಲಥೂಸನ ಸಿದ್ಧಾಂತವನ್ನು ಗಂಭೀರವಾಗಿ ತೆಗೆದುಕೊಳ್ಳುವಲ್ಲಿ ತಿರುಳಿಲ್ಲ ಎಂದು ರಷ್ಯಾದಲ್ಲಿಯ ಸಮಾಜವಾದದ ಪದ್ಧತಿಯನ್ನು ಅಭ್ಯಾಸ ಮಾಡಿದಾಗ ತಿಳಿಯುತ್ತದೆ.

ಆದ್ದರಿಂದ ಭೌಗೋಳಿಕ ಪರಿಸರ ಅಥವಾ ಜನಸಂಖ್ಯೆ ಇವೆರಡೂ ಸಾಮಾಜಿಕ ಬೆಳವಣಿಗೆಗೆ ನಿರ್ಣಾಯಕ ಕಾರಣಗಳಲ್ಲ. ಇವು ಸಮಾಜ ಜೀವನವನ್ನು ನಿರ್ಧರಿಸುವ ಅಂಶಗಳಷ್ಟೇ. ಸಾಮಾಜಿಕ ಬೆಳವಣಿಗೆಯ ನಿರ್ಣಾಯಕ ಅಂಶ ಪದಾರ್ಥ ಸಂಪತ್ತಿನ ಉತ್ಪಾದನಾ ವಿಧಾನ. ಸಾಮಾಜಿಕ ಬೆಳವಣಿಗೆ ಹಾಗೂ ಉತ್ಪಾದನಾ ವಿಧಾನಗಳು ಒಂದನ್ನೊಂದು ಹೇಗೆ ಆಧಾರಪಟ್ಟಿವೆ ಎಂಬುದನ್ನು ಪರಿಶೀಲಿಸೋಣ.

ಅನ್ನ, ಬಟ್ಟೆ, ವಾಸಸ್ಥಾನ ಇವು ಜೀವನದ ಅತ್ಯಾವಶ್ಯಕತೆಗಳು. ಪ್ರಕೃತಿಯು ಈ ಮೂಲ ಅವಶ್ಯಕತೆಗಳನ್ನು ತಾನಾಗಿಯೇ ತಯಾರಿಸಿ ಕೊಡುವುದಿಲ್ಲ. ಈ ಅವಶ್ಯಕತೆಗಳ ಉತ್ಪಾದನೆಗೆ ಜನ ದುಡಿಯಬೇಕಾಗುತ್ತದೆ. ದುಡಿಮೆ ಹಾಗೂ ಉತ್ಪಾದನಾ ಕಾರ್ಯ ಚಟುವಟಿಕೆಗಳಿಲ್ಲದೆ ಮಾನವ ಜೀವನವೇ ಸಾಧ್ಯವಾಗುವುದಿಲ್ಲ. ಆದ್ದರಿಂದ ಪದಾರ್ಥ ಸಂಪತ್ತಿನ ಉತ್ಪಾದನೆಯೇ ಸಾಮಾಜಿಕ ಬೆಳವಣಿಗೆಯಲ್ಲಿ ಮುಖ್ಯ ನಿರ್ಣಾಯಕ ಅಂಶ. ದುಡಿಮೆಯ ಪ್ರತಿಕ್ರಿಯೆಯಲ್ಲಿ ಜನತೆ ಪ್ರಕೃತಿಯ ವಸ್ತುಗಳನ್ನು ತಮ್ಮ ಅವಶ್ಯಕತೆಗಳ ಪೂರೈಕೆಗೆ ಹೊಂದುವಂತೆ ರೂಪಾಂತರಿಸುತ್ತಾರೆ. ಆದ್ದರಿಂದ ವಸ್ತು ಉತ್ಪಾದನೆಯು ದುಡಿಮೆಗೆ ಬೇಕಾದ ವಸ್ತುಗಳು ಹಾಗೂ ದುಡಿಮೆಯ ಸಾಧನೆಗಳು ಇವೆರಡೂ ಇಲ್ಲದೆ ಸಾಧ್ಯವೇ ಇಲ್ಲ. ದುಡಿಮೆಗೆ ಬೇಕಾದ ವಸ್ತುಗಳು ಎಂದರೆ ಪ್ರಕೃತಿಯ ಯಾವ ಪದಾರ್ಥಗಳ ಮೇಲೆ ಮಾನವನ ದುಡಿಮೆ ಬಳಸಲಾಗುತ್ತೋ ಅವು. ದುಡಿಮೆಯ ಸಾಧನೆಗಳೆಂದರೆ ಯಂತ್ರಗಳು, ಉಪಕರಣಗಳು, ಉತ್ಪಾದನಾ ಸ್ಥಳ, ಸಾರಿಗೆ ಮುಂತಾದವು. ದುಡಿಮೆಗಾಗಿ ಬೇಕಾದ ವಸ್ತುಗಳು ಹಾಗೂ ದುಡಿಮೆಯ ಉಪಕರಣಗಳು ಕೂಡಿ ಉತ್ಪಾದನೆಯ ಸಾಧನಗಳಾಗುತ್ತವೆ.

ಉತ್ಪಾದನೆಗೆ ಉಪಕರಣಗಳು ಬಹಳ ಮುಖ್ಯ. ಏಕೆಂದರೆ ಜನತೆ ಪ್ರಕೃತಿಯಲ್ಲಿಯ ಪದಾರ್ಥಗಳನ್ನು ಮಾನವ ಅವಶ್ಯಕ ಪದಾರ್ಥಗಳಾಗಿ ಪರಿವರ್ತಿಸಲು ಬಳಸುವುದು ಈ ಉಪಕರಣಗಳನ್ನೇ. ಅಂತೆಯೇ ದುಡಿಮೆಯ ಉಪಕರಣಗಳಿಲ್ಲದೆ ಪ್ರಕೃತಿಯು ತನ್ನ ಸಂಪತ್ತನ್ನು ಬಿಟ್ಟುಕೊಡುವುದಿಲ್ಲ, ಆದ್ದರಿಂದ ಉತ್ಪಾದನೆಗೆ ಕೇವಲ ಮಾನವನ ಶಕ್ತಿ ಸಾಲದು, ದುಡಿಮೆಯ ಉಪಕರಣಗಳೂ ಬೇಕಾಗುತ್ತವೆ. ಈ ಉಪಕರಣಗಳಿಂದ ಮಾನವ ತನ್ನ ಬದುಕಿಗೆ ಅವಶ್ಯಕವಾಗಿ ಬೇಕಾದಷ್ಟೂ ಗಳಿಸಬಹುದು. ಉಪಕರಣಗಳು ಉತ್ತಮವಾಗಿದ್ದರೆ ಅವಶ್ಯಕತೆಗಿಂತ ಹೆಚ್ಚು ದುಡಿಯಬಹುದು, ಸ್ವಲ್ಪ ಹೆಚ್ಚು ಸಂಪಾದಿಸಬಹುದು.

ಆದರೆ ದುಡಿಮೆಯ ಉಪಕರಣಗಳು ತಾವಗಿಯೇ ಪದಾರ್ಥ ಸಂಪತ್ತನ್ನು ಉತ್ಪಾದಿಸುವುದಿಲ್ಲ. ಅವುಗಳನ್ನು ತಯಾರು ಮಾಡಬೇಕು, ಬಳಸಲೂ ಬೇಕು. ಅತಿ ಉತ್ತಮವಾದ ಯಂತ್ರವೂ ಕೂಡ ಮಾನವನು ಅದನ್ನು ನಡೆಸದಿದ್ದರೆ ನಿರುಪಯೋಗಿಯಾಗುತ್ತದೆ. ಮಾನವನು

ಮಾತ್ರ ಉಪಕರಣಗಳನ್ನು ಬಳಸಿ ಪದಾರ್ಥಗಳ ಉತ್ಪಾದನೆಯನ್ನು ಸಂಘಟಿಸಬಲ್ಲ. ಆದ್ದರಿಂದ ಮಾನವನು ಉತ್ಪಾದನೆಯ ಮುಖ್ಯಾಂಶವಾಗುತ್ತಾನೆ.

ಉತ್ಪಾದನಾ ಶಕ್ತಿಗಳು ಉತ್ಪಾದನೆಯ ಸಾಧನಗಳು ಎನ್ನಬೇಕು. ಮನುಷ್ಯನಿಗೂ ಪ್ರಕೃತಿಗೂ ಇರುವ ಸಂಬಂಧ ಹಾಗೂ ಅವನಿಗೆ ಅದರ ಮೇಲಿರುವ ಅಧಿಕಾರ ಇವುಗಳನ್ನು ಉತ್ಪಾದನಾ ಶಕ್ತಿಗಳು ನಿರ್ಧರಿಸುತ್ತವೆ. ಶ್ರಮಿಕ ವರ್ಗ ಉತ್ಪಾದನಾ ಶಕ್ತಿಗಳ ಪ್ರಧಾನ ಅಂಶ. ಜನತೆಯ ದುಡಿಮೆ ತಾವು ಕಂಡುಹಿಡಿದಿರುವ ಉಪಕರಣಗಳಿಗೆ ಬಳಸುವ ಚಾಲನೆ ಕೊಟ್ಟು, ಮಾನವ ಅವಶ್ಯಕತೆಗಳನ್ನು ಪೂರೈಸಲು ಬೇಕಾದುದನ್ನು ತಯಾರು ಮಾಡಲು ಹಚ್ಚುತ್ತದೆ.

ಪದಾರ್ಥ ಉತ್ಪಾದನೆಯಲ್ಲಿ ಉತ್ಪಾದನಾ ಶಕ್ತಿಗಳಷ್ಟೇ ಅಲ್ಲದೆ, ಇತರ ಅಂಶಗಳೂ ಇವೆ. ಜನತೆ ಉತ್ಪಾದಿಸಬೇಕಾದರೆ ಒಟ್ಟಾಗಿ ಸಂಘಟಿತರಾಗಬೇಕಾಗುತ್ತದೆ. ಮಾರ್ಕ್ಸ್ ಹೇಳಿದಂತೆ "ಉತ್ಪಾದನೆಯ ಕ್ರಿಯೆಯಲ್ಲಿ ಜನತೆ ಪರಸ್ಪರ ಸಂಬಂಧಗಳನ್ನು ನಿರ್ದಿಷ್ಟ ಮಾಡಿಕೊಳ್ಳುತ್ತಾರೆ. ಈ ಸಮಾಜಿಕ ಸಂಬಂಧಗಳನ್ನು ಒಳಪಟ್ಟು ಪ್ರಕೃತಿಯ ಮೇಲೆ ಜನರ ಕ್ರಿಯೆ ಉತ್ಪಾದನೆಗೆ ಎಡೆ ಕೊಡುತ್ತದೆ" ಎಂದಿದ್ದಾರೆ.

ಉತ್ಪಾದನಾ ಕ್ರಿಯೆಯಲ್ಲಿ ಜನರಲ್ಲಿ ಉಂಟಾಗುವ ಸಂಬಂಧವೇ ಉತ್ಪಾದನಾ ಸಂಬಂಧ; ಇವನು ಪದಾರ್ಥ ಉತ್ಪಾದನೆಯ ಅವಿಭಾಜ್ಯ ಅಂಗ.

ಈ ವಿಶ್ಲೇಷಣೆ ನೋಡಿದಾಗ ಒಂದು ನಿರ್ದಿಷ್ಟ ಚಾರಿತ್ರಿಕ ಉತ್ಪಾದನಾ ವಿಧಾನದಲ್ಲಿ ಉತ್ಪಾದನಾ ಶಕ್ತಿಗಳು ಹಾಗೂ ಉತ್ಪಾದನಾ ಸಂಬಂಧಗಳ ನಡುವೆ ಅವಿಚ್ಛಿನ್ನವಾದ ಐಕ್ಯತೆಯಿದೆಯೆಂದು ಕಂಡುಬರುತ್ತದೆ.

ಉತ್ಪಾದನಾ ಸಂಬಂಧಗಳು ಮಾಲಕತ್ವದ ಮಾದರಿಯ ಮೇಲೆ ಆಧಾರ ಪಟ್ಟಿರುತ್ತದೆ. ಮಾಲಕತ್ವದ ಮಾದರಿ ಎಂದರೆ ಉತ್ಪಾದನಾ ವಸ್ತುಗಳಿಗೂ ಜನರಿಗೂ ಇರುವ ಸಂಬಂಧ. ಆಸ್ತಿಯ ಸಾರ್ವಜನಿಕ ಮಾಲಕತ್ವವಿದ್ದರೆ ಉತ್ಪಾದನಾ ಸಂಬಂಧವು ಸಹಕಾರ ಹಾಗೂ ಪರಸ್ಪರ ಸಹಾಯದ ರೂಪ ತಾಳುತ್ತದೆ. ಒಂದು ವೇಳೆ ಆಸ್ತಿ ಖಾಸಗಿ ಮಾಲಕತ್ವದಲ್ಲಿದ್ದರೆ ಉತ್ಪಾದನಾ ಸಂಬಂಧದಲ್ಲಿ ಮಾಲಕ ಹಾಗೂ ಕೆಲಸಗಾರ ಎಂಬ ಪ್ರವೃತ್ತಿ ಬರುತ್ತದೆ(ಉದಾ:ಬಂಡವಾಳಶಾಹಿ). ಪರಸ್ಪರ ವಿರೋಧಿ ವರ್ಗಗಳಿರುವ ಸಮಾಜದಲ್ಲಿ ಶ್ರಮಿಕರಿಗೆ ಉತ್ಪಾದನಾ ವಸ್ತುಗಳೇ (ಭೂಮಿ. ಕಾರ್ಖಾನೆ. ಮುಂತಾದ) ಲಭಿಸಿದಂತೆ ಮಾಡಿ ಅವರನ್ನು ಮಾಲಕರು ತಮ್ಮ ಲಾಭಕ್ಕಾಗಿ ಸುಲಿಗೆ ಮಾಡುತ್ತಾರೆ.

ವಿತರಣೆಯ ಮಾದರಿಯು ಕೂಡ ಉತ್ಪಾದನಾ ವಸ್ತಗಳ ಮಾಲಕತ್ವದ ರೀತಿಯ ಮೇಲೆ ಆಧಾರ ಪಟ್ಟಿರುತ್ತದೆ. ಬಂಡವಾಳಶಾಹಿ ಪದ್ಧತಿಯಲ್ಲಿ ಬಂಡವಾಳದ ಖಾಸಗಿ ಮಾಲಕತ್ವ

ಇರುತ್ತದಾದ್ದರಿಂದ ಸಮಾಜದ ಪದಾರ್ಥ ಸಂಪತ್ತಿನ ವಿತರಣೆಯಲ್ಲಿ ತೀರ ಅನ್ಯಾಯವಾಗುತ್ತದೆ. ಉತ್ಪಾದಿತ ಸಂಪತ್ತಿನಲ್ಲಿ ಉತ್ಪಾದನೆಯ ವಸ್ತುವಿನ ಮಾಲಕ ಅತಿ ದೊಡ್ಡ ಭಾಗವನ್ನು ಪಡೆದುಕೊಳ್ಳುತ್ತಾನೆ. ಮಾಲಕನು ತಾನು ಈ ಉತ್ಪಾದನಾ ಕ್ರಿಯೆಯಲ್ಲಿ ಭಾಗಿಯಾಗದಿದ್ದರೂ ಅವನು ದುಡಿಯದಿದ್ದರೂ ಈ ಲಾಭವನ್ನು ಪಡೆಯುತ್ತಾನೆ. ಆದರೆ ಸಮಾಜವಾದೀ ಸಮಾಜದಲ್ಲಿ ಸಮಾಜದ ಮಾಲಕತ್ವವಿರುತ್ತದೆ. ಈ ಪದ್ಧತಿಯಲ್ಲಿ ವಿತರಣೆಯು ದುಡಿಮೆಗೆ ತಕ್ಕಂತೆ ಇರುತ್ತದೆ. ಅದು ದುಡಿಯುವವರ ಹಿತವನ್ನು ಅವಲಂಬಿಸಿ ವಿತರಣೆಗೊಳ್ಳುತ್ತದೆ ಸಮಾಜವಾದದಲ್ಲಿ ಉತ್ಪನ್ನವಾದ ಎಲ್ಲ ಸಂಪತ್ತು ಜನತೆಯದೆ.

ಉತ್ಪಾದನಾ ಸಂಬಂಧವು ಜನತೆಯ ಇಚ್ಛೆಯ ಮೇಲೆ ಆಧಾರಪಟ್ಟಿರುವುದಿಲ್ಲ. ಏಕೆಂದರೆ ಉತ್ಪಾದನಾ ವಿಧಾನವು, ತನ್ನದೇ ಕಾರಣಗಳಿಂದ ತನ್ನದೇ ಆದ ಸಂಬಂಧಗಳಿಗೆ ತನ್ನದೇ ಆದ ತಾರ್ಕಿಕತೆಗೆ ಎಡೆಕೊಡುತ್ತದೆ. ಅದ್ದರಿಂದ ಉತ್ಪಾದನಾ ಶಕ್ತಿಗಳ ಹಾಗೂ ಉತ್ಪಾದನಾ ಸಂಬಂಧಗಳ ತಾರ್ಕಿಕತೆಯನ್ನು ಪರಿಶೀಲಿಸೋಣ.

ಉತ್ಪಾದನೆಯು ಸ್ಥಿರವಾಗಿರಲು ಸಾಧ್ಯವಿಲ್ಲ. ಇದು ಸತತವಾಗಿ ಬೆಳೆಯುತ್ತಾ ಹೋಗುತ್ತದೆ, ಸುಧಾರಿಸುತ್ತಾ ಹೋಗುತ್ತದೆ. ಏಕೆಂದರೆ ಜನಬದುಕಬೇಕಾದರೆ ಸಂಪತ್ತಿನ ಉತ್ಪಾದನೆ ಬೇಕೇಬೇಕು. ಅಷ್ಟೇ ಅಲ್ಲ ಅದನ್ನು ಬೃಹತ್ ಪ್ರಮಾಣದಲ್ಲಿ ಮಾಡಬೇಕು. ಏಕೆಂದರೆ ಜನಸಂಖ್ಯೆ ಎಡೆಬಿಡದೆ ಬೆಳೆಯುತ್ತಲೇ ಇರುತ್ತದೆ. ಬೆಳೆಯುತ್ತಿರುವ ಜನತೆಯ ಅವಶ್ಯಕತೆಯನ್ನು ಪೂರೈಸಲು ಉತ್ಪಾದನೆಯ ವಿಸ್ತಾರ ಮಾಡುವುದರೊಡನೆ ಅದರ ಸುಧಾರಣೆಗಳನ್ನು ಮಾಡಬೇಕು. ಉತ್ಪಾದನೆಯ ಸುಧರಣೆಯು ಒಂದು ವಾಸ್ತವಿಕ ಅವಶ್ಯಕತೆ, ಇದು ಸಮಾಜ ಜೀವನದ ಒಂದು ನಿಯಮ. ಸಮಾಜದ ಚರಿತ್ರೆ ನೊಡಿದಾಗ ಅದು ಸಾಮಾಜಿಕ ಉತ್ಪಾದನಾ ಬೆಳವಣಿಗೆಯನ್ನು ನಿಯಂತ್ರಿಸುವ ನಿಯುಮಗಳನ್ನು ಹಾಗೂ ಒಂದು ಪದ್ಧತಿಯುನ್ನು ಸ್ಥಾಪಿಸುವ ಪ್ರಕ್ರಿಯೆ, ಮುಂತಾದವುಗಳನ್ನೊಳಗೊಂಡಿದೆ ಎಂದು ತಿಳಿಯುತ್ತದೆ.

ಉತ್ಪಾದನೆಯ ಬೆಳವಣಿಗೆಯು ಉತ್ಪಾದನಾ ಶಕ್ತಿಗಳ ಬದಲಾವಣೆಯಿಂದ ಪ್ರಾರಂಭವಾಗುತ್ತದೆ. ಚರಿತ್ರೆಯ ಮೇರೆಗೆ ಉತ್ಪಾದನಾ ಉಪಕರಣಗಳು ಮೊದಲು ಬೆಳೆಯುತ್ತವೆ. ಉತ್ತಮ ಉತ್ಪಾದನಾ ಯಂತ್ರಗಳು ಬಂದಂತೆ ದುಡಿಮೆಯನ್ನು ಕಡಿತಮಾಡಿ ಕಡಿಮೆ ಕೆಲಸಗಾರರಿಂದ ಅತಿ ಹೆಚ್ಚು ಲಾಭ ಪಡೆಯುವ ಮಾರ್ಗ ಹುಡುಕಲಾಗುತ್ತದೆ. ಉತ್ಪಾದನಾ ಉಪಕರಣಗಳು ಸುಧಾರಿಸಿದಂತೆ ಜನರು ಸುಧಾರಿಸುತ್ತಾರೆ. ಏಕೆಂದರೆ ಹೊಸ ಉತ್ಪಾದನಾ ಯಂತ್ರಗಳ ಕಲೆಯನ್ನು ಕೆಲಸಗಾರರು ಕಲಿಯಬೇಕಾಗುತ್ತದೆ. ಆಗ ಉತ್ಪಾದನಾ ಸಂಬಂಧವೂ ಬದಲಾಗುತ್ತದೆ.

ಉತ್ಪಾದಾನಾ ಶಕ್ತಿಗಳು ಉತ್ಪಾದನಾ ಸಂಬಂಧಗಳನ್ನು ನಿರ್ಧರಿಸುತ್ತವೆ. ಆದರೆ ಆಯಾ ಸಮಯದಲ್ಲಿರುವ ಉತ್ಪಾದನಾ ಸಂಬಂಧಗಳು ಆಯಾ ಪದ್ಧತಿಗೆ ಅನುಗುಣವಾದ ಸ್ಥಿತ್ಯಂತರಗಳಿಗೆ ಎಡೆ ಮಾಡಿಕೊಡುತ್ತವೆ. ಒಂದು ಉತ್ಪಾದನಾ ಪದ್ಧತಿಯಿಂದ ಇನ್ನೊಂದು ಉತ್ಪಾದನಾ ಪದ್ಧತಿಗೆ ಬದಲಾದಾಗ ಹಳೆಯ ಉತ್ಪಾದನಾ ಶಕ್ತಿಗಳಿಗೂ ಹೊಸ ಉತ್ಪಾದನಾ ಶಕ್ತಿಗಳಿಗೂ ಪರಸ್ಪರ ವಿರೋಧೀ ಸಂಬಂಧ ಉತ್ಪನ್ನವಾಗುವುದು ಸ್ವಾಭಾವಿಕ. ಈ ಪರಸ್ಪರ ವಿರೋಧಿ ಸಂಬಂಧವು ಉತ್ಪಾದನಾ ಬೆಳವಣಿಗೆಯ ಕ್ರಿಯೆಯಲ್ಲೇ ಆಗುವುದೇನೂ ಆಶ್ಚರ್ಯಕರವಲ್ಲ. ಏಕೆಂದರೆ ಅದು ಸಾಮಾಜಿಕ ಉತ್ಪಾದನೆಯ ನಾನಾ ಕಡೆಗಳ ಮೂಲ ಸ್ವಭಾವದಿಂದ ಉತ್ಪನ್ನವಾಗುತ್ತದೆ. ಅದು ಆಕಸ್ಮಿಕವಲ್ಲ, ಉತ್ಪಾದನಾ ಶಕ್ತಿಗಳು ಬದಲಾಗುತ್ತಲೇ ಇರುತ್ತವೆ. ಉತ್ಪಾದನಾ ಸಂಬಂಧಗಳೂ ಬದಲಾದರೂ ಅದು ಆಯಾ ಉತ್ಪಾದನಾ ಪದ್ಧತಿಗೆ ಅನುಗುಣವಾಗಿ ಅದರ ಮಿತಿಯಲಷ್ಟೇ ಬದಲಾಗುತ್ತದೆ. ಉತ್ಪಾದನಾ ಶಕ್ತಿಗಳು ಬದಲಾದಷ್ಟು ಶೀಘ್ರಗತಿಯಲ್ಲಿ ಉತ್ಪಾದನಾ ಸಂಬಂಧ ಬದಲಾಗುವುದಿಲ್ಲ. ಉದಾ: ಬಂಡವಾಳಶಾಹಿ ಪದ್ಧತಿಯಲ್ಲಿ ಉತ್ಪಾದನಾ ಶಕ್ತಿಗಳು ಅನೇಕ ಬದಲಾವಣೆಯನ್ನು ಹೊಂದಿರುತ್ತವೆ. ಆದರೆ ಉತ್ಪಾದನಾ ಸಂಬಂಧ ಯಾವ ಬದಲಾವಣೆಯನ್ನು ಹೊಂದಿರುವುದಿಲ್ಲ. ಅದು ಖಾಸಗಿ ಬಂಡವಾಳಶಾಹಿ ಮಾಲಕತ್ವದ ಆಧಾರದ ಮೇಲೆಯೇ ಸಂಬಂಧಪಟ್ಟಿರುತ್ತದೆ.

ಉತ್ಪಾದನಾ ಸಂಬಂಧ ಉತ್ಪಾದನಾ ಶಕ್ತಿಗಿಂತಲೂ ಹೆಚ್ಚು ಸ್ಥಿರವಾಗಿರುವದರಿಂದ ಇದು ಉತ್ಪಾದನಾ ಶಕ್ತಿಗಳ ಬದಲಾವಣೆಯ ಗತಿಯಲ್ಲಿ ಬದಲಾಗುವುದಿಲ್ಲ. ಹೀಗಾಗಿ ಆಂತರಿಕ ಪರಸ್ಪರ ವಿರೋಧಿ ಸ್ಥಿತಿ ಅನಿವಾರ್ಯವಾಗಿ ಉಂಟಾಗುತ್ತದೆ. ಉತ್ಪಾದನಾ ಶಕ್ತಿಗಳು ಪ್ರಗತಿ ಹೊಂದುತ್ತಿದ್ದರೆ ಉತ್ಪಾದನಾ ಸಂಬಂಧ ಹಿಂದೆ ಬೀಳುತ್ತಾ ಹೋಗುತ್ತದೆ. ಈ ಪರಸ್ಪರ ವಿರೋಧ ಆಂತರಿಕವಾಗಿದ್ದು, ಇದು ಆಯಾ ಪದ್ಧತಿಯಲ್ಲಿಯೇ ಅಡಕವಾಗಿದ್ದು ಕೊನೆಯ ಹಂತದಲ್ಲಿ ತಿಕ್ಕಾಟಕ್ಕೆ ಹಾದಿಮಾಡಿಕೊಡುತ್ತದೆ. ಈ ತಿಕ್ಕಾಟದ ಹಂತ ತಲೆದೂರಿದಾಗ ಸಾಮಾಜಿಕ ಕ್ರಾಂತಿ ಅವಶ್ಯಕವಾಗುತ್ತದೆ. ಅದು ಹಳೆಯ ಉತ್ಪಾದನಾ ಸಂಬಂಧಗಳನ್ನು ನಾಶಮಾಡಿ ಹೊಸ ಉತ್ಪಾದನಾ ಸಂಬಂಧಗಳನ್ನು ನಿರ್ಮಾಣ ಮಾಡುವದಕ್ಕಾಗಿ ಅನಿವಾರ್ಯವಾಗುತ್ತದೆ.

ಹೀಗೆ ಮಾರ್ಕ್ಸಿಸ್ಟರು ಚರಿತ್ರೆಯನ್ನು ಜನತೆ, ದುಡಿಮೆ, ಮೇಲ್ವರ್ಗ, ಕೆಳವರ್ಗ, ಬಂಡವಾಳಿಶಾಹಿ(ಮಾಲಿಕ), ಕೂಲಿಕಾರ್ಮಿಕ ಸಂಬಂಧಿಸಿದಂತೆ ಸಮಾಜ ಮತ್ತು ಜನತೆಯನ್ನು ವಾಸ್ತವದ(ವಾಸ್ತವತಾವಾದ) ನೆಲೆಯಲ್ಲಿ ಕಟ್ಟಿಕೊಟ್ಟಿದ್ದಾರೆ.

### ೨.೩ ಸಬಾಲ್ಟ್ರನಿಸ್ಟರ ಇತಿಹಾಸ ಗ್ರಹಿಕೆ

ಇಂಗ್ಲೀಷ್ ಪದವಾದ ಸಬಾಲ್ಟ್ರನ್(**Subltern**) ಎಂಬುದು ಮೂಲತಃ ಲ್ಯಾಟಿನ್ ಭಾಷೆಯ ಸಬಾಲ್ಟ್ರನಸ್(Subalternus) ಎಂಬ ಪದದಿಂದ ಬಂದಿದೆ. ಸಬಾಲ್ಟ್ರನಸ್ ಪದಕ್ಕೆ

ಅಧೀನ(**Sublternate**) ಅಥವಾ ಕೆಳದರ್ಜೆಯ(**Lower; in rank**) ಎಂಬ ಅರ್ಥ ಬರುತ್ತದೆ. ಸಬಾಲ್ಟ್ರನ್ ಚರಿತ್ರೆಕಾರರು ಸಬಾಲ್ಟ್ರನ್ ಪದವನ್ನು ಸಾಮಾನ್ಯವಾಗಿ ಅಧೀನ ಲಕ್ಷಣಗಳುಳ್ಳ ಸಾಮಾಜಿಕ ವ್ಯವಸ್ಥೆಯನ್ನು ಚರ್ಚಿಸಲು ಬಳಸುತ್ತಿದ್ದು ಇದರಲ್ಲಿ ವರ್ಗ, ಜಾತಿ, ವಯಸ್ಸು, ಲಿಂಗ, ಹುದ್ದೆ ಇವುಗಳಲ್ಲಿ ವ್ಯಕ್ತವಾಗಿದೆ. ಭಾರತದ ಇತಿಹಾಸ, ಚರಿತ್ರೆಯಲ್ಲಿ ಇದುವರೆಗೂ ನಡೆದಿರುವ ಅಧ್ಯಾಯಗಳಲ್ಲಿ ಮೇಲ್ವರ್ಗಕ್ಕೆ ಸಂಬಂಧಿಸಿದ ವಸ್ತು-ವಿಷಯಗಳನ್ನು ಕುರಿತು ಪ್ರಧಾನವಾಗಿ ಚರ್ಚಿಸಲಾಗಿದೆ. ಆದರೆ ಚರಿತ್ರೆಯ ನಿರ್ಮಾಣದಲ್ಲಿ ಕೇವಲ ಮೇಲ್ವರ್ಗದವರಷ್ಟೇ ಅಲ್ಲದೆ ಕೆಳವರ್ಗದ ಅಥವಾ ನಿರ್ಲಕ್ಷ್ಯಕ್ಕೊಳಗಾದವರ ವಸ್ತು-ವಿಷಯಗಳು ಕೂಡ ಪ್ರಮುಖ ಪಾತ್ರವನ್ನು ವಹಿಸುತ್ತವೆ. ಆದ್ದರಿಂದ ಕೆಳವರ್ಗದವರು ವಹಿಸಿದ ಪಾತ್ರಕ್ಕೆ ಒತ್ತುಕೊಡುವ ಅಗತ್ಯ ಹಾಗೂ ಅನಿವಾರ್ಯತೆಯನ್ನು ಸಬಾಲ್ಟ್ರನಿಸ್ಟರು ಪ್ರತಿಪಾದಿಸಿದ್ದಾರೆ.

ಕಳೆದ ನಲವತ್ತು ವರ್ಷಗಳಲ್ಲಿ ಸಬಾಲ್ಟ್ರನ್ ಅಧ್ಯಯನಕಾರರು ಕೆಳವರ್ಗದ ಜನರ ಇತಿಹಾಸವನ್ನು ಕುರಿತು ಹೊಸ ಸಂಶೋಧನಾ ಮಾರ್ಗಗಳನ್ನು ಹಾಗೂ ಸಿದ್ಧಾಂತಗಳನ್ನು ಬಳಕೆಗೆ ತಂದಿದ್ದಾರಾದರೂ ಸಬಾಲ್ಟ್ರನ್ ಪದ ಇತ್ತೀಚಿನದಲ್ಲ. ಮಧ್ಯಕಾಲೀನ ಇಂಗ್ಲೆಂಡ್‌ನಲ್ಲಿ ಸಬಾಲ್ಟ್ರನ್ ಪದವನ್ನು ಭೂಹಿಡುವಳಿದಾರ ಮತ್ತು ರೈತರನ್ನು ಕುರಿತು ಬಳಸಲಾಗಿದೆ. ೧೮ನೇ ಶತಮಾನದಲ್ಲಿ ಸಬಾಲ್ಟ್ರನ್ ಪದವನ್ನು ಸೇನೆಯಲ್ಲಿದ್ದ ಕೆಳಹಂತದ ಸೈನಿಕರನ್ನು ವಿಶೇಷವಾಗಿ ರೈತ ಮೂಲದ ಸೈನಿಕರನ್ನು ಗುರುತಿಸಲು ಬಳಸಲಾಗಿದೆ. ಮೊದಲನೆಯ ಮಹಾಯುದ್ಧದ ನಂತರ ವಿಶೇಷವಾಗಿ ರಷ್ಯಾದ ಕ್ರಾಂತಿಯ ನಂತರ ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಕೆಳವರ್ಗದವರ ಬಗ್ಗೆ ಚಾರಿತ್ರಿಕ ಅಧ್ಯಯನದ ಆಸಕ್ತಿ ಬೆಳೆಯಿತು.

ಸಬಾಲ್ಟ್ರನ್ ಅಧ್ಯಯನಕಾರರ ಬರವಣಿಗೆಗಳು ಮೂಲತಃ ಮಾರ್ಕ್ಸಿಸ್ಟ್ ಚರಿತ್ರೆಕಾರರ ಬರವಣಿಗೆಗಳಿಂದ ಸ್ಫೂರ್ತಿ ಪಡೆದಿದೆ. ಖ್ಯಾತ ಮಾರ್ಕ್ಸಿಸ್ಟ್ ಚರಿತ್ರೆಕಾರ Antionio Gramsci ಕೃತಿಗಳು 'The Modern Prince' ಮತ್ತು 'Selection From the Perssion Note Books' ಕೃತಿಗಳು ಮೂಲತಃ ಇಟಾಲಿಯನ್ ಭಾಷೆಯಲಿದ್ದು ೧೯೬೦ರ ದಶಕದಲ್ಲಿ ರೇಮಾಂಡ್ ವಿಲಿಯಮ್ಸ್ ಇವುಗಳನ್ನು ಇಂಗ್ಲೀಶ್‌ಗೆ ಅನುವಾದಿಸಿದ್ದಾನೆ. 'ಸಬಾಲ್ಟ್ರನ್' ಪದವು ಆ್ಯಂಟನಿ ಗ್ರಾಂಸಿಯ ಬದಲಾವಣೆಗಳಿಂದ ಸ್ಫೂರ್ತಿ ಪಡೆದಿದೆ. ಆ್ಯಂಟನಿ ಗ್ರಾಂಸಿಯು 'ಯಜಮಾನಿಕೆ'ಯ (ಹೆಜಮಾನಿ) ವಿವಿಧ ಮಜಲುಗಳ ಬಗ್ಗೆ ಆಳ್ವಿಕೆಯ ಅಧಿಕಾರದಿಂದ ಶೋಷಣೆಗೆ ಒಳಪಟ್ಟ ಕೆಳಸ್ತರದ ವರ್ಗಗಳನ್ನು ವಿಶ್ಲೇಷಿಸುವ ಸಂದರ್ಭದಲ್ಲಿ "ಸಬಾಲ್ಟರ್ನ್ ಅಧ್ಯಯನ" ವನ್ನು ಖ್ಯಾತಿಗೊಳಿಸಿದನು.

'ಹೆಜಮನಿ' ಎನ್ನುವ ಶಬ್ದವನ್ನು ಮಾರ್ಕ್ಸಿಸ್ಟರು ೧೯ನೆಯ ಶತಮಾನದಿಂದಲೂ ಬಳಸುತ್ತಿದ್ದರು. ೧೯೨೦ ಮತ್ತು ೩೦ರ ದಶಕದ ಮುಸಲೋನಿಯ ಸರ್ವಾಧಿಕಾರಿ ರಾಜ್ಯದ

ಶೋಷಣೆಗಳ ಹಿನ್ನಲೆಯಲ್ಲಿ ಗ್ರಾಂಸಿಯು 'ಹೆಜಮನಿ' ಎಂಬ ಪದಕ್ಕೆ ತನ್ನದೇ ಆದ ಅರ್ಥ-ವಿವರಣೆಗಳನ್ನು ನೀಡಿದ್ದಾನೆ. ೧೯೩೦ ರ ದಶಕದ ಆರ್ಥಿಕ ಮುಗ್ಗಟ್ಟಿನ ಸಂದರ್ಭದಲ್ಲಿಯೂ ಕೈಗಾರಿಕಾ ಕೇಂದ್ರಗಳನ್ನು ಬೃಹತ್ ಪ್ರಮಾಣದಲ್ಲಿ ಹೊಂದಿದ್ದ ಯುರೋಪ್‌ನಲ್ಲಿ ಕಾರ್ಮಿಕರ ವರ್ಗಹೋರಾಟ ನಡೆಯಲಿಲ್ಲ. ಇಟಲಿಯ ಫಾಸಿಸಂ ಮತ್ತು ಅದನ್ನು ಬೆಂಬಲಿಸುತ್ತಿದ್ದ ಬೂರ್ಜ್ವಾಗಳನ್ನು ಎದುರಿಸಲೂ ಈ ವರ್ಗಹೋರಾಟ ಯಶಸ್ಸು ಕಾಣಲಿಲ್ಲ ಎಂಬುದನ್ನು ಗ್ರಾಂಸಿಯು ಗುರುತಿಸುತ್ತಾ ಶೋಷಿತ ಜನರಿಗೂ ಮತ್ತು ಕಮ್ಯುನಿಸ್ಟ್ ಹೋರಾಟಕ್ಕೂ ಸಂಬಂಧವಿರುವುದನ್ನು ಐಡಿಯಾಲಾಜಿಕಲ್ ಕಾರಣಗಳಿಗಾಗಿ ಈತನು ಒಪ್ಪಿಕೊಂಡರೂ ಗ್ರಾಂಸಿಯು ಕಮ್ಯುನಿಸ್ಟ್ ಪಾರ್ಟಿಯ ನಾಯಕರು ಆ ಪಕ್ಷದ ಕಾರ್ಯಕರ್ತರಿಂದ ದೂರ ನಿಂತು, 'ವರ್ಗಹೋರಾಟದ' ಕರೆಗಳನ್ನು ನೀಡುವ ಕಾರಣಕ್ಕಾಗಿಯೇ ವರ್ಗಹೋರಾಟವು ವಿಫಲವಾಗಿದೆ ಎನ್ನುವನು. ಈ ಕಾರಣಕ್ಕಾಗಿಯೇ ಈತ ಇಟಲಿಯ ಕಮ್ಯುನಿಸ್ಟ್ ಪಾರ್ಟಿಯನ್ನು ಟೀಕಿಸುವನು. ಆಗ ಪ್ರಾಬಲ್ಯದಲ್ಲಿದ್ದ ಸ್ಟಾಲಿನ್ನನ ಕಮ್ಯುನಿಸ್ಟ್ ರಷ್ಯಾದ ನೀತಿಯನ್ನು ಅವುಗಳ ಸಂಪ್ರದಾಯವಾದಿ ಕಾರಣಗಳಿಗಾಗಿ ಗ್ರಾಂಸಿಯು ಖಂಡಿಸಿದನು. ಇಂಥ ರಾಜಕೀಯ ಹಿನ್ನಲೆಯಲ್ಲಿ ಗ್ರಾಂಸಿಯು ತನ್ನ ರಾಜಕೀಯ ಅನುಭವ ಹಾಗೂ ಆಲೋಚನೆಗಳ ಮೂಲಕ್ಕೆ 'ಹೆಜಮನಿ' ಯನ್ನು ವ್ಯಾಖ್ಯಾನಿಸಿದನು.

ಪ್ರಬಲವರ್ಗಗಳು ಕೆಳವರ್ಗಗಳನ್ನು "ಒತ್ತಾಯಪೂರ್ವಕವಾಗಿ" ಶೋಷಣೆ ಮಾಡುವುದರ ಜೊತೆಗೆ "ಮನ ಒಲಿಸಿಯೇ" ಶೋಷಣೆ ಮಾಡುವ ಬಗೆಗಳನ್ನು "ಹೆಜಮನಿ"ಯನ್ನು ವಿವರಿಸುವ ಮೂಲಕ ತಿಳಿಸಿದ್ದಾನೆ. ಅಧಿಕಾರವರ್ಗವು ತನ್ನ ಹಿತಾಸಕ್ತಿಗಳನ್ನು ಸಮಾಜದಲ್ಲಿ ಯಾವ್ಯಾವ ರೀತಿಯಲ್ಲಿ ಕಾಪಾಡಿಕೊಳ್ಳುತ್ತವೆ ಎಂಬುದನ್ನು "ಹೆಜಮನಿ" ಮೂಲಕ ಚರ್ಚಿಸಿದ ವಿಚಾರಗಳು ಇಂದಿಗೂ ಪ್ರಸಿದ್ಧಿಯಲ್ಲಿವೆ. ಅಧಿಕಾರಿ ವರ್ಗವು ಉತ್ಪಾದನೆಯ ಮೇಲೆ ಒತ್ತಡವನ್ನು ಹೊಂದುವುದರೊಂದಿಗೆ ರಾಜ್ಯದ ಅಭಿವ್ಯಕ್ತಿಯಾದ ಶಿಕ್ಷಣ ಮತ್ತು ಮಾಧ್ಯಮಗಳನ್ನು ಉಪಯೋಗಿಸಿಕೊಳ್ಳುತ್ತಾ "ಸಾಮಾನ್ಯ ಜನರ ಆಶಯವನ್ನು ಪ್ರತಿನಿಧಿಸುತ್ತಿದ್ದೇವೆ ಎಂಬಂತೆ ಭ್ರಾಂತಿ ಹುಟ್ಟಿಸಿ ತಮ್ಮ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳುವ ಬಗೆಗಳನ್ನು ಇವನು ವಿವರಿಸಿದ್ದಾನೆ.

೧೯೭೧ರಲ್ಲಿ ಪ್ರಕಟವಾದ ಗ್ರಾಂಸಿಯ 'ಸೆಲೆಕ್ಷನ್ ಫ್ರಂ ಧ ಪ್ರಿಸನ್ ನೋಟ್‌ಬುಕ್ಸ್' ಎನ್ನುವ ಪುಸ್ತಕದಲ್ಲಿ ಸಬಾಲ್ಟ್ರನ್ ವರ್ಗಗಳನ್ನು ಅಧ್ಯಯನ ಮಾಡಲು ಆರು ಅಂಶಗಳನ್ನು ಸೂಚಿಸಿದ್ದಾನೆ.

೧. ಸಬಾಲ್ಟ್ರನ್ ವರ್ಗಗಳು ರೂಪುಗೊಳ್ಳುವ ಉದ್ದೇಶಗಳು.

೨. ಪ್ರಬಲ ರಾಜಕೀಯ ಹಿತಾಸಕ್ತಿಗಳೊಂದಿಗೆ ಅವುಗಳ ಪ್ರತ್ಯಕ್ಷ ಅಥವಾ ಪರೋಕ್ಷ ಸಂಬಂಧಗಳು.

೩. ಹೊಸ ಪಕ್ಷಗಳ ಮತ್ತು ಪ್ರಬಲ ವರ್ಗಗಳ ಹುಟ್ಟು

೪. ಸಬಾಲ್ಟ್ರನ್ ವರ್ಗಗಳು ತಮ್ಮ ಅಧಿಕಾರಕ್ಕಾಗಿ ಒತ್ತಾಯಿಸುವ ಸಂದರ್ಭದಲ್ಲಿ ಪ್ರಕಟವಾಗುವ ರೂಪಗಳು.

೫. ಸಬಾಲ್ಟ್ರನ್ ವರ್ಗಗಳ ಸ್ವಾಯತ್ತೆಯನ್ನು ಪ್ರತಿಪಾದಿಸುವ ಹಳೆಯ ನೆಲೆಗಟ್ಟಿನೊಳಗೆ ಇರುವ ಹೊಸ ರೂಪಗಳು.

೬. ಟ್ರೇಡ್ ಯೂನಿಯನ್‌ಗಳು ಮತ್ತು ರಾಜಕೀಯ ಪಕ್ಷಗಳು.

ಹೀಗೆ ಆ್ಯಂಟನಿಯೋ ಗ್ರಾಂಸಿಯ ಬರವಣಿಗೆಗಳು ಜಗತ್ತಿನ ವಿದ್ವಾಂಸರ ಗಮನ ಸೆಳೆದವು. ಇದೇ ವೇಳೆಗೆ ಖ್ಯಾತ ಯುರೋಪಿಯನ್ ಚರಿತ್ರಕಾರ E.P.Thompson ತನ್ನ ಮಹತ್ವ ಕೃತಿ "The making of the English Working Class" ನಲ್ಲಿ ನಿರ್ಲಕ್ಷಿಸಲ್ಪಟ್ಟ ಕೆಳವರ್ಗಗಳ ಚರಿತ್ರೆಯ ಅಧ್ಯಯನಕ್ಕೆ ವಿಶೇಷ ಒತ್ತು ನೀಡಿದನು.

ಸಬಾಲ್ಟ್ರನ್ ಅಧ್ಯಯನಕಾರರಲ್ಲಿ ಅಗ್ರಗಣ್ಯರಾದ ರಣಜಿತ ಗುಹ ಬಂಗಾಳದಲ್ಲಿ ಬ್ರಿಟಿಷರು ಜಾರಿಗೆ ತಂದ ಖಾಯಂ ಗುತ್ತಿಗೆ ವ್ಯವಸ್ಥೆಯನ್ನು ಅಧ್ಯಯನ ನಡೆಸುವ ಹಿನ್ನಲೆಯಲ್ಲಿ ೧೯ನೇ ಶತಮಾನದ ಬೌದ್ಧಿಕ ಚರಿತ್ರೆಯ ಅಧ್ಯಯನ ನಡೆಸುವ ಅಧ್ಯಾಯನ ಮಾಡಿದನು. ಇವರ ಮತ್ತೊಂದು ಕೃತಿ "Elementary Aspects of Peasant Insurgency" ಯಲ್ಲಿ ಅದುವರೆಗೂ ನಡೆದಿದ್ದ ರೈತ ದಂಗೆಗಳ ಅಧ್ಯಯನವನ್ನು ಕೂಲಂಕಶವಾಗಿ ಪರಾಮರ್ಶಿಸಿ ಅವುಗಳಿಂದ ಅಂಕಿ ಅಂಶಗಳನ್ನು ಶೋಧಿಸಿ, ಸಂಗ್ರಹಿಸಿ ಈ ರೈತ ದಂಗೆಗಳನ್ನು ಅವುಗಳ ಉದ್ದೇಶವನ್ನು ರೈತ ಪ್ರಜ್ಞೆಯನ್ನು ಸರಿಯಾಗಿ ಅರ್ಥೈಸುವ ಪ್ರಯತ್ನ ನಡೆಸಿದನು. ಸಬಾಲ್ಟ್ರನ್ ಅಧ್ಯಯನಗಳ ಆರಂಭವನ್ನು ಸೂಚಿಸುವ ಅತ್ಯಂತ ಮಹತ್ವದ ಕೃತಿ ಇದಾಗಿದೆ. ರಣಜಿತ ಗುಹರ ಅನುಯಾಯಿಗಳಾದ ಶಾಹಿದ್ ಅಮಿನ್, ಡೇವಿಡ್ ಅರ್ನಾಲ್ಡ್, ಗೌತಮ್ ಭಾದ್ರಾ, ದೀಸೇಶ್ ಚಕ್ರಬೋರ್ಟಿ. ಪಾರ್ಥ ಚಟರ್ಜಿ, ಡೇವಿಡೆ ಹರ್ಡಿಮನ್, ಗ್ಯಾನೇಂದ್ರ ಪಾಂಡ್ಯ, ಇವರುಗಳು ಸಬಾಲ್ಟ್ರನ್ ಸೈದ್ಧಾಂತಿಕ ಹಿನ್ನಲೆಯಲ್ಲಿ ಉತ್ತರ ಪ್ರದೇಶ, ಬಂಗಾಳ, ಗುಜರಾತ ಮತ್ತು ತಮಿಳುನಾಡು ಪ್ರದೇಶದ ಚಾರಿತ್ರಿಕ ಘಟನಾವಳಿಗಳನ್ನು ದಾಖಲಿಸುವ ಪ್ರಯತ್ನ ನಡೆಸಿದ್ದಾರೆ. ಇವರಲ್ಲಿ ಸುಮಿತ್ ಸರ್ಕಾರ್ ಭಾರತದ ಸಮಾಜ ಇತಿಹಾಸದ ಬಗ್ಗೆ ಅಧ್ಯಯನ ನಡೆಸಿದ್ದಾರೆ. ಡೇವಿಡ್ ಹರ್ಡಿಮನ್, ಶಾಹಿದ್ ಅಮಿನ್, ಡೇವಿಡ್ ಆರ್ನಾಲ್ಡ್‌ರವರು ರೈತರ ಚಳುವಳಿ, ರೈತ ದಂಗೆಗಳನ್ನು ಕುರಿತು ಆಸಕ್ತಿ ತಳೆದಿದ್ದಾರೆ. ಗಾಯಿತ್ರಿ ಚಕ್ರವರ್ತಿ ಸ್ಪಿವೀಕ್ 'ಸಾಹಿತ್ಯ ದೃಷ್ಟಿಕೋನ'ದಿಂದ ಅಧ್ಯಾಯನದಲ್ಲಿ ತೊಡಗಿರುವುದು ಕಂಡುಬರುತ್ತದೆ. Julye stethens Susie tharu kamala viswerwaran ಹಾಗೂ Tejashvini niranjan ಮುಂತಾದವರು ಮಹಿಳಾ ಅಧ್ಯಯನಕ್ಕೆ ವಿಶೇಷ ಒಲವು ತೋರಿದ್ದಾರೆ.

೧೯೭೦ರ ದಶಕದಲ್ಲಿ ಕೆಳವರ್ಗದ ಹಾಗೂ ನಿರ್ಲಕ್ಷ್ಯಕ್ಕೊಳಗಾದ ಚಾರಿತ್ರಿಕ ಶಕ್ತಿಗಳ ಬಗ್ಗೆ ಅಧ್ಯಯನದಲ್ಲಿ ತೊಡಗಿದ್ದ ಕೆಲವು ಇಂಗ್ಲಿಶ್ ಹಾಗೂ ಭಾರತೀಯ ಚರಿತ್ರೆಕಾರರು ಲಂಡನ್‌ನಲ್ಲಿ ಸಭೆ ಸೇರಿ ದಕ್ಷಿಣ ಏಷ್ಯಾದಲ್ಲಿ ಸಬಾಲ್ಟ್ರನ್ ಚರಿತ್ರೆಯನ್ನು ಕುರಿತು ಒಂದು ನಿಯತಕಾಲಿಕೆಯನ್ನು ಹೊರತರುವ ಬಗ್ಗೆ ಚರ್ಚೆ ನಡೆಸಿದರು. ಇದರ ಪ್ರತಿಫಲವಾಗಿ ರಣಜಿತಗುಹ ಅವರ ನೇತೃತ್ವ ಹಾಗೂ ಎಂಟು ಜನ ಸಹೊದ್ಯೋಗಿಗಳ ಅಧ್ಯಯನ ಹಾಗೂ ಪರಿಶ್ರಮದ ಫಲವಾಗಿ ಸಬಾಲ್ಟ್ರನ್ ಅಧ್ಯಯನಗಳ ಪ್ರಥಮ ಸಂಪುಟ ೧೯೮೨ರಲ್ಲಿ ಹೊರಬಂದಿತು. ಇದುವರೆಗೂ ಈ ಮಾಲಿಕೆಯುಲ್ಲಿ ಹನ್ನೆರಡು ಸಂಪುಟಗಳು ಹೊರಬಂದಿವೆ. ಸಮಾಜವಿಜ್ಞಾನಗಳಾದ ಚರಿತ್ರೆ, ರಾಜ್ಯಶಾಸ್ತ್ರ, ಮಾನವಶಾಸ್ತ್ರ, ಸಮಾಜಶಾಸ್ತ್ರ, ಸಾಂಸ್ಕೃತಿಕ ಅಧ್ಯಯನ, ಸಾಹಿತ್ಯ ವಿಮರ್ಶೆ ಹೀಗೆ ವಿವಿಧ ನಿಕಾಯ ಮತ್ತು ಶಾಸ್ತ್ರಗಳಲ್ಲಿ ಪರಿಣತಿ ಪಡೆದ ವಿದ್ವಾಂಸರು ಸಬಾಲ್ಟ್ರನ್ ವರ್ಗಗಳ ಬಗ್ಗೆ ಲೇಖನಗಳನ್ನು ಬರೆದಿದ್ದಾರೆ.

ಹೀಗೆ ಸಬಾಲ್ಟ್ರನ್ ಪದವು ಮಾರ್ಕ್ಸಿಸ್ಟ್ ಚರಿತ್ರೆಕಾರನಾದ Antonio Gramsci ಯ ಬರವಣಿಗೆಗಳಿಂದ ಸ್ಫೂರ್ತಿ ಪಡೆದಿದೆ. ಇದುವರೆಗೂ ಪ್ರಕಟವಾಗಿರುವ ಹನ್ನೆರಡು ಸಬಾಲ್ಟರ್ನ್ ಸಂಪುಟಗಳಲ್ಲಿ ಚರಿತ್ರೆಕಾರರು ವಿಶೇಷವಾಗಿ ಶೋಷಣೆಗೆ ಗುರಿಯಾದ ಸಾಮಾಜಿಕ ಕೆಳಸ್ತರಕ್ಕೆ ಸೇರಿದ ರೈತರು, ಮಹಿಳೆಯರು, ಕಾರ್ಮಿಕರು, ಮಕ್ಕಳು, ಕೆಳ ಜಾತಿಯವರು, ಬುಡಕಟ್ಟು ವರ್ಗಗಳ ಅಧ್ಯಯನಕ್ಕೆ ವಿಶೇಷ ಮಹತ್ವ ನೀಡಿದ್ದಾರಲ್ಲದೆ, ಸಬಾಲ್ಟರ್ನ್ ಅಧ್ಯಯನಕಾರರು ತಮ್ಮ ಅಧ್ಯಯನಗಳಲ್ಲಿ ಬಹಿಷ್ಕಾರಕ್ಕೆ ಒಳಗಾಗಿರುವ, ಸೇರಿಸಲ್ಪಡದಿರುವ ಮೌನವಾಗಿರುವ ವರ್ಗಗಳ ಧ್ವನಿಯನ್ನು ದಾಖಲಿಸಲು ಹಾಗೂ ಚರಿತ್ರೆಯ ಮುಖ್ಯವಾಹಿನಿಯಲ್ಲಿ ಅವರ ಪಾತ್ರವನ್ನು ಬೆಸೆಯಲು ಯತ್ನಿಸಿದ್ದಾರೆ. ಸಬಾಲ್ಟ್ರನ್ ಚರಿತ್ರೆಕಾರರು ಆಧುನಿಕ ಭಾರತದ ಚರಿತ್ರೆಯನ್ನು ದಾಖಲಿಸುವ ಸಂದರ್ಭದಲ್ಲಿ ಹೊಸ ಚಾರಿತ್ರಿಕ ವಿಧಾನಗಳನ್ನು ಬಳಸಿ ಜನಸಾಮಾನ್ಯರ ಪರವಾದ ವಿಶೇಷವಾಗಿ ರೈತಾಪಿ ವರ್ಗದ ಪ್ರತಿಭಟನೆ ಹಾಗೂ ರೈತರ ಪ್ರಜ್ಞೆಯನ್ನು ಅರಿಯಲು ಪ್ರಯತ್ನಿಸಿದ್ದಾರೆ.

ಆಧುನಿಕ ಭಾರತದ ಚರಿತ್ರೆಯ ರಚನೆಯಲ್ಲಿ ಅಡಕವಾಗಿರುವ ಲೋಪಗಳನ್ನು ತೀಕ್ಷ್ಣವಾಗಿ ವಿಶ್ಲೇಷಿಸುವ ಸಬಾಲ್ಟರ್ನ್ ಚರಿತ್ರೆಕಾರರು ಇದನ್ನು ಮೇಲ್ವರ್ಗದ ಹಾಗೂ ಅಪೂರ್ಣ ಚರಿತ್ರೆ ಎಂದು ವ್ಯಾಖ್ಯಾನಿಸಿದ್ದಾರೆ. ಚರಿತ್ರೆಕಾರರು ಆಧುನಿಕ ಭಾರತದ ಚರಿತ್ರೆಯನ್ನು ರಚನೆ ಮಾಡುವ ಸಂದರ್ಭದಲ್ಲಿ ಭಾರತ ಒಂದು ರಾಷ್ಟ್ರವಾಗಿ ಹೊರಹೊಮ್ಮಲು ಹಾಗೂ ಭಾರತದಲ್ಲಿ ರಾಷ್ಟ್ರೀಯ ಪ್ರಜ್ಞೆ ಮೂಡಲು ಮೇಲ್ವರ್ಗದವರು ಹಾಕಿಕೊಟ್ಟ ದಾರಿಯಲ್ಲಿ ನಡೆದ ಫಲಶೃತಿ. ಈ ಮೇಲ್ವರ್ಗದಲ್ಲಿ ದೇಶಿಯ ಹಾಗೂ ವಿದೇಶಿಯ ಎಂಬ ಎರಡು ಪ್ರಕಾರಗಳಿವೆ. ಭಾರತೀಯ ಮೇಲ್ವರ್ಗವು ಜಮೀನ್ದಾರರು ಕೈಗಾರಿಕೋದ್ಯಮಿಗಳು, ವ್ಯಾಪಾರಿಗಳು, ಅಧಿಕಾರಿವರ್ಗ ಮೇಲ್ಜಾತಿಯವರನ್ನು

ಒಳಗೊಂಡಿದೆ. ಹಾಗೆಯೇ ವಿದೇಶಿ ಮೇಲ್ವರ್ಗದವರಲ್ಲಿ ಬ್ರಿಟಿಷ್ ಸರ್ಕಾರ, ಬ್ರಿಟಿಷ್ ಉನ್ನತಾಧಿಕಾರಿಗಳು, ವಿದೇಶಿ ಕೈಗಾರಿಕೋದ್ಯಮಿಗಳು, ಬಂಡವಾಳಗಾರರು, ವ್ಯಾಪಾರಿಗಳು, ಭೂಮಾಲೀಕರು, ಮತಪ್ರಚಾರಕರು ಪ್ರತಿನಿಧಿಸುತ್ತಾರೆ. ಆಧುನಿಕ ಭಾರತದ ಚರಿತ್ರೆಯ ಬಗ್ಗೆ ಅಧ್ಯಯನ ನಡೆಸಿದ ವಸಾಹತುಶಾಹಿ ಚರಿತ್ರೆಕಾರರು ಭಾರತ ಒಂದು ಆಧುನಿಕ ರಾಷ್ಟ್ರವಾಗಿ ಹೊರಹೊಮ್ಮಲು ಹಾಗೂ ಭಾರತದಲ್ಲಿ ರಾಷ್ಟ್ರೀಯ ಪ್ರಜ್ಞೆ ಮೂಡಲು ಬ್ರಿಟಿಷ್ ಸರ್ಕಾರ ಅದರ ನೀತಿಗಳು, ಅವರು ಸ್ಥಾಪಿಸಿದ ಸಂಸ್ಥೆಗಳು ಹಾಗೂ ಸಂಸ್ಕೃತಿಯೇ ಮೂಲ ಕಾರಣ ಎಂಬಂತೆ ಅರ್ಥೈಸಿದ್ದಾರೆ. ಹಾಗೆಯೇ ರಾಷ್ಟ್ರೀಯವಾದಿ ಚರಿತ್ರೆಕಾರರು ಭಾರತ ಒಂದು ಆಧುನಿಕ ರಾಷ್ಟ್ರವಾಗಿ ಹೊರಹೊಮ್ಮಿ ಭಾರತದಲ್ಲಿ ರಾಷ್ಟ್ರೀಯ ಪ್ರಜ್ಞೆ ಮೂಡಲು ಭಾರತೀಯ ಮೇಲ್ವರ್ಗ ಸಂಸ್ಥೆಗಳು, ಚಟುವಟಿಕೆಗಳು ಹಾಗೂ ಚಿಂತನೆಗಳೇ ಮೂಲಕಾರಣ ಎಂಬಂತೆ ಚಿತ್ರಿಸಿದ್ದಾರೆ. ಈ ಎರಡು ಪ್ರಬಲ ಹಾಗೂ ಪ್ರಮುಖ ಚಾರಿತ್ರಿಕ ಪ್ರಕಾರಗಳಲ್ಲಿ ಆಧುನಿಕ ಭಾರತ ಒಂದು ರಾಷ್ಟ್ರವಾಗಿ ಹೊರಹೊಮ್ಮುವಲ್ಲಿ ಮೇಲ್ವರ್ಗದವರಂತೆ ವಸಾಹತುಶಾಹಿ ಸರ್ಕಾರದಂತೆ ಜನಸಾಮಾನ್ಯರು ಕೂಡ ವಿಶೇಷ ಪಾತ್ರವನ್ನು ವಹಿಸಿದ್ದಾರೆ. ಇವರ ಪಾತ್ರ ಇತರರಿಗಿಂತ ಮಹತ್ತರವಾದುದು ಹಾಗೂ ಅಧ್ಯಯನ ಯೋಗ್ಯವಾದುದು ಎಂಬುದು ಸಬಾಲ್ಟರ್ನ್ ಚರಿತ್ರೆಕಾರರ ನಿಲುವು.

ಆಧುನಿಕ ಭಾರತದ ಚರಿತ್ರೆಯನ್ನು ಅಧ್ಯಯನ ನಡೆಸುವ ಸಂದರ್ಭದಲ್ಲಿ ಬಳಸಲಾಗಿರುವ ಮೂಲಾಧಾರಗಳ ಬಗ್ಗೆ ಸಬಾಲ್ಟರ್ನ್ ಅಧ್ಯಯನಕಾರರು ವಿಶೇಷವಾಗಿ ರಣಜಿತಗುಹ ಮೇಲ್ವರ್ಗದ ಪಕ್ಷಪಾತ ನಿಲುವನ್ನು ಸ್ಪಷ್ಟವಾಗಿ ಗುರುತಿಸಿದ್ದಾರೆ. ಬ್ರಿಟಿಷ್ ಆಳ್ವಿಕೆ ಸಂದರ್ಭದಲ್ಲಿ ಆದ ರೈತದಂಗೆಗಳ ಬಗ್ಗೆ ಅಧ್ಯಯನ ನಡೆಸಿರುವ ಚರಿತ್ರೆಕಾರರು ಮೂಲಾಧಾರಗಳನ್ನು ಬಳಸುವ ಸಂದರ್ಭದಲ್ಲಿ ಬ್ರಿಟಿಷ್ ಸರ್ಕಾರ ದಂಗೆಗಳನ್ನು ಧಮನಗೊಳಿಸುವ ಉದ್ದೇಶದಿಂದ ಸಂಗ್ರಹಿಸಲಾಗಿದೆ. ಗುಪ್ತ ವರದಿಗಳು, ಪೋಲಿಸ್ ಮಾಹಿತಿ ಹಾಗೂ ಸರ್ಕಾರಿ ದಾಖಲೆಗಳಿಗೆ ಹೆಚ್ಚಿನ ಮಹತ್ವ ನೀಡಿದ್ದಾರೆ. ಭಾರತವನ್ನು ಆಳುತಿದ್ದ ಬ್ರಿಟಿಶ್ ಅಧಿಕಾರಿಗಳು ತಮ್ಮ ಆಳ್ವಿಕೆ ವಿರುದ್ಧ ನಡೆದ ರೈತ ಹೋರಾಟಗಳನ್ನು ದಂಗೆಗಳೆಂದು ಶಾಸನ ವಿರೋಧಿ ಪಿತೂರಿಗಳೆಂದು ಪರಿಗಣಿಸಿ ಅವುಗಳನ್ನು ದಮನಗೊಳಿಸುವ ಮನೋಭಾವ ಹೊಂದಿದ್ದರು. ಈ ಮೂಲಾಧಾರಗಳಿಗೆ ಹೆಚ್ಚು ಒತ್ತು ಕೊಟ್ಟಂತೆಲ್ಲಾ ಚಾರಿತ್ರಿಕ ಅಧ್ಯಯನಗಳು ಬ್ರಿಟಿಶ್ ಪರವಾದ ನಿಲುವು ತಳೆದು ರೈತರ ಸಮಸ್ಯೆಗಳನ್ನು ಹೋರಾಟದ ಸ್ವರೂಪವನ್ನು ಹೋರಾಟದ ಗುರಿ ಉದ್ದೇಶಗಳನ್ನು ಹಾಗೂ ಅವರ ಮಾನಸಿಕ ಸ್ಥಿತಿಯನ್ನು ಅರಿಯುವಲ್ಲಿ ಹಾಗೂ ಸ್ಪಷ್ಟವಾಗಿ ದಾಖಲಿಸುವಲ್ಲಿ ಸಂಪೂರ್ಣವಾಗಿ ವಿಫಲವಾಗಿವೆ. ಈ ರೀತಿ ಹೋರಾಟ ನಡೆಸಿದ ರೈತಾಪಿ ವರ್ಗದ ಜನ ತಮ್ಮ ಹೋರಾಟದ ಬಗ್ಗೆ ಯಾವುದೇ ಸುಳಿವು ಮಾಹಿತಿ ನೀಡದೆ ಇರುವುದು ಹೋರಾಟದ

ದೃಷ್ಟಿಯಿಂದ ಬಹಳ ಮುಖ್ಯವಾಗಿದ್ದು ಚರಿತ್ರೆಕಾರನಿಗೆ ಈ ವಿವರಗಳು ಲಭ್ಯವಿಲ್ಲದಿರುವುದು ಒಂದು ದೊಡ್ಡ ಕೊರತೆಯಾಗುತ್ತದೆ. ಹೀಗಾಗಿ ಹೋರಾಟದ ಒಟ್ಟಾರೆ ಚಿತ್ರಣ ಸಿಗದೆ ಒಂದು ಮುಖದ ಮೂಲಾಧಾರಗಳು ಮಾತ್ರ ದೊರೆತು ಮತ್ತೊಂದು ಮುಖದ ಮೂಲಾಧಾರಗಳಿಲ್ಲದ ಕಾರಣ ಅದರ ವಿವರಗಳು ಸಿಗದೆ ಚಾರಿತ್ರಿಕ ಅಧ್ಯಯನ ಅಪರಿಪೂರ್ಣವಾಗಿತ್ತಲ್ಲದೆ ಕೇವಲ ಏಕಮುಖೀಯಾವಾದ ಅಧ್ಯಯನವಾಗಿತ್ತು. ಆದರೆ ಇತ್ತೀಚಿನ ದಿನಗಳಲ್ಲಿ ವಸಾಹತುಶಾಹಿ ಕಾಲದ ಭಾರತದ ಚರಿತ್ರೆಯ ಅಧ್ಯಯನಕ್ಕೆ ಸಬಾಲ್ಟ್ರನ್ ಅಧ್ಯಯನಗಳು ಒಂದು ಹೊಸ ಆಯಾಮವನ್ನು ನೀಡಿದೆ. ಮೂಲಾಧಾರಗಳನ್ನು ಪ್ರಶ್ನಿಸುವ ಅವುಗಳ ಉದ್ದೇಶವನ್ನು ಸ್ಪಷ್ಟವಾಗಿ ಅರಿಯುವ ಹಾಗೂ ಸರಿಯಾದ ರೀತಿಯಲ್ಲಿ ಅರ್ಥೈಸುವ ನಿಟ್ಟಿನಲ್ಲಿ ಇವುಗಳ ಅಧ್ಯಯನ ಮಹತ್ವವಾದುದಾಗಿದೆ.

ಹೀಗೆ, ಒರಿಯಂಟಲಿಸ್ಟರ, ಮಾರ್ಕಿಸ್ಟರ ಹಾಗೂ ಸಬಾಲ್ಟ್ರನಿಷ್ಟರ ಚರಿತ್ರೆ ಕಟ್ಟುವಿಕೆಯನ್ನು ಗಮನಿಸಿದರೆ ಭಾರತೀಯರ ಚರಿತ್ರೆ ಕಟ್ಟುವಿಕೆಯು ಇದಕ್ಕಿಂತಲೂ ಭಿನ್ನವಾಗಿದೆ. ಪಾಶ್ಚಾತ್ಯ ಲೋಕದಲ್ಲಿ ಆರಂಭದಿಂದಲೇ 'ಇತಿಹಾಸ' ಎನ್ನುವುದು ಒಂದು ವಿಭಿನ್ನ ಅಧ್ಯಯನ ಶಾಖೆಯಾಗಿ ಬೆಳೆದಿತ್ತು. ಹೆರೊಡೊಟಸ್‌ನಿಂದ ಹಿಡಿದು ಟಾಯನ್‌ಬಿವರೆಗಿನ ಸೈದ್ಧಾಂತಿಕರು ಇತಿಹಾಸದ ಸುತ್ತ ಹಿಸ್ತೋರಿಯಾ (ಸತ್ಯದತ್ತ ಸಂಶೋಧನೆ) ಎನ್ನುವ ಕಲ್ಪನೆ ಬೆಳೆಯಲು ಕಾರಣರಾದರು. ಅಲ್ಲದೆ ತಮ್ಮ ಕೃತಿಗಳಲ್ಲಿ ವೈಜ್ಞಾನಿಕ ವಿಮರ್ಶೆ ಮತ್ತು ಟೀಕಾ ರೀತಿಗೆ ಹೆಚ್ಚಿನ ಪ್ರಾಶಸ್ತ್ಯ ನೀಡಿದರು. ಆದುದರಿಂದ ಇವರ ಇತಿಹಾಸ ಅಧ್ಯಯನದ ಮಾದರಿಯು ಭಿನ್ನ ರೀತಿಯಲ್ಲಿ ಬೆಳೆಯತೊಡಗಿತು. ಆದರೆ ಭಾರತೀಯರಲ್ಲಿ ಇಂತಹ ಅಧ್ಯಯನ ಸ್ವರೂಪವನ್ನು ಇತಿಹಾಸದ ಅಧ್ಯಯನ ಕ್ಷೇತ್ರದಲ್ಲಿ ಬಳಸಿಕೊಳ್ಳಲಾಗಿಲ್ಲ. ಅಂದರೆ ಭಾರತೀಯರ ಇತಿಹಾಸ ಅಧ್ಯಯನದ ಸ್ವರೂಪ ಪಾಶ್ಚಾತ್ಯರಿಗಿಂತಲೂ ಭಿನ್ನ ಸ್ವರೂಪದ್ದು. ಆದುದರಿಂದಲೇ ಅವರು ಭಾರತೀಯರಿಗೆ ಇತಿಹಾಸ ಪ್ರಜ್ಞೆ ಇಲ್ಲಾ ಎಂಬುದಾಗಿ ವಾದಿಸುತ್ತಾರೆ. ಅಲ್ಬೆರೊನಿ, ಆರ್.ಸಿ.ಮಜುಂದಾರ್, ಜೇಮ್ಸ್ ಫೈಥ್‌ಪುಲ್ ಫ್ಲೀಟರು ಭಾರತೀಯರಲ್ಲಿ ಇತಿಹಾಸ ಅಧ್ಯಯನದ ಅಭಿರುಚಿ ವಿಭಿನ್ನ ಸ್ವರೂಪದಾಗಿತ್ತು ಎಂದು ತಿಳಿಸುತ್ತಾರೆ. ಭಾರತೀಯ ಇತಿಹಾಸ ರಚನೆಯನ್ನು ಕುರಿತು ಅಲ್ಬೆರೊನಿಯು ಹೀಗೆ ಅಭಿಪ್ರಾಯಪಡುತ್ತಾರೆ "ಭಾರತೀಯರು ಇತಿಹಾಸ ರಚನಾ ಕ್ರಮದ ಬಗ್ಗೆ ಯಾವತ್ತೂ ಆಸಕ್ತಿಯನ್ನು ವಹಿಸಲಿಲ್ಲ. ಕಾಲಾನುಕ್ರಮಣಿಕೆ, ದಾಖಲೀಕರಣದ ವಿಷಯದಲ್ಲಿ ಅವರಿಗೆ ಯಾವತ್ತೂ ಮಾಹಿತಿ ಇರಲಿಲ್ಲ. ಯಾರಾದರೂ ಅವರಿಗೆ ತಮ್ಮ ಹಿರಿಯರ ಬಗ್ಗೆ ಒತ್ತಾಯ ಮಾಡಿದರೆ ಉತ್ಪ್ರೇಕ್ಷಿತ ಕತೆಗಳನ್ನಷ್ಟೇ ಅವರು ಹೇಳುತ್ತಿದ್ದರು" ಎಂಬುದಾಗಿ ಹೇಳಿದರೆ, ಸರ್ ಜೇಮ್ಸ್ ಫೈಥಪುಲ್ ಫ್ಲೀಟರು ಹೇಳುವ ಪ್ರಕಾರ ಪ್ರಾಚೀನ "ಭಾರತೀಯರಿಗೆ ಇತಿಹಾಸ ಎಂದರೇನೆಂದು ತಿಳಿದಿತ್ತೇ ಎಂದು ಹೇಳುವುದು ಕಷ್ಟ, ಯಾಕೆಂದರೆ ವಿಷಯಕ್ಕೆ ನಿರ್ದಿಷ್ಟವಾದ

ಘಟನೆಗಳ ಕುರಿತು ಸೂಕ್ತ ಮಾಹಿತಿ ನೀಡುವ ಒಂದು ಸಣ್ಣ ಟಿಪ್ಪಣಿ ಬರೆಯಲು ಭಾರತೀಯರಿಂದ ಸಾಧ್ಯವಿಲ್ಲ" ಎಂಬುದಾಗಿ ಅಭಿಪ್ರಾಯ ಪಡುತ್ತಾರೆ. ಹಾಗೂ, ಆರ್.ಸಿ.ಮಜುಂದಾರರು "ಭಾರತೀಯರು ಭೂತಕಾಲದ ಕುರಿತು ವೈಜ್ಞಾನಿಕ ವಿಶ್ಲೇಷಣೆ ತೋರಿಸದಿರುವುದು ಭಾರತೀಯ ಸಂಸ್ಕೃತಿಯ ದೊಡ್ಡ ದೋಷವಾಗಿದೆ. ಭಾರತೀಯರು ತಮ್ಮ ಪೂರ್ವಜರ ಜೀವನದ ಕುರಿತು ಇಂತಹ ಅಸಡ್ಡೆಯನ್ನು ತೋರಿಸಲು ಕಾರಣವೇನೆಂಬುದನ್ನು ತಿಳಿಯಲು ಅಸಾಧ್ಯವಾಗಿದೆ" ಎಂಬುದಾಗಿ ಕಳವಳ ವ್ಯಕ್ತಪಡಿಸಿದ್ದಾರೆ.

ಆದರೆ, ಹಿಂದೂಗಳಲ್ಲಿ ಐತಿಹಾಸಿಕ ಅರಿವು ಇತ್ತೇ ಎಂಬ ಪ್ರಶ್ನೆಗೆ ವಿಭಿನ್ನ ಉತ್ತರಗಳನ್ನು ಕೊಡಲಾಗಿದೆ. ಪ್ರೊ. ಷೇಕ್ ಅಲಿಯವರು ಅಭಿಪ್ರಾಯಪಡುವಂತೆ "ಇತಿಹಾಸವು ಮಾನವ ಬುದ್ಧಿಯ ಬೆಳವಣಿಗೆಯ ವೃತ್ತಾಂತವಾಗಿದ್ದರೆ ಭಾರತೀಯರು ನಿಶ್ಚಯವಾಗಿ ಇತಿಹಾಸವನ್ನು ಹೊಂದಿದ್ದಾರೆ. ಆದರೆ ಅದರ ಪ್ರಕಾರ ಮತ್ತು ಪಡಿಕಟ್ಟು ಪಠ್ಯಪುಸ್ತಕದ ಅರ್ಥವಿವರಣೆಗೆ ಅನುರೂಪವಾಗಿಲ್ಲದಿರಬಹುದು. ಇತಿಹಾಸವು ಸತ್ಯಸ್ಥಿತಿಯಲ್ಲಿ ಏನು ನಡೆಯುತ್ತದೆಂಬುದನ್ನು ಕುರಿತ ಮಾನವ ಚಿಂತನೆಯ ಪ್ರತಿಬಿಂಬವಾಗಿದ್ದಾರೆ. ಐತಿಹಾಸಿಕ ಪ್ರಜ್ಞೆಯಲ್ಲಿ ಭಾರತೀಯರನ್ನು ದೂರಸರಿಸಿದ್ದಾರೆ ಎಂಬ ನಮ್ಮ ಹಳೆಯ ಗ್ರಹಿಕೆಯನ್ನು ಪರೀಕ್ಷಿಸಬೇಕಾಗುತ್ತದೆ" ಎಂಬುದಾಗಿ ಅಭಿಪ್ರಾಯಪಡುತ್ತಾರೆ.

ಒಂದು ನಿರ್ದಿಷ್ಟವಾದ ಐತಿಹಾಸಿಕ ಸಾಹಿತ್ಯದ ಕೊರತೆ ಕಂಡು ಬಂದಾಗ್ಯೂ ಪ್ರಾಚೀನ ಭಾರತೀಯರಲ್ಲಿ ಐತಿಹಾಸಿಕ ಭಾವನೆಗಳ ಕೊರತೆ ಇರಲಿಲ್ಲವೆಂದು ಪ್ರತಿಪಾದಿಸಬಹುದು. ಆದರೆ ಈ ಭಾವನೆಗಳು ನಮಗೆ ಹಿಡಿಯಾಗಿ ದೊರೆಯುವುದಿಲ್ಲ ಬದಲಿಗೆ ವೇದೋಪನಿಷತ್ತುಗಳಿಂದ ಹಿಡಿದು ಸಾಹಿತ್ಯ ಕೃತಿ ಹಾಗೂ ಕಾವ್ಯಗಳಲ್ಲಿ ಇತಿಹಾಸದ ಕೆಲವು ತುಣುಕುಗಳನ್ನು ಸಮೀಕರಿಸಿ ಎಣೆಯಲಾಗಿದೆ. ವೈದಿಕ ಸಾಹಿತ್ಯವನ್ನೊಳಗೊಂಡಂತೆ ಆಧುನಿಕ ಸಾಹಿತ್ಯದವರೆಗಿನ ಕೃತಿಗಳು ಧಾರ್ಮಿಕ ಶಾಸ್ತ್ರ ನಿಬಂಧನೆಯಾಗಿರುವುದರಿಂದ ಇಂತಹ ಕೃತಿಗಳಿಂದ ಆರಿಸಿಕೊಳ್ಳಲಾಗುವ ಐತಿಹಾಸಿಕ ಅಂಶಗಳನ್ನು ಎಚ್ಚರಿಕೆಯಿಂದ ಪರಿಗಣಿಸಬೇಕಾಗುತ್ತದೆ.

ಪ್ರಾಚೀನ ಸಿದ್ಧಾಂತಗಳ ಮೌಲ್ಯಮಾಪನ ಪ್ರಕ್ರಿಯೆಯ ಸಂದರ್ಭದಲ್ಲಿ ಪ್ರಾಂತೀಯ ಸಂಕುಚಿತ ಮನೋಭಾವ ಮತ್ತು ಮಾನಸಿಕ ಪೂರ್ವಗ್ರಹಗಳ ಪಾಶ್ಚಾತ್ಯ ಇತಿಹಾಸ ವಿಮರ್ಶಕರಿಗೆ ಅನ್ಯ ಸಂಸ್ಕೃತಿಗಳ ವಿಶಿಷ್ಟತೆಯ ಗ್ರಹಿಕೆ ಸಾಧ್ಯವಾಗಲಿಲ್ಲ. ಮೂಲತತ್ವಗಳಿಗೆ ಸಂಬಂಧಿಸಿದಂತೆ ಇತಿಹಾಸ ತತ್ವದ ವಿಮರ್ಶೆ ಸಕಲ ಭೂಮಂಡಲಕ್ಕೂ ಸೇರಿದ್ದಾದರೂ ಕಳೆದ ಎರಡು ಸಾವಿರ ವರ್ಷಗಳಿಂದಲೂ ಬಹುತೇಕ ಚರ್ಚೆಗಳು ಕೇವಲ ಯೂರೋಪಿನ ಪರಧಿಯೊಳಗೆ ಕೇಂದ್ರಿತವಾಗಿವೆ.

ಥ್ಯೂಸಿಡೈಡಸ್ ಮತ್ತು ಪಾಲಿಬಿಯಸ್ ತಮ್ಮ ಆಸಕ್ತಿಯನ್ನು ಗ್ರೀಸ್ ಮತ್ತು ರೋಮಿಗೆ ಮಾತ್ರ ಸೀಮಿತಗೊಳಿಸಿದ್ದರು. ಮಧ್ಯಕಾಲೀನ ಯುಗದಲ್ಲಿ ಇಸ್ರೇಲ್ ಮತ್ತು ಪ್ಯಾಲಿಷ್ಟೇನ್ ಮಾತ್ರ ಚರ್ಚಿತ ಕೇಂದ್ರಗಳಾಗಿದ್ದವು. ಆಧುನಿಕ ಯುಗದಲ್ಲೂ ವಾಲ್ಟೇರಿನ ಗಾಢವಾದ ಚಿಂತನೆ ಕೇವಲ ಯುರೋಪಿನ ವಿಷಯವನ್ನು ಮಾತ್ರ ದೃಷ್ಟಿಯಲ್ಲಿರಿಸಿಕೊಂಡಿತು. ತನ್ನ ಸಾರ್ವಲೌಕಿಕ ಆಶಯಗಳಿಗನುಗುಣವಾಗಿ ಹರ್ಡರ್ ತನ್ನ ವಿಮರ್ಶೆಯನ್ನು ವಿಸ್ತೃತಗೊಳಿಸಲಿಲ್ಲ. ಈ ಶತಮಾನದ ಸ್ಪೆಂಗ್ಲರ್ ಮತ್ತು ಟಾಯನ್ ಬಿ ಸಹ ಪಾಶ್ಚಾತ್ಯ ಇತಿಹಾಸವನ್ನೇ ಕೇಂದ್ರವನ್ನಾಗಿ ಮಾಡಿಕೊಂಡರು. ಹೀಗೆ ಪಕ್ಷಪಾತ ಜಾಲದಲ್ಲಿ ಸಿಲುಕಿಕೊಂಡ ಪಾಶ್ಚಾತ್ಯರು ತಮ್ಮದೇ ಆದ ಜಗತ್ತಿನ ಹೊರ ನೋಟದ ಸಂಕುಚಿತ ದೃಷ್ಟಿಯಲ್ಲಿ ಬಂಧಿತರಾಗಿ ಭಾರತವನ್ನು ಅವರ ಪೂರ್ವಾಗ್ರಹ ಮನೋವೃತ್ತಿಯ ಬೆಳಕಿನಲ್ಲಿ ನೋಡತೊಡಗಿದರು. ಹೀಗಾಗಿ ಭಾರತದ ಸುಸಂಸ್ಕೃತವಾದ ಆತ್ಮ ಗ್ರಹಿಕೆಯಾಗಲಿ ಮತ್ತು ಅದರ ವೈಶಿಷ್ಟ್ಯವಾಗಲಿ ಅವರಿಗೆ ಅರಿವಾಗಲೇಯಿಲ್ಲ. ಭಾರತದ ಸುಸಂಸ್ಕೃತ ಚಿಂತನೆ ಮತ್ತು ಜೀವನದ ಆದರ್ಶ ಪರಿಜ್ಞಾನ ಹೊಂದುವುದಕ್ಕಾಗಲಿ, ಮೌಲ್ಯಮಾಪನ ಮಾಡುವದಕ್ಕಾಗಲಿ, ಕೊನೆಗೂ ಅವರಿಗೆ ಸಾಧ್ಯವಾಗಲೇಯಿಲ್ಲ. ಅದರಲ್ಲೂ ೧೮ ಮತ್ತು ೧೯ನೇ ಶತಮಾನಗಳಲ್ಲಿ ಕೇವಲ ಐರೋಪ್ಯದ ಹಿರಿಮೆಯ ಪ್ರಜ್ಞೆಯುಳ್ಳ ಅವರ ಪಾಲಿಗೆ ವಿಶಾಲ ಮನೋಭಾವ ಸಾಧ್ಯವಾಗಲಿಲ್ಲ. ಅಲ್ಲದೆ ವಸ್ತು ನಿಷ್ಠೆಯಿಂದ ಭಾರತವನ್ನು ಅರ್ಥಮಾಡಿಕೊಳ್ಳುವ ಮತ್ತು ಇತಿಹಾಸದ ನಿರ್ದಿಷ್ಟ ಮಾದರಿಗೆ ಅನುಗುಣವಾಗಿ ಭಾರತದ ಇತಿಹಾಸವನ್ನು ಸರಿಹೊಂದಿಸಬಲ್ಲ ಯಾವುದೇ ಪ್ರಯತ್ನ ನಡೆದಿರುವಂತೆ ತೋರಲಿಲ್ಲ. ಹಾಗೆ ನೋಡಿದರೆ ಭಾರತದ ಸಂಸ್ಕೃತಿ ತನ್ನದೇ ಆದ ಅಪ್ರತಿಮ ವೈಶಿಷ್ಟ್ಯ ಹೊಂದಿದ್ದು, ಅದನ್ನು ಪಾಶ್ಚಾತ್ಯರ ಸಂಕುಚಿತ ಪ್ರಮಾಣಗಳಿಂದ ಅಳೆಯಲಾಗದು. ಪಾಶ್ಚಾತ್ಯ ಇತಿಹಾಸ ವಿಮರ್ಶಕರಿಂದ ಚರ್ಚಿತವಾದ ಭಾರತೀಯ ಇತಿಹಾಸ ಅಧ್ಯಯನ ಕೇವಲ ದ್ವಿಮುಖ ಚೌಕಟ್ಟಿನೊಳಗೆ ಬೆಳದಿದೆ. ಕೇವಲ ವ್ಯಕ್ತಿತ್ವ ಮತ್ತು ಘಟನೆಗಳ ಬಗೆಗೆ ಅವರ ದೃಷ್ಟಿ ಕೇಂದ್ರಿಕೃತವಾದ್ದರಿಂದ ಪ್ರಜ್ಞಾಯುತವಾದ ಆದರ್ಶ ಸಂಸ್ಕೃತಿ ಸಂಪೂರ್ಣವಾಗಿ ನಿರ್ಲಕ್ಷಿಸಲ್ಪಟ್ಟಿತು.



ಭಾರತೀಯರಿಗೆ ಇತಿಹಾಸ ಪ್ರಜ್ಞೆಯೆ ಇರಲಿಲ್ಲ. ಇತಿಹಾಸ ಪ್ರತಿಪಾದಕವಾದ ಸಾಹಿತ್ಯವನ್ನು ಸೃಷ್ಟಿಸಿಲ್ಲ ಎಂಬುದು ಅವರ ದೃಢನಂಬಿಕೆ. ಅಷ್ಟೇ ಅಲ್ಲ ಪಾಶ್ಚಾತ್ಯ ಪಂಡಿತರಿಗೆ ಇರುವ ಇತಿಹಾಸ ಪ್ರಜ್ಞೆ ಪ್ರಾಚೀನ ಭಾರತೀಯರಿಗೆ ಇರಲಿಲ್ಲ ಎಂಬುದು ಅವರ ಘೋಷಣೆ.

ಆದರೆ, ಇತಿಹಾಸದ ಸತ್ತ್ವ ಕೇವಲ ಘಟನೆಗಳ ದಾಖಲೆಗಳಲ್ಲಿ ಮಾತ್ರ ನೆಲೆಸಿರುವುದಿಲ್ಲ. ಬದಲಿಗೆ ಒಂದು ರಾಷ್ಟ್ರದ ಸೃಜನಶೀಲ ಚಿಂತಕರ ಚಿಂತನೆ, ಭಾವನೆ ಮತ್ತು ವಿಚಾರಧಾರೆಗಳಲ್ಲಿ ಅಂತರ್ಗತವಾಗಿರುತ್ತದೆ. ಘಟನೆಗಳ ನಿರೂಪಣೆ ಮತ್ತು ಸಾಕ್ಷಿಗಳಿಂದ ಭಾರತೀಯ ಇತಿಹಾಸ ವಿವರಣೆ ಸಾಧ್ಯವಾಗಿಲ್ಲದೆ ಇರಬಹುದು ಆದರೆ, ಕಾವ್ಯ ಮತ್ತು ಇತಿಹಾಸ ತತ್ವಶಾಸ್ತ್ರದಲ್ಲಿ

ವೈಯಕ್ತಿಕ ಮತ್ತು ಸಾಮಾಜಿಕ ಜೀವನದ ವಿವರಣೆ ಇತಿಹಾಸಾತ್ಮಕವಾಗಿರುತ್ತದೆ. ಭಾರತೀಯ ಸಾಹಿತ್ಯದಲ್ಲಿ ಐತಿಹಾಸಿಕ ಘಟನೆಗಳ ನಿಷ್ಕೃಷ್ಟವಾದ ಕಾಲಗಣನೆಗೆ ಹೆಚ್ಚು ಪ್ರಾಮುಖ್ಯತೆ ಕೊಡಲಿಲ್ಲ ಎಂಬುದು ಒಪ್ಪುತಕ್ಕದ್ದೆ. ಆದರೆ ಭಾರತೀಯರಿಗೆ ಐತಿಹ್ಯವೇ ಪ್ರಧಾನ ಮತ್ತು ಕಲ್ಪನೆಯ ಕಥೆಯೇ ಪ್ರಮುಖ ಎಂಬ ವಾದವನ್ನು ಮಾತ್ರ ಒಪ್ಪಲಾಗದು. ಜ್ಞಾನಶಾಖೆಯಂತಿರುವ ಇತಿಹಾಸ ಪರಿಕಲ್ಪನೆಯ ಅಭಾವವಿತ್ತೆಂದು ಹೇಳಲಾಗುವುದಿಲ್ಲ. ಜನಸಮುದಾಯದ ಇತಿಹಾಸ ಕಾಲದ ಗತಿಯಲ್ಲಿಲ್ಲದೆ ಅವರ ಸಾಮಾಜಿಕ ಮತ್ತು ಮಾನಸಿಕ ವಿಕಾಸದಲ್ಲಿ ಅಂತಸ್ತವಾಗಿತ್ತು ಎನ್ನುವುದಾದರೆ ಜನಸಮುದಾಯದ ಸಾಹಿತ್ಯಿಕ ದಾಖಲೆಗಳಲ್ಲಿ ಇದನ್ನು ಕಾಣಬುಹುದು. ಜನಸಮುದಾಯದ ಇತಿಹಾಸ ಪ್ರಾಚ್ಯ ಸಂಶೋಧಕನ ಸಂಶೋಧನೆಯಲ್ಲಿ ಅಡಗಿರುವುದಿಲ್ಲ. ಬದಲಿಗೆ ಜನಸಮುದಾಯದ ಸಾಹಿತ್ಯಿಕ ದಾಖಲೆಗಳ ಒಡಲಲ್ಲಿರುತ್ತದೆ. ಇವು ನಿರಂತರವಾದದ್ದು, ಯಶಸ್ವಿ ಕಾಲಘಟ್ಟಗಳಲ್ಲಿ ಉತ್ಪಾದಿತವಾದವು. ಸಾಧಾರಣವಾಗಿ ರಾಜರುಗಳ ಮತ್ತು ಅಹವಮಲ್ಲರ ರಾಜಕೀಯ ಸಾಧನೆಗಳ ದಾಖಲೆಗಳಿಗಿಂತ ಮಿಗಿಲಾಗಿ ಜನಸಮುದಾಯದ ಮನೋಭಾವವನ್ನು ಪ್ರತಿಬಿಂಬಿಸುತ್ತದೆ. ಸಹಸ್ರಾರು ವರ್ಷಗಳ ಉದ್ದಕ್ಕೂ ಕಾಣಬರುವ ಭಾರತದಲ್ಲಿನ ತತ್ವಶಾಸ್ತ್ರೀಯ ಮತ್ತು ಸಾಹಿತ್ಯಿಕ ಕೃತಿಗಳು ಪಶ್ಚಿಮದ ಮನಸ್ಸುಗಳಿಗೆ ಆಪರಿಚಿತವಾಗಿರುವಂತೆ, ವಿಶಿಷ್ಟವಾದ ಇತಿಹಾಸ ತತ್ವಶಾಸ್ತ್ರವನ್ನು ಭಾರತ ಅಭಿವೃದ್ಧಿಪಡಿಸಿದೆ ಎಂಬ ಅಂಶವನ್ನು ಸಾಬೀತುಪಡಿಸಿದೆ. ಇಂಥ ಕೃತಿಗಳನ್ನು ಪ್ರೇರೇಪಿಸಿದ ಆಲೋಚನೆಗಳನ್ನು ಅಧ್ಯಯ ಮಾಡದೆ ಅವುಗಳನ್ನು ಆಸ್ವಾದಿಸಲು ಸಾಧ್ಯವಾಗದು.

ಭಾರತೀಯ ಇತಿಹಾಸ ತತ್ವಶಾಸ್ತ್ರದ ಮಹತ್ವವನ್ನರಿಯಬೇಕಾದರೆ ಹಾಗೂ ಅವುಗಳ ಬಗೆಗಿನ ಸೂಕ್ತ ಅಲೋಚನೆಯನ್ನು ರೂಪಿಸಿಕೊಳ್ಳಬೇಕಾದರೆ, ಕೆಲವು ಮುಖ್ಯ ಸಂಗತಿಗಳ ಜ್ಞಾನ ಅತ್ಯಾವಶ್ಯ. ಪ್ರಾಚೀನ ಭಾರತದ ಇತಿಹಾಸ ಕೇವಲ ಸಂಗತಿಗಳ ಅಥವಾ ಘಟನೆಗಳ ಅಧ್ಯಯನವಾಗಿರಲಿಲ್ಲ. ಆದರೆ ಅದರ ಚಿಂತನೆಯ ಹಿನ್ನಲೆಯಾಗಿರುವ ಸಂಗತಿಗಳ ಸಂಕೇತ ರೂಪವಾಗಿತ್ತು. ಬದುಕಿನ ಗತಿಶೀಲ ಪ್ರಕ್ರಿಯೆಯ ಒಳಸೂಚಿ ಒಳನೋಟವಾಗಿತ್ತು. ಆದರೆ ಪಾಶ್ಚಾತ್ಯರು ಈ ದೃಷ್ಟಿಯಿಂದ ಭಾರತೀಯ ಇತಿಹಾಸ ತತ್ವವನ್ನು ಅಧ್ಯಯನ ಮಾಡಲಿಲ್ಲ.

ಭಾರತೀಯ ಮನಸ್ಸಿನಲ್ಲಿರುವ ಇತಿಹಾಸವೆಂದರೆ, ಸಾರ್ವಲೌಕಿಕ ವಸ್ತು ಸತ್ವವನ್ನು ತನ್ನ ಸ್ವಾಮ್ಯದಲ್ಲಿರಿಸಿಕೊಂಡಿರುವಂಥದ್ದು. ಅಲ್ಲಿನ ಸಂಗತಿ ಮತ್ತು ಸಂಪ್ರದಾಯ, ಸೃಷ್ಟಿ ಕ್ರಿಯೆಯ ಪೂರ್ಣ ನಾಟಕವನ್ನು ಗರ್ಭಿಕರಿಸಿಕೊಂಡ ಒಂದು ವಿಶಾಲ ಕಥಾನಕದ ಕೇವಲ ಒಂದು ಭಾಗ ಮಾತ್ರ, ಹೀಗಾಗಿ, ವಿಶ್ವಸ್ಪಷ್ಟವಾದ ವಿಶ್ವಶಾಸ್ತ್ರ ಮತ್ತು ಧರ್ಮ ಇವುಗಳೊಂದಿಗೆ ಐತಿಹಾಸಿಕ ಸಾಹಿತ್ಯ ಗಾಢ ಸಂಬಂಧವನ್ನು ಹೊಂದಿದೆ. ಇತಿಹಾಸದ ವಾಸ್ತವಿಕಾಂಶಗಳನ್ನೇ ನಿರ್ಲಕ್ಷಿಸಿರುವಂತೆ ತೋರುವ ಭಾರತೀಯ ಇತಿಹಾಸದ ಪರಿಕಲ್ಪನೆ ಅತಿಯಾದ ಆದರ್ಶ

ರೂಪದಂತೆ ಕಾಣಿಸಬಹುದು. ಮತ್ತು ಈ ಕಾರಣದಿಂದಾಗಿ ವೈಜ್ಞಾನಿಕ ಮತ್ತು ಅನುಭವ ಮೂಲವಿಧಾನವೇ ವಿಷಯ ಗ್ರಹಿಕೆಗೆ ಸೂಕ್ತ ಮಾರ್ಗವೆಂದು ನಂಬಿರುವ ಆಧುನಿಕ ಮನಸ್ಸುಗಳಿಗೆ ತೃಪ್ತಿಯಿಲ್ಲದಿರಬಹುದು. ಅವರ ಪ್ರಕಾರ ಭೌತಾತೀತ ವಸ್ತು ವಿಚಾರಗಳೊಂದಿಗೆ ಇತಿಹಾಸ ವ್ಯವಹರಿಸಬಾರದು. ಒಂದು ರಾಷ್ಟ್ರದ ನಿರ್ಮಿತಿಗೆ ಕಾರಣವಾಗುವ ಜನರೊಂದಿಗೆ ವ್ಯವಹರಿಸಬೇಕು. ಕಾಲಗತಿಯಲ್ಲಿ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು ಪ್ರಕೃತಿ, ಸಾಮಾಜಿಕ ಪರಿಸರದೊಡನೆ ಸೆಣಸಿದ ಮನುಷ್ಯನ ಹೋರಾಟದ ಕಥೆಯಾಗಬೇಕು. ಮನುಷ್ಯ ಸಾಧನೆಗಳ ಕಥೆಯಾಗಬೇಕು. ಆದರೆ ಇತಿಹಾಸದಲ್ಲಿನ ಅಸ್ತಿತ್ವದ ಉಳಿವಿನ ಪ್ರಶ್ನೆ ಎಂದರೆ, ವ್ಯಕ್ತಿಗತ ಮತ್ತು ಸಾಮಾಜಿಕ ಬದುಕಿನ ಪ್ರಶ್ನೆ–ಸೌಹರ್ದ ಬಾಳ್ವೆ ವ್ಯಕ್ತಿಯ ಅಂತರ್ಯ ಮತ್ತು ಬಾಹ್ಯ ಬದುಕಿನ ಸೂಕ್ತ ಸಮತೋಲನ ಮತ್ತು ಸಾಮಾಜಿಕ ಅಭಿವೃದ್ಧಿ ಮುಂತಾದವುಗಳಿಗೆ ಸಂಬಂಧಿಸಿದ ಪ್ರಶ್ನೆ. ವ್ಯಕ್ತಿ ಮತ್ತು ಸಮುದಾಯದ ನಡುವೆ ಸೌಹಾರ್ದತೆ ಮತ್ತು ಸಾಮಾಜಿಕ ಸುಸಂಬದ್ಧತೆ ಸಾಧಿತವಾಗಬೇಕು.

ವ್ಯಕ್ತಿ ಮತ್ತು ಸಮುದಾಯದ ನಡುವೆ ನಿಜವಾದ ಸೌಹಾರ್ದವನ್ನು ಪ್ರೇರೇಪಿಸಬೇಕಾದರೆ, ಬದುಕಿನ ಆಧ್ಯಾತ್ಮಿಕ ತಳಹದಿಯನ್ನು ಅರಿಯಲೇಬೇಕು. ರಾಷ್ಟ್ರ ಅಥವಾ ಜನಾಂಗ ಮುಂತಾದ ಒಂದು ನಿರ್ದಿಷ್ಟ ಗುಂಪಿಗೆ ಒಂದು ಅರ್ಥದಲ್ಲಿ ಆತ ಸೇರಿದ್ದರೆ ಮತ್ತೊಂದು ಅರ್ಥದಲ್ಲಿ ಅದನ್ನು ಮೀರಿ ಹಿಡೀ ಮಾನವತ್ವಕ್ಕೆ ಸೇರಿದ್ದಾನೆ. ಆಗ ಸ್ವಾರ್ಥದ ಮಿತಿಯನ್ನು ಮೀರಿ ವಿಸ್ತರಿತ ಪದಾರ್ಥದ ಹಿತದಲ್ಲಿ ಉದ್ಯುಕ್ತನಾಗುತ್ತಾನೆ. ಸಮಷ್ಟಿ ಬದುಕಿನೊಂದಿಗೆ ತನ್ನ ವ್ಯಷ್ಟಿ ಬದುಕನ್ನು ಸಮನ್ವಯಗೊಳಿಸುತ್ತಾನೆ. ಭಾರತೀಯ ಶೃತಿಗಳ ಸಂದೇಶವನ್ನು ಪಾಲಿಸಲು ಲೋಕ ಸಂಗ್ರಹ ಕಾರ್ಯ ಅತ್ಯವಶ್ಯ. ಎಲ್ಲಿ ನಿಜವಾದ ಇತಿಹಾಸ ಪರಿಕಲ್ಪನೆ ಗೃಹಿತವಾಗಿರುತ್ತದೆಯೋ ಅಲ್ಲಿ ಮಾತ್ರ ಇಂಥ ಆದರ್ಶದ ಸಾಧ್ಯತೆಯಿರುತ್ತದೆ. ಇದೇ ಭಾರತೀಯ ಇತಿಹಾಸ ಸಂಸ್ಕೃತಿ ಸಂದೇಶ.

ಭಾರತೀಯ ಶ್ರದ್ಧೆಯಲ್ಲಿ 'ಪ್ರಜಾ' (ಜನಸಮುದಾಯ) ಮತ್ತು 'ಪ್ರಜಾಪತಿ' (ವಿಶ್ವಸೃಷ್ಟಿಕರ್ತ) ಇವರ ಒಗ್ಗೂಡುವಿಕೆಯ ವ್ಯವಹಾರವೇ ಇತಿಹಾಸ ಎಂಬ ನಂಬಿಕೆಯಿದೆ. ಇದೇ ಇತಿಹಾಸದ ಪೂರ್ಣತಮ ಪರಿಕಲ್ಪನೆ. ಈ ಎರಡೂ ಅಂಶಗಳ ಆಂತರಿಕ ಸಂಬಂಧವನ್ನು ಯಾರು ತಿಳಿಯಬಲ್ಲರೋ ಅವರು ಮಾತ್ರ ಇತಿಹಾಸದ ನಿಜವಾದ ಅರ್ಥವನ್ನು ತಿಳಿಯುವರು. ಗತಕಾಲದಲ್ಲಿ ಯಾವುದು ಆಸ್ತಿತ್ವದಲ್ಲಿತ್ತೊ ಅವೆಲ್ಲವೂ ಇತಿಹಾಸದ ವ್ಯಾಪ್ತಿಯಲ್ಲಿ ಸೇರುತ್ತವೆ.

ಇತಿಹಾಸದ ವ್ಯಾಪ್ತಿಯ ವಿಷಯದಲ್ಲಿ ಭಾರತೀಯರಿಗೂ ಪಾಶ್ಚಾತ್ಯರಿಗೂ ವ್ಯತ್ಯಸವಿದೆ. ಪಾಶ್ಚಾತ್ಯರು ಇತಿಹಾಸವನ್ನು ಒಂದು ಸ್ವತಂತ್ರಶಾಸ್ತ್ರ ಎಂದು ಪರಿಗಣಿಸಿದರು. ಭಾರತೀಯರಿಗೆ ಇತಿಹಾಸ ಎಂಬುದು ತಾತ್ವಿಕ ಚಿಂತನೆಯ ಮತ್ತು ನೈತಿಕ ಆತ್ಮೋನ್ನತಿ ಸಾಧನೆಯ ಒಂದು ಅವಿಚ್ಛಿನ್ನ ಭಾಗವೆಂದು ಪರಿಗಣಿತವಾಗಿತ್ತು. ಜ್ಞಾನಕ್ಷೇತ್ರದಲ್ಲಿ ಅದಕ್ಕೊಂದು ಉತ್ಕೃಷ್ಟ ಸ್ಥಾನ

ನೀಡಲಾಗಿತ್ತು. ಪವಿತ್ರ ಸ್ಥಾನವನ್ನು ಹೊಂದಿರುವುದರಿಂದ ಅದನ್ನು "ಪಂಚಮವೇದ" ಎಂದು ಪರಿಗಣಿಸಿದರು. ವೇದಗಳ ಅನಂತರ ರಚಿತವಾದ ಕಾವ್ಯದ ಇತರ ಶಾಖೆಗಳಿಗಿಂತ ಒಂದು ಉನ್ನತ ಪಂಕ್ತಿಯಲ್ಲಿ ಸ್ಥಾಪಿತವಾಯಿತು.

ಕೌಟಿಲ್ಯನ ಪ್ರಕಾರ, ಇತಿಹಾಸ ಕಾಲಾವಧಿಗಳಲ್ಲಿ ಮಾತ್ರ ಒಳಗೊಂಡಿರುವುದಿಲ್ಲ. ಮಾನವನಿಗೆ ಸಂಬಂಧಿಸಿದ ಲೌಕಿಕಾಲೌಕಿಕ ವಿಚಾರಗಳನ್ನೂ ಒಳಗೊಂಡಿದೆ. ಮಾನವನಿಗೆ ಸಂಬಂಧಿಸಿದ ಪರಂಪರೆ, ಸಾಮಾಜಿಕ, ರಾಜಕೀಯ, ನೈತಿಕ ಮತ್ತು ಆರ್ಥಿಕ ಸಿದ್ಧಾಂತಗಳು ಮತ್ತು ಅವುಗಳ ವ್ಯಾವಹಾರಿಕ ಅನ್ವಯ ಎಲ್ಲವೂ ಇತಿಹಾಸದ ವ್ಯಾಪ್ತಿಗೆ ಸೇರಿದೆ.

ಭಾರತೀಯ ಮಹಾಕಾವ್ಯಗಳಲ್ಲಿ ಪ್ರಮುಖವಾದ ಮಹಾಭಾರತ ಈ ಬಗೆಯ ಇತಿಹಾಸಕ್ಕೆ ಒಂದು ಆದರ್ಶ ಮಾದರಿಯಾಗಿದೆ. ಭಾಷೆಗಳಿಂದ ರಚಿತವಾದುದರಿಂದ ಇತಿಹಾಸವನ್ನು 'ಆರ್ಷ' ವೆಂದು ಉತ್ತಮವಾದ ಆನಂದಕಾರಕ ಸಂವಾದದ ಮೂಲಕ ಬೋಧಿಸುವುದರಿಂದ ಸೂಕ್ತವೆಂದು ಸಂಬೋಧಿಸುತ್ತಾರೆ. ಒಟ್ಟಿನಲ್ಲಿ ಪ್ರಾಚೀನ ಭಾರತದಲ್ಲಿ ಐತಿಹಾಸಿಕ ಚಿಂತನೆಗೆ ಪ್ರಾಮುಖ್ಯವಿತ್ತು ಎಂಬುದಕ್ಕೆ ಇತಿಹಾಸಕ್ಕೆ ನೀಡಲಾಗಿದ್ದ ಉಪನಿಷತ್ತಿನ ಸ್ಥಾನಮಾನಗಳೆ ಪ್ರಮುಖ ಸಾಕ್ಷಿಯಾಗಿದೆ.

ಒಟ್ಟಾರೆ ಹೇಳುವುದಾದರೆ, ಪ್ರಾಚೀನ ಭಾರತೀಯ ಇತಿಹಾಸ ಲೇಖನಾ ಶೈಲಿಯು ಸಮಸ್ಯೆಗಳ ಸಂಕೀರ್ಣವನ್ನು ಮುಂದಿರುಸುತ್ತದೆ. ನಮ್ಮ ಪೂರ್ವಿಕರ ಆಸಕ್ತಿ ಇತಿಹಾಸಕ್ಕಿಂತ ಇತರ ಕ್ಷೇತ್ರಗಳಲ್ಲಿತ್ತು. ಆದರೆ ಇತಿಹಾಸವು ಮಾನವ ಜೀವನಕ್ಕೆ ಸಂಬಂಧಿಸಿದ ಅವಶ್ಯ ಚಟುವಟಿಕೆಯಾಗಿರುವುದರಿಂದ ಮತ್ತು ಮಾನವನ ಜೀವನವು ನಮ್ಮ ಪೂರ್ವಿಕರ ಅಧ್ಯಯನದ ಮೂಲ ಉದ್ದೇಶವಾಗಿದ್ದುದರಿಂದ ಅವರು ಐತಿಹಾಸಿಕ ಪ್ರಜ್ಞೆಯನ್ನು ಹೊಂದಿರಲಿಲ್ಲವೆಂದು ಹೇಳಲಾಗುವುದಿಲ್ಲ. ಈ ಪ್ರಜ್ಞೆಯು ಅವರಲ್ಲಿ ಸಮೃದ್ಧವಾಗಿತ್ತು. ಆದರೆ ಅದು ಗೂಢವಾದ ರೂಪವನ್ನು ತಾಳಿತ್ತು. ಅವರು ಘಟನೆಗಳ ಕಾರಣಗಳು ಪರಿಣಾಮಗಳು, ಸ್ಥಿತಿಗಳು ಮತ್ತು ಪ್ರವೃತ್ತಿಗಳನ್ನು ಪರಿಶೀಲಿಸಿದ್ದಾರೆ. ಆದರೆ ಅವುಗಳನ್ನು ಯಾವ ಒಂದು ಪ್ರದೇಶ, ರಾಜಸಂತತಿ ಅಥವ ವ್ಯಕ್ತಿಗೆ ಪ್ರಯೋಗಿಸಿಲ್ಲ. ಇತಿಹಾಸವು ತತ್ವಜ್ಞಾನ ಅಥವ ದರ್ಶನ ಎಂಬುದನ್ನು ಭಾರತೀಯರು ತೋರಿಸಿದ್ದಾರೆ. ಇತಿಹಾಸವು ಸಮಾಜದ ಸಂಸ್ಕೃತಿಯ ಅಳತೆ ಮಾಪನ ಮಾಡುವ ವಾಯುಭಾರ ಮಾಪಕ ಯಂತ್ರವಾಗಿದ್ದರೆ ಮತ್ತು ಸಂಸ್ಕೃತಿಯು ಮಾನವನು ಸಮಾಜದ ಒಬ್ಬ ಸದಸ್ಯನಾಗಿ ಗಳಿಸಿದ ಜ್ಞಾನ, ನಂಬಿಕೆ, ಕಲೆ, ನೀತಿಗಳು, ಸಂಪ್ರಾದಾಯಗಳು ಮತ್ತು ಇತರ ಸಾಮರ್ಥ್ಯಗಳು ಮತ್ತು ಅಭ್ಯಾಸಗಳ ಸಂಕೀರ್ಣವಾಗಿದ್ದರೆ, ಪ್ರಾಚೀನ ಭಾರತೀಯರು ಉತ್ತಮವಾದ ಸಂಸ್ಕೃತಿಗೆ ಸಾಕಷ್ಟು ಹಕ್ಕುಗಳನ್ನು ಸ್ಥಾಪಿಸಿದ್ದಾರೆ. ಆದ್ದರಿಂದ ಅವರು ಐತಿಹಾಸಿಕ

ಪ್ರಜ್ಞೆಯಿಂದ ರಹಿತರಾಗಿರಲಿಲ್ಲ. ಆದರೆ ಅವರು ತಮ್ಮ ಭಾವನೆಗಳನ್ನು ಸರಿಯಾದ ರೂಪದಲ್ಲಿ ಅಣಿಮಾಡಲಿಲ್ಲ. ಪ್ರಾಚೀನ ಭಾರತವು ಇತಿಹಾಸಕಾರರಿಗೆ ಜನ್ಮವೀಯಲಿಲ್ಲ; ಆದರೆ ಇತಿಹಾಸ ತತ್ವಜ್ಞಾನಿಗಳು ಅಥವ ಇತಿಹಾಸ ದಾರ್ಶನಿಕರಿಗೆ ಜನ್ಮವಿತ್ತಿತು ಎಂಬ ಹೇಳಿಕೆಯನ್ನು ಸಮರ್ಥಿಸಬಹುದಾಗಿದೆ.

ಭಾರತೀಯ ಇತಿಹಾಸ ರಚನೆಯನ್ನು ಮೂರು ಹಂತಗಳಲ್ಲಿ ಗುರುತಿಸಬಹುದು. ಅವು ಹೀಗಿವೆ.

### ಅ. ಪ್ರಾಚೀನ ಯುಗ

ಪ್ರಾಚೀನ ಭಾರತದಲ್ಲಿ ವ್ಯಾಪಕವಾದ ವಿವಿಧ ಇತಿಹಾಸ ಗ್ರಂಥಗಳು ರಚಿಸಲ್ಪಟ್ಟವು. ವೇದಗಳಲ್ಲಿ ಕೂಡ ಇತಿಹಾಸ ಅಂಶಗಳು ಅಡಕವಾಗಿವೆ. ಸೈನಿಕ ದಾಳಿಗಳು ಮತ್ತು ಯುದ್ಧದ ದೃಶ್ಯಗಳ ವಿವರಣೆಯನ್ನು ಋಗ್ವೇದದಲ್ಲಿ ಪಡೆಯಬಹುದಾಗಿದೆ. ವಾಸ್ತವವಾಗಿ ಇತಿಹಾಸಗಳು ಮಹಾಕಾವ್ಯಗಳಾಗಿವೆ. ಸಂಸ್ಕೃತ ಸಾಹಿತ್ಯದಲ್ಲಿ ರಾಮಾಯಣ ಮತ್ತು ಮಹಾಭಾರತ ಮಹಾಕಾವ್ಯಗಳು ಇತಿಹಾಸಗಳಾಗಿವೆ. ಈ ಮಹಾಕಾವ್ಯಗಳಲ್ಲಿ ಆ ಕಾಲದ ಸಂಪ್ರದಾಯಗಳು, ಆಚಾರ ಪದ್ಧತಿಗಳು, ಯುದ್ಧ ವಿಧಾನಗಳು ಮತ್ತು ಸರ್ಕಾರ ಪದ್ಧತಿ, ವ್ಯಾಪಾರ, ವಾಣಿಜ್ಯ, ಕೃಷಿ, ತತ್ವಜ್ಞಾನ, ಧಾರ್ಮಿಕ ಪದ್ಧತಿಗಳು, ವಿದ್ಯಾಭ್ಯಾಸ ಮತ್ತು ರಾಜವಂಶಾವಳಿ ಮೊದಲಾದ ಅವಶ್ಯಕ ವಿಚಾರಗಳು ನಮಗೆ ದೊರೆಯುತ್ತದೆ.

ಜನಪ್ರಿಯ ಪಂಥವಾದ ಬ್ರಾಹ್ಮಣ ಧರ್ಮದ ತಳಹದಿಯಾದ ಧಾರ್ಮಿಕ ಗ್ರಂಥಗಳ ವರ್ಗಕ್ಕೆ ಪುರಾಣ ಎಂಬ ಹೆಸರನ್ನು ಕೊಡಲಾಗಿದೆ. ಪುರಾಣ ಎಂದರೆ 'ಹಳೆಯ ಕಥೆ' ಎಂದು ಅರ್ಥ. 'ಪ್ರಾಚೀನ' ಅಥಾವ 'ಪುರಾತನ' ಎಂಬ ಅರ್ಥದಲ್ಲಿ 'ಪುರಾಣ' ಎಂಬ ಪದವನ್ನು ಬಳಸಿರುವುದು ಉಂಟು. ಆದರೆ 'ಪುರಾತನ' ಎಂಬ ಪದವನ್ನು ನಿಜವಾಗಿಯೂ ಪ್ರಾಚೀನರಲ್ಲದ ಜನರನ್ನು ಸೂಚಿಸಲು ಉಪಯೋಗಿಸಿರುವುದು ಕಂಡು ಬರುತ್ತದೆ. ಉದಾ: ಕಲಿಯುಗದ ರಾಜ ಸಂತತಿಗಳನ್ನು ಪುರಾತನ ಸಂತತಿಗಳೆಂದು ಸಂಬೋಧಿಸಲಾಗಿದೆ. ತಮ್ಮ ವೈಶಿಷ್ಟ್ಯದ ಬಗ್ಗೆ ಪುರಾಣಗಳು ವೇದಗಳಿಗೆ ಸರಿಸಮಾನವೆಂದು ಹೇಳಿಕೊಂಡಿವೆ. ಸಂಸ್ಕೃತ ನಿಘಂಟಿನ ಅತಿ ಪ್ರಾಚೀನ ಕತೃವಾದ ಅಮರ ಸಿಂಹನು ಪುರಾಣಕ್ಕೆ ಪಂಚಲಕ್ಷಣ ಎಂಬ ಪದವನ್ನು ಪರ್ಯಾಯ ಪದವಾಗಿ ಕೊಟ್ಟಿದ್ದಾನೆ. ಪುರಾಣಗಳ ರಚನೆಯಲ್ಲಿ ಆಖ್ಯಾನಗಳು, ಉಪಾಖ್ಯಾನಗಳು, ಗಥಗಳು ಮತ್ತು ಕಲ್ಪಜೋಕ್ತಿಗಳು ಮುಂತಾದವುಗಳನ್ನು ಉಪಯೋಗಿಸಿಕೊಳ್ಳಲಾಗಿದೆ. ಒಂದು ನಿದಿಷ್ಟವಾದ ಅರ್ಥದಲ್ಲಿ ಕಲ್ಪ ಎಂದರೆ ವ್ಯಾಪಕವಾದ ವಿಶ್ವಸಂಬಂಧದ ಯುಗ ಎಂದು ಅರ್ಥ. ಈ ಅರ್ಥದಲ್ಲಿ ಈ ಪದವು ಅಪರೂಪವಾಗಿ

ಉಪಯೋಗಿಸಲ್ಪಟ್ಟಿದೆ. 'ಒಂದು ಕಾಲವಧಿ' ಒಂದು ಯುಗ ಎಂಬ ಅರ್ಥದಲ್ಲಿ ಈ ಪದವನ್ನು ಹೆಚ್ಚಾಗಿ ಬಳಸಲಾಗಿದೆ. ಈಗಿನ ಪುರಾಣಗಳ ಅನುಕ್ರಮಣಿಕೆಗಳನ್ನು ಹಿಂಧೂ ಧರ್ಮ, ತತ್ವಜ್ಞಾನ ಮತ್ತು ವಿಜ್ಞಾನಗಳ ಪ್ರಾಚೀನ ತತ್ವಗಳೊಂದಿಗೆ ಹೋಲಿಸಿದಾಗ ವೇದಗಳ ಕಾಲದ ಗ್ರಂಥಗಳಲ್ಲಿ ಚಿತ್ರಿಸಿರುವ ಧಾರ್ಮಿಕ ಜೀವನದ ವಿಕಾರವಾದ ಚಿತ್ರ ವಿಕಾಶ ಹೊಂದಿರುವುದು ಆಸಕ್ತರಾಗಿದ್ದ ಪುರೋಹಿತ ವರ್ಗದವರು ಇದನ್ನು ಚಿತ್ರಿಸಿದರು.

ಪುರಾಣಗಳು ಮಹಿಳೆಯರು, ಶೂದ್ರರು ಮತ್ತು ಇತರ ವರ್ಣಗಳ ಬಹುಸಂಖ್ಯಾತ ಪುರುಷರಿಗೆ ಧರ್ಮದ ಪ್ರಾಮಾಣಿಕವಾದ ಆಧಾರವಾಗಿತ್ತೆಂಬುದು ನಿಸ್ಸಂಶಯವಾಗಿದೆ, ಮಾತ್ರವಲ್ಲ ಜನರ ವಿಭಿನ್ನ ಅಗತ್ಯಗಳನ್ನು ಪೂರೈಸಲು ರಚಿಸಲ್ಪಟ್ಟ ಈ ಪುರಾಣಗಳು ಕ್ರಮೇಣವಾಗಿ ಸಾರ್ವಜ್ಞಾನಕೋಶದ ಲಕ್ಷಣವನ್ನು ಪಡೆಯಿತು. ಜನಪ್ರಿಯ ಜ್ಞಾನದ ಮೂಲವಾಯಿತು. ಸೃಷ್ಟಿಶಾಸ್ತ್ರ, ಧರ್ಮ, ವಿಧಿ ಮತ್ತು ಪುರಾಣೋಕ್ತ ವಿಷಯಗಳು ಪುರಾಣಗಳು ಉಪದೇಶಿಸುವ ಮುಖ್ಯ ವಿಷಯಗಳಾಗಿರುವುದರಿಂದ ಅವು ಹಿಂದೂವಿಗೆ ಇತಿಹಾಸದ ಮಹತ್ವವನ್ನು ವಹಿಸುತ್ತವೆ. ಕೆಲವು ಪುರಾಣಗಳು ಸ್ಥಳಗಳನ್ನು ವರ್ಣಿಸುವುದರಿಂದ ಭೂಗೋಳಶಾಸ್ತ್ರದ ಸ್ವಭಾವವನ್ನು ತಳೆಯುತ್ತವೆ. ಅಗ್ನಿಪುರಾಣವು ಧನುರ್ವಿದ್ಯೆ, ವೈದ್ಯಕೀಯ, ಅಲಂಕಾರ ಶಾಸ್ತ್ರ, ಛಂದಸ್ಸು ಮತ್ತು ವ್ಯಾಕರಣವನ್ನು ಭೋಧಿಸುತ್ತದೆ. ಒಟ್ಟು ೧೮ ಮುಖ್ಯ ಪುರಾಣಗಳು ಹಾಗೂ ೧೮ ಉಪ ಪುರಾಣಗಳಿವೆ.

ಪುರಾಣಗಳಲ್ಲಿ ಉಪಯುಕ್ತವಾದ ಐತಿಹಾಸಿಕ ಅಂಶಗಳಿವೆ. ಪುರಾಣಗಳು ವಂಶಾವಳಿಯ ಪಟ್ಟಿಯನ್ನು ಬಳಸಿಕೊಂಡಿವೆ. ಆದರೆ ಅವುಗಳನ್ನು ಅತ್ಯಂತ ಎಚ್ಚರಿಕೆಯಿಂದ ಉಪಯೋಗಿಸಿಕೊಳ್ಳಬೇಕು. ಪ್ರಪಂಚದ ಸೃಷ್ಟಿಯಿಂದ ಆರಂಭವಾಗಿ ಮಹಾಭಾರತದ ಯುದ್ಧದವರೆಗೆ ರಾಜಸಂತತಿಗಳ ಪಟ್ಟಿಗಳು ಅವುಗಳಲ್ಲಿ ದೊರೆಯುತ್ತವೆ. ಅನಂತರ ಗುಪ್ತ ಯುಗದ ಆರಂಭದವರೆಗೆ ರಾಜಸಂತತಿಗಳ ಪಟ್ಟಿಗಳು ಪೌರಾಣಿಕ ಕಾಲಗಣನೆಯ ಯೋಜನೆಯೊಂದಿಗೆ ಭವಿಷತ್ತು ಹೇಳುವ ರೂಪವನ್ನು ತಾಳುತ್ತವೆ. ಆದರೆ ಪುರಾಣಗಳಲ್ಲಿ ಕಂಡುಬರುವ ಕಾಲಗಣನೆಯನ್ನು ಇತರ ಹೆಚ್ಚು ಪ್ರಮಾಣಿಕ ಆಧಾರಗಳೊಂದಿಗೆ ಹೋಲಿಸಿ ಸರಿಪಡಿಸಿಕೊಂಡು ಉಪಯೋಗಿಸಬೇಕು. ಅವುಗಳನ್ನು ಬೌದ್ಧ ಹಾಗೂ ಜೈನ ಸಾಹಿತ್ಯಗಳೊಂದಿಗೆ ಅಧ್ಯಯನ ಮಾಡಿದಾಗ ಅವು ಉಪಯುಕ್ತ ಆಧಾರಗಳಾಗುತ್ತವೆ. ಅನಂತರದ ಪುರಾಣಗಳ ವಂಶಾವಳಿಗಳನ್ನು ಶಾಸನಗಳು ಮತ್ತು ಇತರೆ ವಿಶ್ವಾಸಾರ್ಹವಾದ ಸಾಹಿತ್ಯ ಆಧಾರಗಳೊಂದಿಗೆ ತುಲನೆ ಮಾಡಿ, ಅದರ ಮೌಲ್ಯವನ್ನು ನಿರ್ಧರಿಸುವುದು ಅವಶ್ಯಕ.

ತಾವು ಸ್ಥಾಪಿಸಿದ ಧರ್ಮವನ್ನು ಸಂರಕ್ಷಿಸಲು ಮತ್ತು ವಿಸ್ತರಿಸಲು ಬೌದ್ಧರು ಮತ್ತು ಜೈನರು ಪವಿತ್ರ ಜೀವನ ಚರಿತ್ರೆಗಳು ಮತ್ತು ತಾವು ಸ್ಥಾಪಿಸಿದ ಸಂಘಕ್ಕೆ ಸಂಬಂಧಿಸಿದಂತೆ

ಒಂದು ರೀತಿಯ ಮತದ ಇತಿಹಾಸವನ್ನು ರಚಿಸಿದರು. ಬೌದ್ಧ ಸಾಹಿತ್ಯದಲ್ಲಿ ತ್ರಿಪಿಟಕಗಳು ಪ್ರಮುಖ ಸ್ಥಾನವನ್ನು ಪಡೆದಿವೆ. ಪಾಳಿ ಭಾಷೆಯಲ್ಲಿ ರಚಿತವಾಗಿರುವ ಈ ತ್ರಿಪಿಟಕಗಳಲ್ಲಿ ವಿನಯಸುತ ಮತ್ತು ಅಭಿದಮ್ಮ ಎಂಬ ಮೂರು ಪೀಟಕಗಳಿವೆ. ವಿನಯ ಪೀಟಕದಲ್ಲಿ ನಿವೇದನ ನಿಯಮಗಳು ಮತ್ತು ಕೆಲವು ಜೀವನ ಚರಿತ್ರೆಯ ನಿಯಮಗಳಿವೆ. ಅಭಿದಮ್ಮವು ಧರ್ಮವನ್ನು ವ್ಯಾಖ್ಯಾನಿಸುತ್ತದೆ. ಸುತ್ತ ಅಥವಾ ಸೂತ್ರ ಪೀಟಕದಲ್ಲಿ ಬುದ್ಧನ ಜೀವನವು ಹಲವಾರು ಉಪಕಥೆಗಳು ಮತ್ತು ವಿವಿಧ ಸಂದರ್ಭಗಳಲ್ಲಿ ಬುದ್ಧನು ನೀಡಿದ ಉಪದೇಶಗಳನ್ನು ಆನಂದನು ದಾಖಲು ಮಾಡಿದ್ದಾನೆ. ಬುದ್ಧನ ಕಾರ್ಯಚಟುವಟಿಕೆಯನ್ನು ಕುರಿತ ಈ ವರದಿಗಳು ಬೌದ್ಧ ಸಂಘದ ಸ್ಥಾಪನೆಗೆ ಸಂಬಂಧಿಸಿದ ಘಟನೆಗಳ ವಿಶ್ವಾಸನೀಯ ಐತಿಹಾಸಿಕ ವರದಿಗಳಾಗಿವೆ.

ಪಾಳಿ ಗ್ರಂಥಗಳು ಸುವರ್ಣ ಯುಗವೊಂದನ್ನು ಸೂಚಿಸುತ್ತವೆ. ಆ ಯುಗದಲ್ಲಿ ಜನರು ನೀತಿವಂತರಾಗಿದ್ದರು. ಆಗ ರಾಜ್ಯವಾಗಲಿ ರಾಜನಾಗಲಿ ಇರಲಿಲ್ಲ. ಆ ಯುಗದಲ್ಲಿ ವಿವಾಹ, ಆಸ್ತಿ, ಉದ್ಯೋಗ, ಜಾತಿ, ಯುದ್ಧ, ವೃದ್ಧಾಪ್ಯ ಅಥವಾ ರೋಗ ರುಜಿನಗಳಿರಲಿಲ್ಲ. ಕಾಲಕ್ರಮೇಣದಲ್ಲಿ ನೈತಿಕ ಕ್ರಮವು ಮಾಯವಾದುದರಿಂದ ಜನರು ರಾಜನನ್ನು ಚುನಾಯಿಸಿದರು. ನಾಗರಿಕತೆಯ ಸಂಘ–ಸಂಸ್ಥೆಗಳಿಗೆ ಈ ಸ್ಪಷ್ಟೀಕರಣ ನೀಡಲಾಗಿದೆ. ನ್ಯಾಯವನ್ನು ಎತ್ತಿಹಿಡಿಯಲು ಚುನಾಯಿಸಲ್ಪಟ್ಟ ಮೊದಲು ಚಕ್ರವರ್ತಿ ಮಹಾಸಮ್ಮತ. ಧತರಸ್ಥ, ವೇಸ್ಸಮಿತ್ತ, ಅಥ್ಥಕ, ಯಮ ತಗ್ಗಿ ಉಸಿನ್ನರೊ ಮತ್ತು ಸಿವಿ ಮುಂತಾದ ಸದ್ಗುಣವುಳ್ಳ ದೊರೆಗಳ ನಡುವಣ ಯುದ್ಧಗಳು, ವಜ್ಜಿಗಳನ್ನು ಜಯಿಸಿದುದು, ಪಾಟಲಿಪುತ್ರ ನಗರದ ನಿರ್ಮಾಣ, ಇಂಡೊಚೈನ ಮತ್ತು ಇಂಡೊನೇಷಿಯಗಳಿಗೆ ಸಾಹಸಯುತ ಸಮುದ್ರ ಪ್ರಯಾಣಗಳು ಮೊದಲಾದ ರಾಜಕೀಯ ಘಟನೆಗಳ ಉಲ್ಲೇಖಗಳಿವೆ. ಆ ಯುಗಗಳಲ್ಲಿ ಮಗಧ ರಾಜ್ಯವು ಕೇಂದ್ರ ಸ್ಥಾನವನ್ನು ಪಡೆದಿತ್ತು. ಬೌದ್ಧ ಸಂಘವು ಮಗಧ ರಾಜರೊಂದಿಗೆ ನಿಕಟ ಸಂಬಂಧವನ್ನು ಹೊಂದಿದ್ದಿತು.

ಎ.ಕೆ.ವಾರ್ಡರ್ ಅಭಿಪ್ರಾಯಪಟ್ಟಿರುವಂತೆ ಕ್ರಿ.ಪೂ. ೫೦೦ ರಿಂದ ಕ್ರಿ.ಶ. ೧೦೦ ರ ಅವಧಿಯಲ್ಲಿ ಇತಿಹಾಸ ಟೀಕೆಯು ಅತಿಮುಖ್ಯವೆಂದು ಪರಿಗಣಿಸಲಾಗಿತ್ತು. ಕಾರ್ಯಕ್ರಮಗಳು ಹಾಗೂ ತೀರ್ಮಗಳ ದಾಖಲು ವ್ಯಾವಹಾರಿಕವಾಗಿ ಉಪಯುಕ್ತವಾಗಿತ್ತು. ಇತಿಹಾಸದ ಎಚ್ಚರಿಕೆಯ ಅನುಭವಗಳು ನೈತಿಕ ಹಾಗೂ ತೀರ್ಮಗಳ ದಾಖಲು ವ್ಯಾವಹಾರಿಕವಾಗಿ ಉಪಯುಕ್ತವಾಗಿತ್ತು. ಇತಿಹಾಸದ ಎಚ್ಚರಿಕೆಯ ಅನುಭವಗಳು ನೈತಿಕ ಹಾಗೂ ಸಾಮಾಜಿಕ ಮೌಲ್ಯವುಳ್ಳದ್ದಾಗಿತ್ತು. ಈ ಉದ್ದೇಶಗಳಿಗಾಗಿ ಭಾರತದ ವಿಭಿನ್ನ ಭಾಗಗಳ ಬೌದ್ಧರು ಇತಿಹಾಸ ದಾಖಲೆಗಳನ್ನು ಸಂಗ್ರಹಿಸಿ ಸಂರಕ್ಷಿಸಿದರು.

ಪ್ರಾಚೀನ ಭಾರತೀಯರಲ್ಲಿ ಇತಿಹಾಸ ಅರಿವಿನ ಕೊರತೆಯಿರಲಿಲ್ಲವೆಂಬ ಬಗ್ಗೆ ಸೂಚನೆಗಳಿವೆ. ವೇದ ಗ್ರಂಥಗಳು, ಬೌದ್ಧ, ಜೈನ ಹಾಗೂ ಇತರ ಧಾರ್ಮಿಕ ಪಂಥಗಳ ಬರವಣಿಗೆಗಳು ಎಚ್ಚರಿಕೆಯಿಂದ ಸಂರಕ್ಷಿಸಿರುವ ಉಪನ್ಯಾಸಕರ ಪಟ್ಟಿಗಳು ಪ್ರಮಾಣಪಡಿಸುತ್ತವೆ ಎಂದು ಎ.ಕೆ.ಮಜುಂದಾರ್ ಅಭಿಪ್ರಾಯ ಪಡುತ್ತಾರೆ.

ಬಾಣನೊಂದಿಗೆ ಕೇವಲ ಇತಿಹಾಸ ವಿಷಯದಿಂದ ಒಂದು ರೀತಿಯ ಇತಿಹಾಸ ಬರವಣಿಗೆಗೆ ಕಾಲಿಡುತ್ತೇವೆ. ಈ ಬಗೆಯ ಇತಿಹಾಸದ ಜೀವನ ಚರಿತ್ರೆಗಳಲ್ಲಿ ಹರ್ಷಚರಿತ, ವಿಕ್ರಮಾಂಕ ದೇವ ಚರಿತ, ಕುಮಾರಪಾಲ ಚರಿತ, ಸೋಮಪಾಲ ವಿಲಾಸ ಮೊದಲಾದವುಗಳನ್ನು ಹೆಸರಿಸಬಹುದಾಗಿದೆ. ಸಾಂಪ್ರದಾಯಿಕ ಶೈಲಿಯಲ್ಲಿ ರಚಿತವಾದ ಈ ಕೃತಿಗಳು ಶ್ರೇಷ್ಠ ಸ್ತುತಿಗಳಾಗಿವೆ. ಅನಂತರ ಕಾಣಿಸಿಕೊಂಡ ಪ್ರಸಿದ್ಧ ವ್ಯಕ್ತಿ ಎಂದರೆ ಕಲ್ಹಣ. ಆತನನ್ನು ಹಿಂದೂ ಇತಿಹಾಸ ರಚನಕಾರರಲ್ಲಿ ಕಡೆಯವನು ಅಥವಾ ಆಧುನಿಕ ಇತಿಹಾಸಕಾರರಲ್ಲಿ ಮೊದಲನೆಯವನೆಂದು ಪರಿಗಣಿಸಲಾಗಿದೆ. ಆತನು ಚೀನಾ ಮತ್ತು ಇಸ್ಲಾಂ ಧರ್ಮದ ಇತಿಹಾಸ ಲೇಖನಾ ಸಂಪ್ರದಾಯಗಳಿಂದ ನಿಸ್ಸಂದೇಹವಾಗಿ ಪ್ರಭಾವಿತನಾಗಿದ್ದನು ಎಂಬುದಾಗಿ ಡಾ.ಎಸ್.ಸುಬ್ರಮಣ್ಯಂ ಅಭಿಪ್ರಾಯಪಟ್ಟಿದ್ದಾರೆ.

ಪ್ರತಿಯೊಂದು ಪ್ರಮುಖ ಹಿಂದೂ ಆಸ್ಥಾನವು ಪತ್ರಾಗಾರಗಳು ಮತ್ತು ಅದರ ರಾಜರ ವಂಶಾವಳಿಗಳನ್ನು ನಿಸ್ಸಂಶಯವಾಗಿ ಸಂರಕ್ಷಿಸಿದ್ದರೂ ಮುಸಲ್ಮಾನ ಯುಗದ ಪೂರ್ವದಲ್ಲಿ ಇತಿಹಾಸ ರಚನೆಯ ಸಂಪ್ರದಾಯ ಕಾಶ್ಮೀರದಲ್ಲಿ ಮಾತ್ರ ಇದ್ದಿತೆಂದು ತಿಳಿದುಬಂದಿದೆ. ಪ್ರಾಚೀನ ಭಾರತೀಯರಲ್ಲಿ ಇತಿಹಾಸ ಪ್ರಜ್ಞೆ ಇದ್ದಿತೆಂಬುದು ಕಲ್ಹಣನು ತನ್ನ ಪ್ರಸಿದ್ಧ ಇತಿಹಾಸ ಗ್ರಂಥ 'ರಾಜತರಂಗಿಣಿ' ಯಲ್ಲಿ ಹೇಳಿರುವ ಪರಿಚಯದ ನುಡಿಗಳಿಂದ ವ್ಯಕ್ತವಾಗುತ್ತದೆ. "ಸ್ಕಂದ ಯುಗದ ಚಿತ್ರಗಳನ್ನು ಒಬ್ಬರ ಕಣ್ಣು ಮುಂದೆ ಸಜೀವವಾಗಿ ಮೂಡಿಸುವುದು" ಇತಿಹಾಸಕಾರನ ಉದ್ದೇಶವೆಂದು ಹೇಳಿದ್ದಾನೆ. ಈ ಸಂಬಂಧದಲ್ಲಿ ಇತಿಹಾಸವು ಹೆಚ್ಚು ಧೃಡವಾಗುತ್ತದೆ. ಪ್ರಾಮಾಣಿಕವಾದ ಇತಿಹಾಸವು ಅನೇಕ ಪ್ರಸಿದ್ಧ ಪುರುಷರು ಮತ್ತು ಇತಿಹಾಸಕಾರರನ್ನು ಅಮರವಾಗಿಸುತ್ತದೆ.

ಇತಿಹಾಸಕ್ಕೆ ಸನಿಹದಲ್ಲಿರುವ ಮತ್ತೊಂದು ಸಾಹಿತ್ಯವರ್ಗವೆಂದರೆ ಪ್ರಬಂಧಗಳು ಅಥವ ಇತಿಹಾಸ ವೃತ್ತಾಂತ ಸಂಗ್ರಹಗಳು. ಮೇರುತುಂಗನ 'ಪ್ರಬಂಧ ಚಿಂತಾಮಣಿ' ಇದರ ಒಂದು ಉದಾಹರಣೆಯಾಗಿದೆ.

ದಕ್ಷಿಣ ಭಾರತದ ಬಗ್ಗೆ ಹೇಳುವುದಾದರೆ ತಮಿಳು ಮತ್ತು ಕನ್ನಡ ಭಾಷೆಯಲ್ಲಿ ಇತಿಹಾಸ ವಿಷಯಗಳಿಗೆ ಸಂಬಂಧಿಸಿದ ಸಾಹಿತ್ಯ ರಚನೆಯನ್ನು ಕಾಣಬಹುದು. ತಮಿಳು

ವಿದ್ವಾಂಸರಿಂದ ರಚಿತವಾದ ಸಂಗಮ ಗ್ರಂಥಗಳಲ್ಲಿ ಪ್ರಾಚೀನ ದಕ್ಷಿಣ ಭಾರತದಲ್ಲಿನ ರಾಜಕೀಯ, ಸಾಮಾಜಿಕ, ಆರ್ಥಿಕ ಮತ್ತು ಧಾರ್ಮಿಕ ಬೆಳವಣಿಗೆಗೆ ಸಂಬಂಧಿಸಿದಂತೆ ಇತಿಹಾಸ ವಿಷಯಗಳು ಅಡಕವಾಗಿವೆ. ತಮಿಳು ಭಾಷೆಯ ಪ್ರಸಿದ್ಧ ಮಹಾಕಾವ್ಯಗಳಾದ 'ಮಣಿಮೇಖಲೈ' ಮತ್ತು 'ಶಿಲಪ್ಪಾದಿಕಾರಂ' ಉಪಯುಕ್ತವಾದ ಐತಿಹಾಸಿಕ ವಿವರಗಳನ್ನೊಳಗೊಂಡಿವೆ. ಕನ್ನಡ ಭಾಷೆಯಲ್ಲಿ ರಾಜಕೀಯ ಜೀವನ ಚರಿತ್ರೆಗಳಾದ ಪಂಪನ 'ವಿಕ್ರಮಾರ್ಜುನವಿಜಯ' ಅಥವ 'ಪಂಪ ಭಾರತ' ಹಾಗೂ ರನ್ನನ 'ಗದಾಯುದ್ಧ' ಅಥವ 'ಸಾಹಸಭೀಮ ವಿಜಯ' ಇವುಗಳು ಆ ಕಾಲದ ರಾಜಕೀಯ ಹಾಗೂ ಸಾಂಸ್ಕೃತಿಕ ಇತಿಹಾಸದ ಮೇಲೆ ಬೆಳಕು ಚೆಲ್ಲುತ್ತವೆ.

**ಮಧ್ಯಯುಗ**

ಮಧ್ಯಯುಗದ ಭಾರತೀಯ ಇತಿಹಾಸ ರಚನಾಕಲೆ ಎಂದರೆ ಮುಸಲ್ಮಾನ ಇತಿಹಾಸ ರಚನಾ ಕಲೆ ಎಂದು ಕರೆಯಬಹುದೆಂಬುದಾಗಿ ಡಾ.ಸುಬ್ರಹ್ಮಣ್ಯಂ ಅಭಿಪ್ರಾಯ ಪಡುತ್ತಾರೆ. ಮಧ್ಯಯುಗದ ಇತಿಹಾಸಕ್ಕೆ ಅವರು ಸಾರಭೂತವಾದ ಇತಿಹಾಸವನ್ನು ಒದಗಿಸಿದರಲ್ಲದೆ, ಮುಂಬರುವ ಇತಿಹಾಸ ರಚನಾ ಸಂಪ್ರದಾಯಗಳ ನಡೆಯನ್ನು ಸರಿಪಡಿಸಿದರು. ಬರವಸೆವಿಡತಕ್ಕ ವರದಿಗಾರರು ಹೇಳಿದುದು ಮತ್ತು ಪ್ರಮಾಣದ ಮೇಲೆ ಆಧಾರಿತವಾದುದ್ದನ್ನು ಅವರು ಇತಿಹಾಸವೆಂದು ಪರಿಗಣಿಸಿದರು. ಮೂಲ ಸಂಶೋಧನೆಯನ್ನು ನಡೆಸುವುದು ಇತಿಹಾಸಕಾರನ ಕರ್ತವ್ಯವಾಗಿರಲಿಲ್ಲ. ಆದರೆ ವಿಷಯ ವಸ್ತುವನ್ನು ಆತನು ಅಲಂಕರಿಸಿ, ಸಂಗತಿಗಳ ಕಥೆಯನ್ನು ತಿಳಿಯಬಹುದಾಗಿತ್ತು. ಮುಸಲ್ಮಾನ ಸಂಪ್ರದಾಯದಲ್ಲಿ ಇತಿಹಾಸವು ಸ್ವತಂತ್ರವಾದ ಶಿಸ್ತಾಗಿರದೆ ಅವರ ಬೌದ್ಧಿಕ ಜೀವನದ ಅಧೀನದಲ್ಲಿತ್ತು. ಇಸ್ಲಾಂ ಧರ್ಮದ ಐತಿಹಾಸಿಕ ಕಲ್ಪನೆಯು ಸಾರಭೂತವಾಗಿ ಆಸ್ತಿಕವಾಗಿತ್ತು. ಏಕೆಂದರೆ ಅದು ಸಂಗತಿಗಳ ಪರಿಭಾವನೆಯಾಗಿರದೆ ಅವರ ಪವಿತ್ರ ಗ್ರಂಥ ಖುರಾನಿನಿಂದ ಪಡೆದುದಾಗಿತ್ತು. ಇತಿಹಾಸದಲ್ಲಿ ಸಂಭವಿಸಿದುದಕ್ಕೆ ದೈವವು ಹೊಣೆಯೆಂದು ಪ್ರತಿಪಾದಿಸಲಾಗಿದೆ. ದೈವವು ವ್ಯಕ್ತಿಗಳ ಮೂಲಕ ಕಾರ್ಯನಿರ್ವಹಿಸುತ್ತದೆಯೇ ವಿನಃ ವರ್ಗಗಳು, ಸಾಮಾಜಿಕ ಶಕ್ತಿಗಳು ಅಥವ ಯುಗದ ಧೃತಿಯ ಮೂಲಕವಲ್ಲ. ಅಸ್ತಿತ್ವ ಹಾಗೂ ವಿನಾಶಕ್ಕೆ ದೈವವೇ ಹೊಣೆಯಾಗಿತ್ತು. ಆದ್ದರಿಂದ ಮುಸಲ್ಮಾನ ಇತಿಹಾಸ ಕಟ್ಟುವಿಕೆಯು ದೈವಾಧೀನವಾದದತ್ತ ವಾಲುತ್ತದೆ. ಇತಿಹಾಸವು ಉದ್ದೇಶಪೂರಿತವೂ ಹಾಗೂ ನಿರ್ದೇಶಿತವಾಗಿದ್ದಿತೇ ಹೊರತು, ಅಂತರ ಸಂಬಂಧಿತ ಮತ್ತು ಪುನರಾಗಮನಶೀಲವಾಗಿರಲಿಲ್ಲ. ಭಾರತದ ಮುಸಲ್ಮಾನ ಇತಿಹಾಸಕಾರರು ಆಂತರಿಕ ಪ್ರಗತಿಯಲ್ಲಿ ಹೆಚ್ಚು ಆಸಕ್ತರಾಗಿದ್ದರು. ಆದರೆ ಅವರ ಚಿಂತನೆಯು ಮುಸಲ್ಮಾನ ದೊರೆಗಳ ವ್ಯವಹಾರಗಳನ್ನು ಕುರಿತದ್ದಾಗಿತ್ತು. ಅರ್ಥ ಹೇಳುವುದಕ್ಕಿಂತ ಕಥಿಸುವ ವಿಧಾನವನ್ನು ಅವರು ಅನುಸರಿಸಿದರು.

### ಅಲ್ಬೆರೂನಿ

ಘಜ್ನಿ ಮಹಮ್ಮದನ್ನೊಂದಿಗೆ ಭಾರತಕ್ಕೆ ಭೇಟಿಕೊಟ್ಟ ಅಲ್ಬೆರೂನಿಯು ಭಾರತವನ್ನು ಕುರಿತು ಸುಮಾರು ೨೦೦ ಗ್ರಂಥಗಳನ್ನು ರಚಿಸಿದ್ದಾನೆ. ಅವುಗಳಲ್ಲಿ 'ತಹರಿಕ್-ಇ-ಹಿಂದ್' ಹೆಚ್ಚು ಪ್ರಸಿದ್ಧವಾದದು. ಪ್ರಾಚೀನ ಕಾಲದಿಂದ ಮಧ್ಯಯುಗಕ್ಕೆ ಸಂಕ್ರಮಣವನ್ನು ಉದ್ದೇಶಿಸಿದ ಅಲ್ಬೆರೂನಿಯು ಅಧ್ಯಯನದ ವ್ಯಾಪ್ತಿಗೆ ಮಾನವ ವಿಜ್ಞಾನಗಳ ಪೂರ್ಣಭಾಗವೂ ಒಳಪಟ್ಟಿತ್ತು ಎಂದು ಅಭಿಪ್ರಾಯಿಸುತ್ತಾನೆ. ತತ್ವಜ್ಞಾನ, ಗಣಿತಶಾಸ್ತ್ರ, ಕಾಲಗಣಶಾಸ್ತ್ರ, ವೈದ್ಯಕೀಯ ಹೀಗೆ ಯಾವುದೂ ಆತನ ಗಮನದಿಂದ ತಪ್ಪಿಸಿಕೊಳ್ಳಲಿಲ್ಲ. ಭಾರತವನ್ನು ಕುರಿತಾದ ಆತನ ಪ್ರಸಿದ್ಧ ಗ್ರಂಥವು ಧರ್ಮ, ತತ್ವಜ್ಞಾನ, ಸಾಹಿತ್ಯ, ಕಾಲಗಣನೆಗೆ ಖಗೋಳಶಾಸ್ತ್ರ ಸಂಪ್ರದಾಯಗಳು, ಕಟ್ಟಳೆ(ನಿಯಮ) ಮತ್ತು ಫಲ ಜ್ಯೋತಿಷ್ಯ ಮೊದಲಾದ ವಿಷಯಗಳ ಮೇಲೆ ಬಹುಶೇಷ್ಠ ವಿವರಣೆಗಳನ್ನೊಳಗೊಂಡಿದೆ. ರಾಮನಿಗೆ ಸಂಬಂಧಿಸಿದ ದಂತ ಕಥೆಗಳು ಜನರ ಮನಸ್ಸನ್ನು ಹೇಗೆ ಹಿಡಿದುಕೊಂಡಿದ್ದವು ಮತ್ತು ಅಲ್ಬೆರೂನಿಯು ಅದನ್ನು ಗಮನಹರಿಸದಿರಲಿಲ್ಲವೆಂಬುದು ಆತನ ಆಸಕ್ತಿ ಕೆರಳಿಸುವ ಕಟ್ಟು ಕಥೆಯಾದ 'ಕಿಖಿಂದ' ಪ್ರಮಾಣಪಡಿಸುತ್ತದೆ. ಎಂಭತ್ತು ಅಧ್ಯಯನಗಳನ್ನೊಳಗೊಂಡ ಈ ಗ್ರಂಥದಲ್ಲಿ ಅಲ್ಬೆರೂನಿಯು ಹಿಂದೂ ಚಿಂತನ ಮನಸ್ಥಿತಿಗಳ ವಸ್ತುತ್ವವನ್ನು ಪರೀಕ್ಷಿಸಲು ಪ್ರಯತ್ನಿಸಿದ್ದಾನೆ. ಭಾರತದಲ್ಲಿ ಇತಿಹಾಸ ಸಾಹಿತ್ಯದ ಕೊರತೆಗೆ ಕಾರಣವನ್ನು ಗುರುತಿಸಿದ್ದಾನೆ. ಅವರ ಪ್ರಕಾರ "ಯಾವ ಜನತೆ ತಾವು ಪರಿಪೂರ್ಣರೆಂದು ಭಾವಿಸುತ್ತಾರೋ ಅಂತಹವರು ಇತಿಹಾಸ ಭಾವನೆಯನ್ನು ಹೊಂದಿರಲಾರರು"ಎಂಬುದಾಗಿ ಅಭಿಪ್ರಾಯಪಡುತ್ತಾರೆ. ಒಟ್ಟಿನಲ್ಲಿ ಅಲ್ಬೆರೂನಿಯು ನಿಷ್ಪಕ್ಷಪಾತ ಇತಿಹಾಸಗಾರರಲ್ಲಿ ಪ್ರಮುಖ ಸ್ಥಾನವನ್ನು ಗಳಿಸಿದ್ದಾನೆ.

ದೆಹಲಿಯಲ್ಲಿ ಸುಲ್ತಾನರ ಆಳ್ವಿಕೆಯ ಸ್ಥಾಪನೆಯೊಂದಿಗೆ ಕಾಲಕ್ರಮಾಗತ ದಾಖಲೆಗಳು ಮತ್ತು ಅಧಿಕೃತ ದಾಖಲೆಗಳನ್ನೊಳಗೊಂಡ ಪ್ರಶಸ್ತವಾದ ಸಾಹಿತ್ಯವು ಬೆಳೆಯಲು ಆರಂಭವಾಯಿತು. ಈ ಯುಗದ ಇತಿಹಾಸ ಕಟ್ಟುವಿಕೆಯ ಬೆಳವಣಿಗೆಯು ಮಧ್ಯಯುಗದ ಯುರೋಪಿನೊಂದಿಗೆ ನಿಕಟವಾದ ಹೋಲಿಕೆಯನ್ನು ತೋರಿಸಿರುತ್ತದೆ. ಮಧ್ಯಯುರೋಪಿನ ಕಾಲಾನುಗತ ದಾಖಲೆಗಳನ್ನು ಹೋಲುವ ದಾಖಲೆಗಳನ್ನು ಭಾರತದ ಸಮಸ್ತ ಮುಸಲ್ಮಾನ ಆಡಳಿತ ಸಂತತಿಗಳು ಹೊಂದಿದ್ದವು. ಇವುಗಳನ್ನು ಮೊಗಲ್ ಕಾಲದ ಪೂರ್ವ ಮತ್ತು ಮೊಗಲ್ ಯುಗಕ್ಕೆ ಸೇರಿದವುಗಳೆಂದು ಎರಡು ಭಾಗಗಳಾಗಿ ವಿಂಗಡಿಸಬಹುದು. ಮೊಗಲ್ ಪೂರ್ವಯುಗದ ಇತಿಹಾಸಕಾರರಲ್ಲಿ ಅಮೀರ್ ಖುಸ್ರು, ಜಿಯಾವುದ್ದೀನ್ ಬರಾನಿ, ಇಬನ್ ಬತೂತ ಪ್ರಮುಖರಾಗಿದ್ದಾರೆ.

### ಅಮೀರ್ ಖುಸ್ರು (೧೨೫೩-೧೩೨೫)

ಅಮೀರ್ ಖುಸ್ರುವಿನ ಗ್ರಂಥಗಳಲ್ಲಿ ವಿಷಯವಸ್ತು ಮತ್ತು ಕಾಲಗಣನೆಯ ಐಕ್ಯತೆಯಕೊರತೆ ಕಂಡು ಬಂದರೂ ಶೈಲಿಯ ದೃಷ್ಟಿಯಿಂದ ಪರ್ಷಿಯನ್ ಕಾಲಾನುಗತ ದಾಖಲೆಗಳಲ್ಲಿ

ಪ್ರಮುಖ ಸ್ಥಾನವನ್ನು ಪಡೆದಿದೆ. ಆತನ ಆರು ಇತಿಹಾಸ ಗ್ರಂಥಗಳಲ್ಲಿ 'ಖಜ್ಹಾಇನ್-ವುಲ್-ಫತುಹಃ' ಎಂಬ ಗದ್ಯ ಕೃತಿಯು ಅಲ್ಲಾವುದ್ದೀನ್ ಖಿಲ್ಜಿಯ ದಂಡೆಯಾತ್ರೆಗಳ ಅಧಿಕೃತ ಇತಿಹಾಸವಾಗಿದೆ. ಮಧ್ಯಯುಗದ ಆದಿ ಭಾಗದಲ್ಲಿ ಪ್ರಚಲಿತದಲ್ಲಿದ್ದ ಯುದ್ಧ ಕಲೆಯನ್ನು ಅರಿಯಲು ಇದು ಸಹಾಯಕವಾಗುತ್ತದೆ. ಆತನ ಇತರ ಇತಿಹಾಸ ಕೃತಿಗಳಲ್ಲಿ 'ಖರನ್-ವುಸ್-ಸದಾಯಿನ್' ಮತ್ತು 'ತುಗ್ಲುಕ್ ನಾಮ' ಪ್ರಮುಖವಾದವು.

## ಜಿಯಾವುದ್ದೀನ್ ಬರಾನಿ (೧೨೮೬-೧೩೫೭)

ದೆಹಲಿಯ ಆಡಳಿತ ಮಂಡಲಗಳಲ್ಲಿ ನಿಕಟ ಸಂಬಂಧವನ್ನು ಪಡೆದಿದ್ದ ಆತನು ಇತಿಹಾಸವನ್ನು ರಚಿಸಲು ಸಮರ್ಥನಾಗಿದ್ದನು. ಬರಾನಿ ರಚಿಸಿದ ಸುಮಾರು ಹತ್ತು ಕೃತಿಗಳಲ್ಲಿ 'ತಾರಿಖ್-ಇ-ಫಿರೋಜ್ ಷಾಹಿ' ಹೆಚ್ಚು ಹೆಸರುವಾಸಿಯಾಗಿದೆ. ಸುಲ್ತಾನ್ ಬಲ್ಬನ್‌ನ ಆಳ್ವಿಕೆಯಿಂದ ಫಿರೋಜ್ ಷಾನ ಆಳ್ವಿಕೆಯ ೬ ವರ್ಷಗಳ ಇತಿಹಾಸವನ್ನು ಈ ಕೃತಿಯು ವಿವರಿಸುತ್ತದೆ. ಬಲ್ಬನ್ ಮತ್ತು ಅಲ್ಲಾವುದ್ದೀನ್ ಖಿಲ್ಜಿಗೆ ಹೆಚ್ಚು ಸ್ಥಳವನ್ನು ವಿನಿಯೋಗಿಸಿದ್ದಾನೆ. ಆತನ 'ಫರೆನ-ಇ-ಜಹಂದರಿ'ಯಲ್ಲಿ ವಿಶ್ವದ ಸೃಷ್ಟಿ, ಪ್ರವಾದಿಗಳ ಬೋಧನೆಗಳು, ಆಡಳಿತದ ಮತ್ತು ಸರ್ಕಾರದ ಧ್ಯೇಯಗಳನ್ನು ವಿವರಿಸಿದ್ದಾನೆ.

ಇತಿಹಾಸಕಾರನ ವಿಮಾರ್ಶಾತ್ಮಕ ಕಾರ್ಯಪ್ರವೃತ್ತಿಯ ಬಗ್ಗೆ ಹೀಗೆ ಹೇಳಿದ್ದಾನೆ. "ವಿಷಯಗಳನ್ನು ಪರೀಕ್ಷಿಸಿ ನೋಡುವಲ್ಲಿ ಮತ್ತು ಕೃತ್ರಿಮ ರಚನೆ ಹಾಗೂ ಸತ್ಯ ವಸ್ತುಗಳ ನಡುವೆ ಭೇದವರಿಸಲು ನಾನು ಎಚ್ಚರಿಕೆವಹಿಸಿದ್ದೇನೆ". ಘಟನೆಗಳನ್ನು ಅವಲೋಕಿಸುವುದು ಮತ್ತು ಅವುಗಳನ್ನು ನಿಜವಾದ ರೀತಿಯಲ್ಲಿ ರಚಿಸುವುದು ಇತಿಹಾಸಕಾರನ ಅತಿ ಅವಶ್ಯವಾದ ಕರ್ತವ್ಯವೆಂದು ಹೇಳಿದ್ದಾನೆ. ಇತಿಹಾಸಕಾರನು ಮತ ಭ್ರಾಂತಿಯಿಂದ ಹೊರತಾಗಿರುವುದರ ಅಗತ್ಯವನ್ನು ತಿಳಿದಿದ್ದನು. ವಿಷಯಗಳ ಇತಿಹಾಸ ವಿಚಾರಣೆಯಲ್ಲಿ ಸತ್ಯದ ಮಹತ್ವವನ್ನು ಅರಿತಿದ್ದನು. 'ತಾರಿಖ್-ಇ-ಫಿರೋಜ್ ಷಾಹಿ' ಯ ಸಂಗ್ರಹಕನಾದ ನಾನು ಈ ಇತಿಹಾಸದಲ್ಲಿ ಬರೆಯುವುದೆಲ್ಲವೂ ಸತ್ಯವಾಗಿರುತ್ತದೆಂಬ ವಚನವನ್ನು ನನ್ನ ಪ್ರಸ್ತಾವನೆಯಲ್ಲಿ ಮಾಡಿದ್ದೇನೆ. ನಾನು ಯಾವ ವ್ಯಕ್ತಿಗಳ ಇತಿಹಾಸವನ್ನು ವಿವರಿಸುತ್ತೇನೆ, ಅವರ ಒಳ್ಳೆಯ ಹಾಗೂ ಕೆಟ್ಟ ನಡತೆಗಳನ್ನು ತಿಳಿಸುತ್ತೇನೆ. ಜನರ ಒಳ್ಳೆಯ ನಡತೆಗಳನ್ನು ಪ್ರಕಟಿಸಿ ಕೆಟ್ಟವುಗಳನ್ನು ಮರೆಮಾಚುವುದಿಲ್ಲ. ಹೀಗೆ ಮಾಡಿದಲ್ಲಿ ಓದುಗರ ಕಣ್ಣಿನಲ್ಲಿ ನನ್ನ ಬರಹಗಳು ಕೀಳಾಗುತ್ತವೆ. ಮಾತ್ರವಲ್ಲ ದೇವರ ನ್ಯಾಯಸ್ಥಾನದ ಮುಂದೆ ತಪ್ಪಿತಸ್ತನಾಗಿ ನಿಲ್ಲಬೇಕಾಗುತ್ತದೆ ಎಂದು ಹೇಳಿದ್ದಾನೆ. ವಿಶ್ವಸನೀಯವಾದ ಇತಿಹಾಸ ರಚನೆಯು ಆತನ ಗುರಿಯಾಗಿತ್ತೆಂಬುದನ್ನು ಈ ಹೇಳಿಕೆಯು ಸಮರ್ಥಿಸುತ್ತದೆ.

## ಇಬನ್ ಬತೂತ (೧೩೦೪-೧೧೩೭೮)

ಮಹಮ್ಮದ್ ಬಿನ್ ತುಘಲಕ್‌ನ ಆಳ್ವಿಕೆಯಲ್ಲಿ ಭಾರತಕ್ಕೆ ಬೇಟಿ ಇತ್ತ ಈತನು, ತನ್ನ ಪ್ರವಾಸದ ಅನುಭವಗಳು ಮತ್ತು ಸಾಹಸಗಳನ್ನು 'ರೇಹ್ಲ' ಎಂಬ ಗ್ರಂಥದಲ್ಲಿ ಚಿತ್ರಿಸಿದ್ದಾನೆ. ಕುತ್ಬುದ್ದೀನ್ ಐಬಕ್‌ನಿಂದ ಮಹಮ್ಮದ್ ಬಿನ್ ತುಘಲಕ್‌ನವರೆಗೆ ದೆಹಲಿಸುಲ್ತಾನರ ಆಳ್ವಿಕೆಯ ಕಾಲದಲ್ಲಿನ ಭಾರತದ ಭೌಗೋಳಿಕ ಸ್ಥಿತಿ, ಸಾಮಾಜಿಕ ಜೀವನ, ಆರ್ಥಿಕ ಪರಿಸ್ಥಿತಿಗಳು, ರಾಜಕೀಯ ಸಂಘ ಸಂಸ್ಥೆಗಳು, ಆಡಳಿತ ವ್ಯವಸ್ಥೆ ಮೊದಲಾದವುಗಳನ್ನು ಕುರಿತು ಪ್ರಾಮಾಣಿಕವಾದ ಮತ್ತು ವಿಶ್ವಾಸನೀಯವಾದ ವಿವರಣೆಯನ್ನು ತನ್ನ ಸ್ವಂತ ಅನುಭವಗಳ ಹಾಗೂ ಭಾರತದಲ್ಲಿ ತನ್ನ ಪರಿಚಿತರುಗಳ ಆಧಾರದ ಮೇಲೆ ನೀಡಿದ್ದಾನೆ. ಮಹಮ್ಮದ್ ಬಿನ್ ತುಘಲಕ್‌ನನ್ನು ಕುರಿತ ಆತನ ಬರವಣಿಗೆಯು ಬರಾನಿಯ ಚಿತ್ರಣವನ್ನು ದೃಢಪಡಿಸುತ್ತದೆಯಲ್ಲದೆ, ವಿಶ್ವಾಸನೀಯವೂ ಮತ್ತು ಯುರೋಪಿನ ಪ್ರವಾಸಿಗರಾದ ಮಾರ್ಕೊಪೊಲೊ, ಬರ್ನಿಯರ್, ಟವರ್ನಿಯರ್ ಮುಂತಾದವರು ಕೊಟ್ಟಿರುವ ವಿವರಣೆಗಳಿಗೆ ತಕ್ಕುದಾಗಿದೆ. ದೇಶಿಯ ಮೂಲಾಧಾರಗಳಿಗೆ ಅಮೂಲ್ಯವಾದ ಪುರವಣೆಯಾಗಿರುವ 'ರೇಹ್ಲ' ವು ೧೪ನೇ ಶತಮಾನದ ಇತಿಹಾಸಕ್ಕೆ ಸಮಕಾಲೀನ ಮೂಲಾಧಾರವಾಗಿದೆ.

ಈ ಯುಗದ ಇತರ ಇತಿಹಾಸಗಾರರಲ್ಲಿ 'ತಬಕತ್-ಇ-ನಾಸಿರಿ' ಯ ಕರ್ತೃ ವಿನ್ಹಾಜ್, ಅಸ್-ಸಿರಾಜ್-ಬರಾನಿಯ 'ತಬಕತ್-ಇ-ನಸಿರಿ' ಗ್ರಂಥವನ್ನು ಮುಂದುರಿಸಿದ. 'ಶಾಮ್-ಇ-ಸಿರಾಜ್ ಅಫಿಸ್' ಮತ್ತು 'ಘುತಹ-ಅಸ್-ಸಲತಿ'ನ ಕರ್ತೃ ಇಸಾಮಿ ಇವರುಗಳನ್ನು ಹೆಸರಿಸಬಹುದಾಗಿದೆ. ಫಿರೋಜ್ ಷಾ ತುಘಲಕ್‌ನ ಆಳ್ವಿಕೆಯ ಬಗ್ಗೆ ಆತನೆ ರಚಿಸಿದ ಇತಿಹಾಸದ ಕಿರು ಕೃತಿ ಮತ್ತು ಅನಾಮಧೇಯನೊಬ್ಬನು ರಚಿಸಿದ 'ಸಿರತ್-ಇ-ಫಿರೋಜ್ ಷಾಹಿ' ಎಂಬ ಐತಿಹಾಸಿಕ ಗ್ರಂಥ ಸಹಾಯಕವಾಗುತ್ತದೆ.

## ಮೊಗಲರ ಕಾಲದಲ್ಲಿನ ಇತಿಹಾಸ ಬರವಣಿಗೆ

ಮಧ್ಯಕಾಲ ಮತ್ತು ಆಧುನಿಕ ಕಾಲಗಳ ಭಾರತದ ಇತಿಹಾಸದಲ್ಲಿ ಮೊಗಲರ ಯುಗವು ಅತ್ಯುತ್ತಮವಾದ ಅಧ್ಯಾಯವಾಗಿದೆ. ಇದು ಉತ್ತಮವಾದ ಅಧ್ಯಯನ ನಡೆಸಿದ ಯುಗಗಳಲ್ಲಿ ಒಂದಾಗಿದೆ. ಮೊಗಲ್ ಯುಗದಲ್ಲಿ ಅಮೀರ್ ಖುಸ್ರುವಿನಂತಹ ಕಲಾತ್ಮಕವಾದ ಬರವಣಿಗೆಯು ಕಂಡುಬರುವುದಿಲ್ಲ. ಇಲ್ಲಿ ನಮಗೆ ಕಾಣಸಿಗುವುದು ಜೀವನ ಚರಿತ್ರೆಗಳು ಅಥವ ಆತ್ಮಕಥೆಗಳು, ಮಿಗಿಲಾಗಿ ರಾಜಕೀಯ ವಿಷಯಗಳನ್ನೊಳಗೊಂಡಿರುವ 'ಐನ್-ಇ-ಅಕ್ಬರಿ'. ಭಾರತದ ಸಾರ್ವತ್ರಿಕ ಇತಿಹಾಸಗಳು ವಿಶೇಷ ಆಳ್ವಿಕೆಗಳಿಗೆ ಸಂಬಂಧಿಸಿದ ಕಾಲಕ್ರಮಾಗತ ದಾಖಲೆಗಳು ಸ್ಥಳೀಯ ಹಾಗೂ ಪ್ರಾದೇಶಿಕ ಕಾಲಕ್ರಮಾಗತ ದಾಖಲೆಗಳು ಈ ಕಾಲದಲ್ಲಿ ರಚಿಸಲ್ಪಟ್ಟವು. ಈ ಯುಗದಲ್ಲಿ

ಕಂಡುಬರುವ ಒಂದು ವೈಶಿಷ್ಟ್ಯವೆಂದರೆ ಹಿಂದೂ ಮತ್ತು ಮುಸಲ್ಮಾನ ಬರಹಗಾರರು ಪರ್ಶಿಯನ್ ಭಾಷೆಯಲ್ಲಿ ತಮ್ಮ ಕೃತಿಗಳನ್ನು ರಚಿಸಿದರು.

**ಅಬುಲ್ ಫಜಲ್ (೧೫೫೧-೧೬೦೨)**

ಅಬುಲ್ ಫಜಲ್‌ನ ಪ್ರಖ್ಯಾತ ಗ್ರಂಥ 'ಅಕ್ಬರ್‌ನಾಮ' ವು ಈ ಯುಗದ ಅಧಿಕೃತ ಇತಿಹಾಸ ಕೃತಿಗಳಲ್ಲಿ ಪ್ರಮುಖವಾದುದು. ಮೊಗಲ್ ಇತಿಹಾಸಕಾರರಲ್ಲಿ ಅಬುಲ್ ಫಜಲ್ ಹೆಚ್ಚು ವರದಾನ ಪಡೆದವನಾಗಿದ್ದನು. ಆತನ ಬೌದ್ಧಿಕ ವರದಿಗಳು, ಪರಿಚ್ಛೇದಯುತ ಮನಸ್ಸು ಮತ್ತು ಸಾಮಾಜಿಕ ಆಡಳಿತದಲ್ಲಿ ಆತನು ಪಡೆದಿದ್ದ ಉನ್ನತ ಸ್ಥಾನ. ಇವುಗಳು ಅಕ್ಬರನ ಭಾರತದ ವಿವರಣಾತ್ಮಕ ಇತಿಹಾಸವನ್ನು ರಚಿಸಲು ಸಹಾಯಕವಾಯಿತು.

'ಅಕ್ಬರನಾಮ' ವು ಅಕ್ಬರನ ಆಳ್ವಿಕೆಯ ವ್ಯಾಪಕವಾದ ಇತಿಹಾಸವಾಗಿದೆ. ಮೂರು ಸಂಪುಟಗಳ ಈ ಗ್ರಂಥದಲ್ಲಿ ಅಬುಲ್ ಫಜಲ್ ತೈಮೂರನಿಂದ ಮೊದಲುಗೊಂಡು ಅಕ್ಬರನ ವಂಶಪರಂಪರೆ ಮತ್ತು ಹುಮಾಯೂನ್ ಹಾಗೂ ಅಕ್ಬರನ ಆಳ್ವಿಕೆಗಳನ್ನು ವಿವರವಾಗಿ ಚಿತ್ರಿಸಿದ್ದಾನೆ. ಕಾಲಗಣನೆಯು ಸಾಮಾನ್ಯವಾಗಿ ಸಮಜಂಸವಾಗಿದೆ. ರಾಜಕೀಯ ಪರಿಸ್ಥಿತಿಯ ವಿವರಗಳು ಪರಿಪೂರ್ಣವಾಗಿದೆ. 'ಐನ್-ಇ-ಅಕ್ಬರಿ'ಯು 'ಅಕ್ಬರನಾಮ'ದ ಪುರವಣಿಯಾಗಿದೆ. ಈ ಗ್ರಂಥದಲ್ಲಿ ಅಬುಲ್ ಫಜಲ್ ಕಂದಾಯ ವ್ಯವಸ್ಥೆ, ಸಾಮಾಜಿಕ ಸಂಪ್ರದಾಯಗಳು, ಆಡಳಿತ ನಿಯಮಗಳು ಮತ್ತು ಸಂಖ್ಯೆಯ ಮೂಲ ಸಿದ್ಧಾಂತ ಇವುಗಳನ್ನು ವಿವರಿಸಿದ್ದಾನೆ. ಈ ಗ್ರಂಥದ ಕಲ್ಪನಾ ಶಕ್ತಿ ಮತ್ತು ಐತಿಹಾಸಿಕ ಮಹತ್ವವು ಉನ್ನತವಾಗಿದೆ. ವಿ.ಎ.ಸ್ಮಿತ್ ತಿಳಿಸಿರುವಂತೆ "ಇತ್ತೀಚಿನ ಕಾಲದವರೆಗೆ ಯುರೋಪಿನಲ್ಲಿಯು ಸಹ ಈ ಬಗೆಯ ಪ್ರಾಮಾಣಿಕ ಸಂಕಲನೆಯನ್ನು ಕಾಣುವುದು ಕಷ್ಟವಾಗುತ್ತದೆ. ಪೇಜಿನಲ್ಲಿ ಸಿಕ್ಕಿಸುವಂತಹ ವಿಷಯಗಳ ಸಮೂಹವನ್ನು ನಿಶ್ಚಲ ಪ್ರಯತ್ನ ಮತ್ತು ಕೌಶಲ್ಯದಿಂದ ವಿಮರ್ಶಿಸಿರುವುದಕ್ಕೆ ಅನಂತರದ ಯುಗಗಳ ಕೃತಜ್ಞತೆಗೆ ಪಾತ್ರನಾಗಿದ್ದಾನೆ" ಎಂಬುದಾಗಿ ಅಭಿಪ್ರಾಯಪಡುತ್ತಾರೆ.

ಹೀಗೆ ಅರ್ವಾಚೀನ ಭಾರತದ ಇತಿಹಾಸಕ್ಕೆ ಸಂಬಂಧಿಸಿದಂತೆ ಲಭ್ಯವಿರುವ ಆಧಾರಗಳು ಈ ಯುಗದ ಇತಿಹಾಸವನ್ನು ರಚಿಸಲು ಯುರೋಪಿಯನ್ ಇತಿಹಾಸಕಾರರಿಗೆ ಸಹಾಯಕವಾದವು. ಜೇಮ್ಸ್ ಮಿಲ್ ಹಿಂದೂ ಯುಗಕ್ಕಿಂತ ಹೆಚ್ಚಾಗಿ ಮುಸಲ್ಮಾನ್ ಯುಗದ ಇತಿಹಾಸಕ್ಕೆ ಸ್ವರಭಾರ ಹಾಕಲು ಇದು ಕಾರಣವಾಯಿತು. ೧೯ನೆಯ ಶತಮಾನದ ಅಂತ್ಯದವರೆಗೆ ಅರ್ವಾಚೀನ ಭಾರತದ ಇತಿಹಾಸಗಳು ಅರ್ವಾಚೀನ ಕಾಲಕ್ರಮಾಗತ ದಾಖಲೆಗಳ ಮೇಲೆ ಆಧಾರಿತವಾಗಿದೆ. ಈ ಸೌಲಭ್ಯಗಳಿದ್ದಾಗ್ಯೂ ಈ ಇತಿಹಾಸದ ಬರವಣಿಗೆಗಳಲ್ಲಿ ಒಂದು ಕೊರತೆ ಎದ್ದು ಕಾಣುತ್ತದೆ. ಸಿದ್ಧ ಪಡಿಸಿದ ವಿಷಯಗಳು ಲಭ್ಯವಿದ್ದುದರಿಂದ ಇಂಗ್ಲೀಶ್ ಇತಿಹಾಸಕಾರ ಮೂಲಾಧಾರಗಳ

ಪರಿಶೋಧನೆಯಲ್ಲಿ ತೊಡಗಲಿಲ್ಲ. ಇದರ ಪರಿಣಾಮವಾಗಿ ಇತಿಹಾಸ ಕಟ್ಟುವಿಕೆಯಲ್ಲಿ ಪ್ರಾಚೀನ ಭಾರತಕ್ಕಿಂತ ಹೆಚ್ಚಿನ ಬೆಳವಣಿಗೆಯನ್ನು ಈ ಕಾಲದಲ್ಲಿ ನಾವು ಕಾಣುವುದಿಲ್ಲ.

**ಆಧುನಿಕ ಯುಗ**

ನಮ್ಮ ರಾಷ್ಟ್ರದ ಇತಿಹಾಸ ರಚನೆಯಲ್ಲಿ ಆಧುನಿಕ ಭಾರತೀಯ ಪ್ರಯತ್ನಗಳನ್ನು ಮಾಡಿದವರು ಪಾಶ್ಚಾತ್ಯ ವಿದ್ವಾಂಸರು. ಅವರಲ್ಲಿ ಕೆಲವರು ವೃತ್ತಿನಿರತರಲ್ಲದವರು, ಮತ್ತೆ ಕೆಲವರು ಆಡಳಿತಗಾರರಾಗಿದ್ದರು. ಈ ಬೆಳವಣಿಗೆಗೆ ಅವಶ್ಯವಾದ ಆರಂಭದ ಕಷ್ಟದ ಕೆಲಸವನ್ನು ಮಾಡಿದವರೂ ಅವರೇ. ಬಂಗಾಳದ ೧೮ನೇ ಶತಮಾನದ ಭಾರತೀಯ ಸಂಸ್ಕೃತಿಯಲ್ಲಿ ಪರಿಣಿತಿಪಡೆದವರು. ಪೌರ್ವಾತ್ಯ ನಾಗರಿಕತೆಯಲ್ಲಿ ಪರಿಣತಿ ಪಡೆದ ಸರ್ ವಿಲಿಯಂ ಜೋನ್ಸ್ ಅಂತಹ ವಿದ್ವಾಂಸರು ಕನ್ನಿಂಗ್‌ಹ್ಯಾಂ ಅವರಂತಹ ಪುರಾತತ್ವ ಶೋಧಕರು ಮತ್ತು ಇತರರು ಆಧುನಿಕ ಭಾರತೀಯ ಇತಿಹಾಸ ಲೇಖನ ಕಲೆಯ ಬೆಳವಣಿಗೆಗೆ ಎಡೆಮಾಡಿಕೊಟ್ಟವರು. ಸರ್ ವಿಲಿಯಂ ಜೋನ್ಸ್ ಅವರು ೧೭೮೪ರಲ್ಲಿ ಬಂಗಾಳದ ಏಷಿಯಾಟಿಕ್ ಸೊಸೈಟಿಯನ್ನು ಸ್ಥಾಪಿಸಿದರು. ಏಷಿಯಾಟಿಕ್ ಸೊಸೈಟಿಯ ನಿಯತಕಾಲಿಕವು ಭಾರತೀಯ ಪುರಾತತ್ವವನ್ನು ಕುರಿತಾದ ಹಲವಾರು ಲೇಖನಗಳನ್ನು ಪ್ರಕಟಿಸಿತು. ಬಿಬ್ಲಿಯೋಥಿಕ್ ಇಂಡಿಕ ಸರಣಿಗಳಲ್ಲಿ ಪ್ರಾಚೀನ ಭಾರತೀಯ ಇತಿಹಾಸ ಮತ್ತು ಸಂಸ್ಕೃತಿಗೆ ಸಂಬಂಧಿಸಿದ ಮುಖ್ಯಗ್ರಂಥಗಳು ಬಹುಸಂಖ್ಯೆಯಲ್ಲಿ ಪ್ರಕಟವಾದವು.

ಅಲೆಗ್ಸಾಂಡರ್ ಕನ್ನಿಂಗ್ ಹ್ಯಾಮ್ ಅವರು ತಮ್ಮ ಇತಿಹಾಸ ಪ್ರವಾಸಗಳಿಗೆ ಸಂಬಂಧಿಸಿದ ಟಿಪ್ಪಣಿಗಳ ಜೊತೆಗೆ, 'ಏನ್‌ಶಿಯಂಟ್ ಜಿಯಾಗ್ರಫಿ ಆಫ್ ಇಂಡಿಯಾ' ಹಾಗೂ ಸಾಂಚಿ ಮತ್ತು ಭಾರಹತ್ ಸ್ತೂಪಗಳನ್ನು ಕುರಿತು ಗ್ರಂಥಗಳನ್ನು ರಚಿಸಿದರು. ಅಶೋಕನ ಶಾಸನಗಳನ್ನು ಸಂಪಾದಿಸಿದ, ರು.ಫರ್ಗುಸನ್ ಅವರು 'ಹಿಸ್ಟರಿ ಆಫ್ ಇಂಡಿಯಾ ಅಂಡ್ ಈಸ್ಟ್ರನ್ ಆರ್ಕಿಕ್ಚರ್' ಎಂಬ ಗ್ರಂಥವನ್ನು ರಚಿಸಿದರು. ತಮಿಳ್ ಮತ್ತು ಸಂಸ್ಕೃತ ಶಾಸನಗಳನ್ನು ಬರ್ಜೆಸ್ ಸಂಪಾದಿಸಿದರು.

ರಖಲ್‌ದಾಸ್ ಬ್ಯಾನರ್ಜಿಯವರು ಇತಿಹಾಸ ಪೂರ್ವಯುಗದ ಅವಶೇಷಗಳನ್ನು ಮೊಹೆಂಜೊದಾರೊನಲ್ಲಿಯೂ, ದಯಾರಾಂ ಸಾಹ್ನಿಯವರು ಹರಪ್ಪದಲ್ಲಿಯೂ ಪರಿಶೋಧಿಸಿದರು. ಸರ್.ಜಾನ್.ಮಾರ್ಷಲ್‌ರವರು ತಮ್ಮ ಪ್ರಸಿದ್ಧ ಕೃತಿ 'ಮಹೆಂಜೊದಾರೊ ಅಂಡ್ ದಿ ಇಂಡಿಸ್ ವ್ಯಾಲಿ ಸಿವಿಲಿಸೇಶನ್' ರಚಿಸಿದರು.

ಅರ್ವಾಚೀನ ಭಾರತಕ್ಕೆ ಸಂಬಂಧಿಸಿದಂತೆ ಪರ್ಶಿಯನ್ ಭಾಷೆಯಲ್ಲಿದ್ದ ಐತಿಹಾಸಿಕ ವೃತ್ತಾಂತಗಳನ್ನು ಇಲಿಯರ್ ಮತ್ತು ಡೌಸನ್ ಎಂಟು ಸಂಪುಟಗಳ 'ಹಿಸ್ಟರಿ ಆಫ್ ಇಂಡಿಯಾ

ಅಸ್ ಟೋಲ್ಡ್ ಬೈ ಇಟ್ಸ್ ಇನ್ ಓನ್ ಹಿಸ್ಟರಿಯನ್ಸ್' ಎಂಬ ಕೃತಿಯಲ್ಲಿ ಸಂಗ್ರಹಿಸಿದರು. ೧೯೦೩ ರಲ್ಲಿ ಸ್ಟಾನ್ಲಿ ಲೇನ್‌ಪೂಲ್ ಮೆಡಿವಲ್ 'ಇಂಡಿಯಾ ಅಂಡರ್ ದಿ ಮಹಮದನ್ ರೂಲ್' ಎಂಬ ಗ್ರಂಥವನ್ನು ಪ್ರಕಟಿಸಿದರು. ಇರಸ್ಕೈನ್, ರಸ್ ಬ್ರೂಕ್ ವಿಲಿಯಮ್ಸ್ ಮತ್ತು ಎಮ್.ಎಸ್.ಎಡ್ವರ್ಡ್ಸ್ ಬಾಬರನ ಇತಿಹಾಸವನ್ನು ಕುರಿತು ಗ್ರಂಥಗಳನ್ನು ರಚಿಸಿದರು.

ಯುರೋಪಿಯನ್ ವಿದ್ವಾಂಸರ ಈ ಉದಾಹರಣೆಯನ್ನು ಅನುಸರಿಸುವಲ್ಲಿ ಭಾರತೀಯ ವಿದ್ವಾಂಸರು ಸಾವಕಾಶ ಮಾಡಿದರು. ಓರಂ ಮತ್ತು ಆರ್.ಜಿ.ಭಂಡಾರ್‌ಕರ್ ನಡುವೆ ಸುಮಾರು ಒಂದು ಶತಮಾನದ ಅಂತರವನ್ನು ಕಾಣಬಹುದು. ಗ್ಲಾಡ್‌ನಿನ್ ಮತ್ತು ರಾಬರ್ಟಸನ್ ೧೮ನೇ ಶತಮಾನವನ್ನು ಕುರಿತು ಬರೆದರೂ ಸಹ ಜೇಮ್ಸ್ ಮಿಲ್ ಅವರನ್ನು ಭಾರತದ ಮಹತ್ವದ ಪ್ರಥಮ ಇತಿಹಾಸಗಾರನೆಂದು ಪರಿಗಣಿಸಬಹುದಾಗಿದೆ. ಇವರು ೧೮೧೮ರಲ್ಲಿ ರಚಿಸಿದ ಕೃತಿ 'ಹಿಸ್ಟರಿ ಆಫ್ ಬ್ರಿಟಿಷ್ ಇಂಡಿಯಾ' ಪ್ರಸಿದ್ಧವೂ ಮತ್ತು ಆ ವಿಷಯಕ್ಕೆ ಸಂಬಂಧಿಸಿದಂತೆ ಪ್ರಮಾಣ ಗ್ರಂಥವೂ ಆಗಿದೆ. ಗಿಬ್ಬನ್ ನಂತರ ಆಂಗ್ಲ ಭಾಷೆಯಲ್ಲಿ ಕಾಣಿಸಿಕೊಂಡುದರಲ್ಲಿ ಇದು ಪ್ರಸಿದ್ಧ ಇತಿಹಾಸ ಕೃತಿಯಾಗಿದೆ ಎಂದು ಮೆಕಾಲೆ ವರ್ಣಿಸಿದ್ದಾರೆ.

ಬ್ರಿಟಿಷ್ ಯುಗಕ್ಕೆ ಸಂಬಂಧಿಸಿದಂತೆ ಇತಿಹಾಸ ರಚಿಸುವಲ್ಲಿ ಬೆವಿರಡ್ಜ್ ಆಧುನಿಕ ಕಟ್ಟುವಿಕೆಯ ಕಲೆಯ ನಿಜವಾದ ತತ್ವಗಳನ್ನು ಅನುಸರಿಸಿದನು. ಅವನು ಸಾಮಾಜಿಕ ಭಾವನೆಗಳಿಂದ ವಿಮುಕ್ತನಾಗಿದ್ದನು. ವಿಭಿನ್ನ ಗೌರ್ನರ್ ಜನರಲ್‌ಗಳ ಸಾಧನೆಗಳನ್ನು ಚಿತ್ರಿಸುವುದರಲ್ಲಿ ಅವರು ನ್ಯಾಯಧೀಶನ ನಿಲುವನ್ನು ತಳೆದರು. ಈ ನಿಲವು ಹೇಸ್ಟಿಂಗ್ಸ್‌ನು ನಂದಕುಮಾರನೊಂದಿಗೆ ನಡೆದುಕೊಂಡ ರೀತಿ ಮತ್ತು ಅವಧ್ ನಂತಹ ದೇಶಿಯ ರಾಜ್ಯಗಳನ್ನು ಲಾರ್ಡ ಡಾಲ್‌ಹೌಸಿ ಬ್ರಿಟಿಷ್ ಸಾಮ್ರಾಜ್ಯಕ್ಕೆ ಸೇರಿಸಿಕೊಂಡ ರೀತಿಯನ್ನು ವಿವರಿಸುವುದರಲ್ಲಿ ವ್ಯಕ್ತವಾಗುತ್ತದೆ.

ಎಲ್ಫಿನ್‌ಸ್ಟನ್ ಸಹ ಬೆವಿರೆಡ್ಸ್ ಗುಂಪಿಗೆ ಸೇರಿದವರಾಗಿದ್ದಾರೆ. ಅವರು ಭಾರತದಲ್ಲಿ ವಿವಿಧ ಅಧಿಕಾರಗಳನ್ನು ಅಲಂಕರಿಸಿದ್ದುದರಿಂದ ಅನೇಕ ವಿಷಯಗಳನ್ನು ಸಹಿಸುವುದನ್ನು ಕಲಿತಿದ್ದರು. ಹೀಗಾಗಿ ಅವರ ಕೃತಿಯು ಪ್ರಮಾಣಿಕ ಗ್ರಂಥವಾಯಿತು. ಅವರು ಯಾವ ವಿಧವಾದ ಮನೋವಿಕಾರಗಳಿಗೆ ಎಡೆಕೊಡದೆ ಸ್ವಾಭಾವಿಕವಾಗಿ ಬರೆದರು. ಇದು ೧೯ನೆಯ ಶತಮಾನದ ಪೂರ್ವಾರ್ಧದ ಭಾರತದ ಸಮಸ್ತ ಬ್ರಿಟಿಷ್ ಇತಿಹಾಸಕಾರರ ಗುಣಲಕ್ಷಣವಾಗಿದೆ.

ಪಾಂಡಿತ್ಯದ ಮಟ್ಟದಲ್ಲಿ ವಿ.ವಿ.ಸ್ಮಿತ್ ಅವರ ಬರಹವು ಇತಿಹಾಸ ಕಟ್ಟುವಿಕೆಯಲ್ಲಿ ಹೊಸ ಯುಗವನ್ನು ಪ್ರಾರಂಭಿಸಿತು. ಅದು ಅಳವಾದ ಪಾಂಡಿತ್ಯ ಹಾಗೂ ಬ್ರಿಟಿಷರ ಪರವಾದ ಮನೋವೃತ್ತಿಗಳಿಂದ ಕೂಡಿತ್ತು. ಈ ಮನೋವೃತ್ತಿ ಬ್ರಿಟಿಷರ ಕಾಲದ ಇತಿಹಾಸ ರಚನೆಯಲ್ಲಿ ವ್ಯಕ್ತವಾಗುತ್ತದೆ. ಆದರೆ ಬ್ರಿಟಿಷ್ ಇತಿಹಾಸಗಾರರ ಪಕ್ಷಪಾತದ ನಿಲುವು ಈ ಯುಗದ ಪ್ರಾಮಾಣಿಕವಾದ ಇತಿಹಾಸ ರಚನೆಗೆ ಸಹಾಯವಾಗಲಿಲ್ಲ.

ಶಾಸನಗಳು, ನಾಣ್ಯಗಳು ಮತ್ತು ಸ್ಮಾರಕಗಳ ಅಧ್ಯಾಯನದ ಫಲಿತಾಂಶ ಹಾಗೂ ಆಧುನಿಕ ಇತಿಹಾಸ ಲೇಖನ ಶೈಲಿಯ ತತ್ವಗಳನ್ನು ಒಳಗೊಂಡ ವಿಮಾರ್ಶಾತ್ಮಕ ಗ್ರಂಥಗಳು ಈ ಕಾಲದಲ್ಲಿ ರಚಿಸಲ್ಪಟ್ಟವು. ಇಂತಹ ಕೃತಿಗಳಲ್ಲಿ ಜೆ.ಎಫ್.ಫ್ಲೀಟ್ ಅವರ 'ಡೈನ್ಯಾಸ್ಟೀಸ್ ಆಫ್ ದಿ ಡೆಕ್ಕನ್‌ರೀಸ್ ಡಿಸ್ಟ್ರಿಕ್ಟ್ಸ್' ಮತ್ತು ಡೂಬ್ರೈಲ್ ಅವರ 'ಏನ್‌ಸಿಯಂಟ್ ಹಿಸ್ಟರಿ ಆಫ್ ದಿ ಡೆಕ್ಕನ್' ಇವುಗಳನ್ನು ಉದಾಹರಿಸಬಹುದು.

ಈ ಯುಗದ ಆರಂಭದಿಂದ ಎರಡು ರೀತಿಯ ಭಾರತೀಯ ಇತಿಹಾಸಗಾರರು ಬೆಳಕಿಗೆ ಬಂದರು. ಆಧುನಿಕ ಇತಿಹಾಸ ಕಟ್ಟುವಿಕೆಯ ವಿಧಾನಗಳನ್ನು ಉಪಯೋಗಿಸಿಕೊಂಡು ಭಾರತದ ಗತಕಾಲದ ಇತಿಹಾಸವನ್ನು ರಕ್ಷಿಸುವ ಪ್ರಯತ್ನದಲ್ಲಿ ಒಂದು ಗುಂಪು ನಿರತವಾಗಿತ್ತು. ಪ್ರಸಿದ್ಧ ಇತಿಹಾಸಕಾರರಿಂದ ಆರ್.ಜಿ.ಭಂಡಾರಕರ್ ಮುಂತಾದವರು ಬೆಳೆಸಿದ ಸಂಶೋಧನಾ ವಿಧಾನಗಳನ್ನು ಈ ಗುಂಪಿನವರು ಅನುಸರಿಸಿದರು. ಸಿವಿಲ್‌ಡಾಡ್ ಮುಂತಾದ ವಿದ್ವಾಂಸರೂ ಸಹ ಭಾರತೀಯ ಇತಿಹಾಸ ರಚನೆಯಲ್ಲಿ ಉಪಯುಕ್ತವಾದ ಸೇವೆಯನ್ನು ಸಲ್ಲಿಸಿದ್ದಾರೆ. ಜೆ.ಎನ್.ಸರ್ಕಾರ್, ಎಸ್.ಕೆ.ಐಯ್ಯಾಂಗಾರ್, ಎಂ.ಜಿ.ರಾನಡೆ, ಸರ್ ದೇಸಾಯಿ, ಮುಂತಾದವರು ಭಾರತದಲ್ಲಿ ದಟ್ಟವಾದ ಇತಿಹಾಸ ಕಟ್ಟುವಿಕೆಯನ್ನು ಸ್ಥಾಪಿಸಿದರು. ಸರ್.ಜೆ.ಎನ್.ಸರ್ಕಾರ್ ಅವರು ಅರ್ವಾಚೀನ ಭಾರತದ ಮೇಲೆ ಗ್ರಂಥಗಳನ್ನು ರಚಿಸಿದ ಅತಿ ಅಸಾಮಾನ್ಯ ಆಧುನಿಕ ಇತಿಹಾಸಗಾರರಾಗಿದ್ದಾರೆ. ಮೊಗಲ್ ಭಾರತದ ಇತಿಹಾಸವು ಅವರ ಸಂಶೋಧನೆಯ ವಿಷಯ ವಸ್ತುವಾಗಿತ್ತು. ತಮ್ಮ ಕೃತಿಗಳಲ್ಲಿ ರ್‍ಯಾಂಕ್ ಮತ್ತು ಮಾಮ್‌ಸೆನ್ ಅವರಂತೆ ವೈಜ್ಞಾನಿಕ ಸಂಶೋಧನೆಯ ತತ್ವಗಳನ್ನು ಅಳವಡಿಸಿಕೊಂಡ ಇವರು ಭಾರತದಲ್ಲಿನ ವೈಜ್ಞಾನಿಕ ಸಂಶೋಧನೆಯ ಬೆಳವಣಿಗೆಗೆ ಅಮೂಲ್ಯ ಕೊಡುಗೆಯನ್ನು ನೀಡಿದ್ದಾರೆ. ಇವರ ಕೃತಿಗಳು ಲೇಟರ್ ಮೊಗಲ್ಸ್, ನಾದಿರ್ ಷಾ ಇನ್ ಇಂಡಿಯಾ, ದಿ ಫಾಲ್ ಆಫ್ ದಿ ಮೊಗಲ್ ಎಂಪೈರ್, ಶಿವಾಜಿ ಅಂಡ್ ಹಿಸ್ ಟೈಮ್ಸ್, ಅನೆಕ್ಡೋಟ್ಸ್ ಆಫ್ ಔರಂಗಬಾದ್, ಸ್ಟಡೀಸ್ ಇನ್ ಮೊಗಲ್ ಇಂಡಿಯಾ, ಸ್ಟಡೀಸ್ ಇನ್ ಔರಂಗಜೇಬ್ಸ್, ರೈನ್ ದಿ ಬೆಂಗಾಲ್ ನವಾಬ್ಸ್, ದಿ ಹಿಸ್ಟರಿ ಆಫ್ ಬೆಂಗಾಲ್, ಎ ನ್ಯೂ ಹಿಸ್ಟರಿ ಆಫ್ ದಿ ಇಂಡಿಯನ್ ಪೀಪಲ್, ಚೈತ್ಯನ್ಯಾಸ್ ಲೈಫ್ ಅಂಡ್ ಟೀಚಿಂಗ್ಸ್, ಎ ಹಿಸ್ಟರಿ ಆಫ್ ದಾಸನಾಮಿ ನಾಗಸನ್ಯಾಸೀಸ್ ಇಂಡಿಯಾ ಥ್ರೂ ದಿ ಏಜಸ್, ಏಕನಾಮಿಕ್ಸ್ ಆಫ್ ಬ್ರಿಟಿಷ್ ಇಂಡಿಯಾ, ಮಿಲಿಟರಿ ಹಿಸ್ಟರಿ ಆಫ್ ಇಂಡಿಯಾ ಮುಂತಾದವುಗಳನ್ನು ಹೆಸರಿಸಬಹುದಾಗಿದೆ.

ಇಷ್ಟೇ ಅಲ್ಲದೆ ದೇಶಭಕ್ತಿ, ಸ್ವದೇಶ ಸಂಸ್ಕೃತಿಯ ಶ್ರೇಷ್ಠ ಭಾವನೆ ಮುಂತಾದವುಗಳಿಗೆ ಪ್ರೇರಿತವಾದ ಮತ್ತೊಂದು ಗುಂಪನ್ನು ಗುರುತಿಸಬಹುದು. ವಿ.ಡಿ.ಸಾವರ್‌ಕರ್ ಅವರು ಈ ಗುಂಪಿನಲ್ಲಿ ಗುರುತಿಸಬಹುದಾದ ಪ್ರಮುಖರು. ಇವರು ಹಿಂದೂ ಸಂಸ್ಕೃತಿಯು ಪಾಶ್ಚಾತ್ಯ

ಸಂಸ್ಕೃತಿಗಿಂತ ಶ್ರೇಷ್ಠವಾದುದೆಂದು ಪ್ರತಿಪಾದಿಸಿದರಲ್ಲದೆ ೧೮೫೭ ರ ಸಿಪಾಯಿದಂಗೆಯನ್ನು ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮವೆಂದು ಕರೆದು ಈ ಹೆಸರಿನಲ್ಲಿಯೇ ಕೃತಿಯನ್ನೂ ರಚಿಸಿದ್ದಾರೆ.

ರಾಷ್ಟ್ರೀಯ ಭಾವನೆ ಮತ್ತು ಸ್ವದೇಶ ಪ್ರೇಮದ ಅನುರಾಗದಿಂದ ಪ್ರೇರಿತರಾದ ಮತ್ತೊಬ್ಬ ಇತಿಹಾಸಕಾರರೆಂದರೆ ಡಾ.ಕೆ.ಸಿ.ಜಯಸ್ವಾಲ್. ನಿರಂಕುಶಾಧಿಪತ್ಯವು ಪ್ರಾಚೀನ ಭಾರತದಲ್ಲಿದ್ದ ಏಕ ಮಾತ್ರ ಸರ್ಕಾರದ ರೂಪ ಎಂಬ ಬ್ರಿಟಿಷ್ ಇತಿಹಾಕಾರರ ಘೋಷಣೆಯಿಂದ ಪ್ರಚೋದಿತರಾದ ಇತಿಹಾಸಕಾರರಲ್ಲಿ ಅವರೂ ಒಬ್ಬರು. ಇವರು ತಮ್ಮ 'ಹಿಂದೂ ಪಾಲಿಟಿ' ಎಂಬ ಕೃತಿಯಲ್ಲಿ ಪಾರ್ಲಿಮೆಂಟರಿ ಮಾದರಿಯ ಸರ್ಕಾರವು ಪ್ರಾಚೀನ ಭಾರತದಲ್ಲಿದ್ದಿತ್ತೆಂದು ವಾದಿಸಿದ್ದಾರೆ.

ಸಾಮಾಜಿಕ ಮತ್ತು ಆರ್ಥಿಕ ವಿಷಯಗಳಿಗೆ ಸಂಬಂಧಿಸಿದ ಐತಿಹಾಸಿಕ ಚರ್ಚೆಗಳು ಸಾಂಪ್ರದಾಯಿಕ ಅಭಿಪ್ರಾಯಗಳಿಂದ ವರ್ಣಿಸಲ್ಪಟ್ಟಿದ್ದವು. ಇದಕ್ಕೆ ಅರ್ವಾಚೀನ ಭಾರತವು ಹೊರತಲ್ಲ. ಹಿಂದೂ ಧರ್ಮದ ವಿಚಾರದಲ್ಲಿ ಮುಸಲ್ಮಾನ ಸುಲ್ತಾನರು ತೋರುತ್ತಿದ್ದ ಅಸಹಿಷ್ಣುತೆ ಮತ್ತು ಸ್ವಮತದಲ್ಲಿ ದುರಭಿಮಾನಗಳನ್ನು ಕುರಿತ ಪೂರ್ಣ ಅಧ್ಯಾಯವನ್ನು ಪುನರ್ರಚಿಸುವ ಒಂದು ಅರುವುಳ್ಳ ಯತ್ನಗಳೂ ನಡೆದವು. ಈ ಹಿನ್ನಲೆಯಲ್ಲಿ ಮುಸಲ್ಮಾನ ಆಡಳಿತಗಾರರು ಹಿಂದೂ ದೇವಾಲಯಗಳನ್ನು ನಾಶಪಡಿಸಿದರು ಮತ್ತು ಧಾರ್ಮಿಕ ವಿಷಯಗಳಲ್ಲಿ ಅವರು ಸಹಿಷ್ಣುಗಳಾಗಿರಲಿಲ್ಲ ಎಂಬ ಆರೋಪವನ್ನು ನಿರಾಕರಿಸಲು ಭಾರತೀಯ ರಾಷ್ಟ್ರೀಯ ಕಾಂಗ್ರೇಸ್ ಆಶ್ರಯದಲ್ಲಿ ಇತಿಹಾಸವು ರಚಿಸಲ್ಪಟ್ಟಿತ್ತು.

ಇತಿಹಾಸವನ್ನು ರಾಜಕೀಯ ಉದ್ದೇಶಗಳಿಗೆ ಉಪಯೋಗಿಸಿಕೊಳ್ಳಬಾರದೆಂದು ಪ್ರತಿಪಾದಿಸಿದ ಇತಿಹಾಸಗಾರರಲ್ಲಿ ಡಾ.ಆರ್.ಸಿ.ಮಜುಂದಾರ್ ಒಬ್ಬರಾಗಿದ್ದಾರೆ. ಇತಿಹಾಸವು ರುಚಿಕರವಾಗಿರಲಿ ಅಥವಾ ಇಲ್ಲದಿರಲಿ ಇತಿಹಾಸಕಾರನು ನಡೆದುದ್ದನ್ನು ನಡೆದಂತೆ ವಿವರಿಸಬೇಕೆಂಬುದು ಅವರ ನಿಲುವಾಗಿತ್ತು. ಕಾರ್ಪೊರೇಟ್ ಲೈಫ್ ಇನ್ ಏನ್‌ಶಿಯಂಟ್ ಇಂಡಿಯಾ ಮತ್ತು ಏನ್‌ಶಿಯಂಟ್ ಇಂಡಿಯಾ ಇವರ ಪ್ರಮುಖ ಕೃತಿಗಳು.

ಇದೇ ಸಾಲಿನಲ್ಲಿ ಹೆಸರಿಸಬಹುದಾದ ಮತ್ತೊಬ್ಬ ಇತಿಹಾಸಕಾರರೆಂದರೆ ಕೆ.ಎಂ.ಫಣಿಕ್ಕರ್. ಪ್ರಾಚೀನ ಭಾರತ ಹಾಗೂ ಆಧುನಿಕ ಭಾರತ ಈ ಎರಡು ಯುಗಗಳ ಇತಿಹಾಸದ ಬಗ್ಗೆ ಆಳವಾದ ಪಾಂಡಿತ್ಯವನ್ನು ಪಡೆದಿದ್ದರು. ಇವರ ಪ್ರಮುಖ ಕೃತಿಗಳೆಂದರೆ 'ಸರ್ವೆ ಆಫ್ ಇಂಡಿಯಾನ್ ಹಿಸ್ಟರಿ', 'ದಿ ಐಡಿಯ ಆಫ್ ಸಾವರಿನ್‌ಟಿ ಅಂಡ್ ಸ್ಟೇಟ್ ಇನ್ ಇಂಡಿಯನ್ ಪೊಲಿಟಿಕಲ್ ಥಾಟ್' ಮತ್ತು 'ಏಷ್ಯ ಅಂಡ್ ದಿ ವೆಸ್ಟ್ರನ್ ಡಾಮಿನೆನ್ಸ್' ಪ್ರಮುಖವಾದವು.

ದಕ್ಷಿಣ ಭಾರತದ ಇತಿಹಾಸದಲ್ಲಿ ವ್ಯಾಪಕವಾದ ಸಂಶೋಧನೆಯನ್ನು ಕೈಗೊಂಡವರಲ್ಲಿ ಡಾ.ಎಸ್. ಕೃಷ್ಣಸ್ವಾಮಿ ಐಯ್ಯಂಗಾರ್ ಮತ್ತು ಪ್ರೊ. ಕೆ.ಎ.ನೀಲಕಂಠಶಾಸ್ತ್ರಿಯವರು ಪ್ರಮುಖರಾಗಿದ್ದಾರೆ. ಡಾ.ಎಸ್. ಕೆ.ಐಯ್ಯಂಗಾರ್ ಅವರ ಕೃತಿಗಳಲ್ಲಿ 'ಸೌತ್ ಇಂಡಿಯಾ ಅಂಡ್ ಹರ್ ಮೊಹಮಡನ್ ಇನ್‌ವೇಡರ್ಸ್' ಮತ್ತು 'ಬಿಗಿನಿಗ್ಸ್ ಆಫ್ ಸೌತ್ ಇಂಡಿಯನ್ ಹಿಸ್ಟರಿ' ಪ್ರಮುಖವಾಗಿವೆ. ಪ್ರೊ. ನೀಲಕಂಠಶಾಸ್ತ್ರೀಯವರು ತಮಿಳ್ ನಾಡು ಮತ್ತು ದಕ್ಷಿಣ ಭಾರತದ ಇತಿಹಾಸ ಹಾಗೂ ಸಾಗರದಾಚೆ ದಕ್ಷಿಣ ಭಾರತದ ಸಾಂಸ್ಕೃತಿಕ ವಸಾಹತುಗಳನ್ನು ಕುರಿತು ಹಲವಾರು ಗ್ರಂಥಗಳನ್ನು ರಚಿಸಿದ್ದಾರೆ. ದಿ ಪಾಂಡ್ಯನ್ ಕಿಂಗ್‌ಡಮ್, ಹಿಸ್ಟರಿ ಆಫ್ ಸೌತ್ ಇಂಡಿಯಾ, ದಿ ಚೋಳಸ್, ಸೌತ್ ಇಂಡಿಯನ್ ಕಾಲೋನೀಸ್ ಇನ್ ದಿ ಫಾರ್ ಈಸ್ಟ್ ಪ್ರಮುಖ ಕೃತಿಗಳೆಂದು ಪರಿಗಣಿಸಬಹುದಾಗಿದೆ.

ಒಟ್ಟಾರೆಯಾಗಿ, ಇತಿಹಾಸ ಕಟ್ಟುವ ಭಾರತೀಯರಿಗೆ ಇರಲಿಲ್ಲ ಎಂಬುದನ್ನು ಒಪ್ಪಲಾಗುವುದಿಲ್ಲ. ಏಕೆಂದರೆ ಭಾರತದ ಮೌಖಿಕ ಪರಂಪರೆಯೊಡನೆ ಗುರುತಿಸಿಕೊಂಡಿರುವ ಐತಿಹ್ಯ, ಪುರಾಣಗಳು ಈ ನಾಡಿನ ಭವ್ಯ ಚರಿತ್ರೆ ನಿರ್ಮಿತಿಗೆ ಆಕರಗಳಾಗಿವೆ. ಇವುಗಳ ಕುರಿತು ಸ್ಥೂಲವಾದ ಅಧ್ಯಯನ ನಡೆದರೆ ಅವುಗಳ ಅಂತರಂಗದ ಚರಿತ್ರೆ ತಿಳಿದುಬರುತ್ತದೆ.

## ಪರಾಮರ್ಶನ ಗ್ರಂಥಗಳು

೧. ಶ್ರೀನಿವಾಸ ಮೂರ್ತಿ ಹೆಚ್.ವಿ., ಇತಿಹಾಸ ಸಂಶೋಧನಾ ಸಮೀಕ್ಷೆ, ಪದ್ಮಾ ಪ್ರಕಾಶನ, ಬೆಂಗಳೂರು ೨೦೦೦.

೨. ಗೋಪಾಲ ಬಾ.ರಾ., ಇತಿಹಾಸ ಶಾಸ್ತ್ರ ಮತ್ತು ಸಿದ್ಧಾಂತ, ಪ್ರಸಾರಾಂಗ, ಮಾನಸ ಗಂಗೋತ್ರಿ, ಮೈಸೂರು ೧೯೯೬.

೩. ಶ್ರೀಧರನ್ ಇ., ಎ ಟೆಕ್ಸ್ಟ್ ಬುಕ್ ಆಫ್ ಹಿಸ್ಟಾರಿಯೋಗ್ರಫಿ( ಕ್ರಿಪೂ. ೫೦೦ ರಿಂದ ಕ್ರಿ.ಶ. ೨೦೦೦ ರವರೆಗೆ), ಓರಿಯಂಟಲಾಂಮನ್, ನ್ಯೂಡೆಲ್ಲಿ ೨೦೦೪.

೪. ಗೋಪಾಲ ಎಸ್ ಮತ್ತು ರೋಮಿಲಾ ಥಾಫರ್(ಸಂ)., ಪ್ರಾಬ್ಲಂಸ್ ಆಫ್ ಹಿಸ್ಟಾರಿಕಲ್ ರೈಟಂಗ್ ಇನ್ ಇಂಡಿಯಾ, ಇಂಡಿಯಾ ಇಂಟರ್ ನ್ಯಾಶನಲ್ ಸೆಂಟರ್, ನ್ಯೂಡೆಲ್ಲಿ ೧೯೬೩.

೫. ಷೇಕ್ ಅಲಿ ಬಿ., ಹಿಸ್ಟರಿ ಇಟ್ಸ ಥಿಯರಿ ಅಂಡ್ ಮೆಥಡ್, ಮ್ಯಾಕ್ ಮಿಲನ್ ಇಂಡಿಯಾ ಲಿಮಿಟೆಡೆ, ನ್ಯೂಡೆಲ್ಲಿ ೨೦೦೪.

೬. ವೆಂಕಟರತ್ನಂ ಎ.ವಿ ಮತ್ತು ಪದ್ಮ ಎಂ.ಬಿ., ಇತಿಹಾಸ ಸಂಶೋಧನಾ ಮಾರ್ಗ, ಬೆಂಗಳೂರು ಪ್ರಿಟಿಂಗ್ ಅಂಡ್ ಪಬ್ಲಿಶಿಂಗ್, ಬೆಂಗಳೂರು ೧೯೯೧.

೭. ಚಂದ್ರ ಬಿಪನ್., ಕಮುನಲಿಸಂ ಇನ್ ಮಾಡ್ರನ್ ಇಂಡಿಯಾ, ವಿಕಾಶ ಪಬ್ಲಿಶಿಂಗ್, ನ್ಯೂಡೆಲ್ಲಿ ೧೯೮೪.

೮. ಷೋ ಕಾಥಲಿನ್., ರೂರಲ್ ಸೊಸೈಟಿ ಇನ್ ಸೌತ್ ಈಸ್ಟ್ ಏಶಿಯಾ, ಕೇಂಬ್ರಿಡ್ಜ ಯುನಿವರ್ಸಿಟಿ ಪ್ರೆಸ್, ಕೇಂಬ್ರಿಡ್ಜ ೧೯೮೧.

೯. ಕೊಸಾಂಬಿ ಡಿ.ಡಿ., ಎನ್ ಇಂಟ್ರಡಕ್ಸಷನ್ ಟು ದ ಸ್ಟಡಿ ಆಫ್ ಇಂಡಿಯನ್ ಹಿಸ್ಟರಿ, ಬಾಂಬೆ ಪಾಪುಲರ್ ಪ್ರಕಾಶನ, ಬಾಂಬೆ ೧೯೫೬.

೧೦. ಸ್ಮಿತ್ ಬಿ.ಜಿ., ದ ಜಂಡರ್ ಆಫ್ ಹಿಸ್ಟರಿ–ಮೆನ್, ವುಮೆನ್ ಅಂಡ್ ಹಿಸ್ಟಾರಿಕಲ್ ಪ್ರಕ್ಟಿಸಸ್ ೧೯೮೧.

೧೧. ಶರ್ಮಾ ಆರ್.ಎಸ್., ಇಂಡಿಯನ್ ಫೂಡಲಿಸಂ, ಮ್ಯಾಕಮಿಲನ್ ಇಂಡಿಯಾ ಲಿಮಿಟೆಡ್, ನ್ಯೂಡೆಲ್ಲಿ ೧೯೫೪.

೧೨. ರೋಮಿಲಾ ಥಾಫರ್., ಎನ್ಸಿಯೆಂಟ್ ಇಂಡಿಯನ್ ಸೋಶಿಯಲ್ ಹಿಸ್ಟರಿ, ನ್ಯೂಡೆಲ್ಲಿ ೧೯೭೮.

೧೩. ಗುಹಾ ರಂಜಿತ್(ಸಂ)., ಸಬಾಲ್ಟ್ರನ್ ಸ್ಟಡೀಸ್, ಸಂಪುಟ.೧, ರೈಟಿಂಗ್ ಆನ್ ಸೌತ್ ಏಶಿಯನ್ ಹಿಸ್ಟರಿ ನ್ಯೂಡೆಲ್ಲಿ, ಆಕ್ಸಫರ್ಡ ಯುನಿವರ್ಸಿಟಿ ಪ್ರೆಸ್, ೧೯೮೧.

೧೪. ಮಜುಂದಾರ್ ಆರ್.ಸಿ., ಬಾಂಬೆ ಹಿಸ್ಟಾರಿಯೋಗ್ರಫಿ ಇಸ್ ಮಾಡ್ರನ್ ಇಂಡಿಯಾ ಬಾಂಬೆ, ಏಶಿಯಾ ಪಬ್ಲಿಷಿಂಗ್, ೧೯೭೦.

## ಅಧ್ಯಾಯ–ಮೂರು 367

# ಪುರಾಣ, ಐತಿಹ್ಯ ಮತ್ತು ಶಾಸನಗಳ ತಾತ್ವಿಕತೆ

ಸಂಶೋಧನಾ ಸಂದರ್ಭದಲ್ಲಿ 'ತಾತ್ವಿಕತೆ' ಎನ್ನುವ ಪರಿಕಲ್ಪನೆಯು ಹೆಚ್ಚು ಬಳಕೆಯಲ್ಲಿದೆ. ತಾತ್ವಿಕತೆ ಎನ್ನುವ ಪರಿಭಾಷೆಯನ್ನು ಕೆಲವರು ಅಧ್ಯಯನ ವಿಧಾನಕ್ಕೆ ಸಂಬಂಧಿಸಿದ್ದೆಂದು, ಮತ್ತೆ ಕೆಲವರು ದೃಷ್ಟಿಕೋನಕ್ಕೆ ಸಂಬಂಧಿಸಿದ್ದು ಎನ್ನುವ ನಿಲುವನ್ನು ಹೊಂದಿದ್ದಾರೆ. ಇನ್ನೂ ಕೆಲವರು ವಿಶ್ಲೇಷಣಾ ಮತ್ತು ತತ್ವಚಿಂತನಾ ನೆಲೆಯಲ್ಲಿ ಅಧ್ಯಯನದ ತಾತ್ವಿಕತೆಯನ್ನು ಕುರಿತು ವಿವೇಚಿಸುವ ಪ್ರಯತ್ನ ಮಾಡಿದ್ದಾರೆ. ಪ್ರಸ್ತುತ ಅಧ್ಯಯನದ ಸಂದರ್ಭದಲ್ಲಿ ದೃಷ್ಟಿಕೋನ ಎನ್ನುವ ನೆಲೆಯಲ್ಲಿ ತಾತ್ವಿಕತೆಯ ಪರಿಭಾಷೆಯನ್ನು ಗ್ರಹಿಸಲಾಗುತ್ತದೆ. ಅಂದ ಮಾತ್ರಕ್ಕೆ ಇಲ್ಲಿ ವಿಧಾನ ಮತ್ತು ದೃಷ್ಟಿಕೋನದ ಆಕರಗಳು ಬೇರೆ ಬೇರೆ ಎಂದಲ್ಲ. ಅವೆರಡರಲ್ಲಿಯೂ ಅಂತರ್‌ಸಂಬಂಧಗಳಿವೆ. ಆದರೆ ಬಳಸುವ ಆಕರಗಳು ಒಂದೇ ಆಗಿದ್ದರೂ ಅಧ್ಯಯನದ ಸಂದರ್ಭದಲ್ಲಿ ಅಧ್ಯಯನಕಾರರ ಉದ್ದೇಶದ ಹಿನ್ನೆಲೆಯಲ್ಲಿ ತೀರ್ಮಾನಗಳು ಬದಲಾಗುತ್ತವೆ. ತೀರ್ಮಾನದ ಹಿಂದಿರುವ ಒತ್ತಾಸೆಗಳೇ ದೃಷ್ಟಿಕೋನ ಎನ್ನಬಹುದು. ಇದಕ್ಕೆ ಶಾಸನಗಳನ್ನು ನೋಡುವ ದೃಷ್ಟಿಕೋನಗಳೆ ನಿದರ್ಶನಗಳಾಗಿವೆ. ಶಾಸನ ಎನ್ನುವುದು ಮೂಲ ಆಕರ. ಅದನ್ನು ಚರಿತ್ರೆಕಾರರು, ಪುರಾತತ್ವಜ್ಞರು, ಸಾಹಿತಿಗಳು ಹೀಗೆ ಬೇರೆ ಬೇರೆ ಕ್ಷೇತ್ರದವರು ಅಧ್ಯಯನಕ್ಕೆ ಬಳಸಿಕೊಂಡಿದ್ದಾರೆ. ಉದಾಹರಣೆಗೆ ಚರಿತ್ರೆಕಾರರು ಶಾಸನದಲ್ಲಿನ ಕಾಲ ಮತ್ತು ರಾಜಕೀಯ ಚರಿತ್ರೆಗೆ ಹೆಚ್ಚು ಗಮನ ಹರಿಸಿದರೆ, ಸಾಹಿತ್ಯ ಸಂಶೋಧಕರು ಅಲ್ಲಿನ ಭಾಷೆ, ವ್ಯಾಕರಣ ಮುಂತಾದವುಗಳ ಕಡೆಗೆ ಹೆಚ್ಚಿನ ಗಮನ ನೀಡಿರುವುದನ್ನು ಕಾಣುತ್ತೇವೆ.

ಈ ಹಿನ್ನೆಲೆಯಲ್ಲಿ ಪುರಾಣ, ಐತಿಹ್ಯ ಮತ್ತು ಶಾಸನಗಳ ಮುಖೇನ ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಳ್ಳಬೇಕಾದ ಸಂದರ್ಭದಲ್ಲಿ ಯಾವ ಬಗೆಯ ಒತ್ತಾಸೆಗಳು ಕೆಲಸ ಮಾಡಿವೆ ಎನ್ನುವುದನ್ನು ಗುರುತಿಸುವ ಪ್ರಯತ್ನ ಇಲ್ಲಿದೆ. ಹಾಗೆಯೇ ಇವುಗಳ ಅಂತರ್ ಸಂಬಂಧಗಳು ಚರಿತ್ರೆಯ ನಿರ್ಮಾಣದ ಕಾಲದಲ್ಲಿ ಹೇಗೆ ಸಮ್ಮಿಳಿತಗೊಂಡಿವೆ ಎನ್ನುವುದರ ಕಡೆಗೆ ಹೆಚ್ಚಿನ ಗಮನ ಹರಿಸಲಾಗಿದೆ. ಮೇಲ್ನೋಟಕ್ಕೆ ಈ ಮೂರು ಪರಿಕಲ್ಪನೆಯಲ್ಲಿ ಪುರಾಣ ಮತ್ತು ಐತಿಹ್ಯಗಳು ಮೌಖಿಕ ಪರಂಪರೆಗೆ ಸಂಬಂಧಿಸಿದರೆ, ಶಾಸನವು ಲಿಖಿತ ಪರಂಪರೆಗೆ ಸಂಬಂಧಿಸಿದ್ದು. ಆದಾಗ್ಯೂ ಈ ಮೂರು ಬಗೆಯ ಆಕರಗಳು ಸಾಂಸ್ಕೃತಿಕ ಚರಿತ್ರೆಯನ್ನು ಅರಿತುಕೊಳ್ಳಲು ಪರಸ್ಪರ ಹೋಲಿಕೆ ಹಾಗೂ ವ್ಯತ್ಯಾಸಗಳೊಂದಿಗೆ ಹೇಗೆ ಒಂದೇ ನೆಲೆಯಲ್ಲಿ ನಿಲ್ಲುತ್ತವೆ ಎನ್ನುವುದನ್ನು ಅಧ್ಯಯನ ಸಂದರ್ಭದಲ್ಲಿ ಕಂಡುಕೊಳ್ಳಲಾಗುವುದು. ಈ ಬಗೆಯ ದೃಷ್ಟಿಕೋನವನ್ನು ಸ್ಪಷ್ಟಪಡಿಸಿಕೊಳ್ಳಬೇಕಾದರೆ ಮೊದಲು ಇವುಗಳನ್ನು ಬಿಡಿಬಿಡಿಯಾಗಿ ವಿವೇಚಿಸಿ ನಂತರದಲ್ಲಿ ಅಂತಿಮ ತೀರ್ಮಾನವನ್ನು ಕೈಗೊಳ್ಳುವ ವಿಧಾನವನ್ನು ಇಲ್ಲಿ ಅನುಸರಿಸಲಾಗಿದೆ.

**ಪುರಾಣ**

ಪ್ರಪಂಚದ ಎಲ್ಲಾ ಸಮಾಜದ ಜನಗಳಲ್ಲಿ ಒಂದಿಲ್ಲೊಂದು ಬಗೆಯ ಪುರಾಣಗಳಿವೆ. ಆದುದರಿಂದ ಪುರಾಣಗಳನ್ನು ಮನುಷ್ಯ ಸಂಸ್ಕೃತಿಯ ಮುಖ್ಯ ಅಂಶ ಎಂದು ಬೇಕಾದರೂ ಕರೆದುಕೊಳ್ಳಬಹುದು. ಆದರೆ ಪುರಾಣಗಳ ಸ್ವರೂಪ, ಸಂಖ್ಯೆ ಮತ್ತು ಅವುಗಳ ವೈವಿಧ್ಯತೆ ಎಷ್ಟಿದೆಯೆಂದರೆ, ಎಲ್ಲ ಪುರಾಣಗಳಿಗೂ ಸರಿಹೊಂದುವಂತೆ ಸಾಮಾನ್ಯ ಲಕ್ಷಣಗಳನ್ನು ಹೇಳುವುದೇ ಕಷ್ಟದ ಕೆಲಸ. ಜಗತ್ತಿನ ಬಹುಪಾಲು ಜನರು ಈಗಲೂ ಪುರಾಣಗಳನ್ನು ನಂಬುತ್ತಾರೆ. ಎಲ್ಲ ದೇಶಗಳ ಪುರಾಣಗಳನ್ನು ಒಂದೆಡೆ ಕಲೆಹಾಕಿ ಅವುಗಳನ್ನು ತೌಲನಿಕವಾಗಿ ಅಭ್ಯಸಿಸುವ ತನಕ ಒಂದು ನಿಶ್ಚಿತ ಅಭಿಪ್ರಾಯಕ್ಕೆ ಬರಲು ಸಾಧ್ಯವಿಲ್ಲ. ಆದರೆ ಒಂದಂತು ಸತ್ಯ. ಯಾವುದೇ ಒಂದು ಜನ ಸಮುದಾಯಕ್ಕೆ ಸೇರಿದ ಪುರಾಣಗಳು ಆಯಾ ಜನ ಸಮುದಾಯವು ತನ್ನ ಬಗ್ಗೆ ತಾನು ಇಟ್ಟುಕೊಂಡಿರುವ ಕಲ್ಪನೆಗಳನ್ನು ವ್ಯಕ್ತಪಡಿಸುತ್ತವೆ. ತಾವು ಯಾರು, ತಾವು ಏಕೆ ಹೀಗಿದ್ದೇವೆ ಎಂಬುದನ್ನು ಆ ಜನ ಕಂಡುಕೊಳ್ಳಲು ಮಾಡಿದ ಪ್ರಯತ್ನಗಳನ್ನು ಪುರಾಣಗಳು ತೋರಿಸುತ್ತವೆ. ಈ ಕಾರಣಕ್ಕಾಗಿಯೇ ಒಂದು ಸಮಾಜವನ್ನು ಅಧ್ಯಯನ ಮಾಡುವುದಕ್ಕೆ ಇಲ್ಲವೆ ಮಾನವ ಸಂಸ್ಕೃತಿಯನ್ನು ತಿಳಿದುಕೊಳ್ಳುವುದಕ್ಕೆ ಪುರಾಣಗಳನ್ನು ಕುರಿತು ಅಧ್ಯಯನ ಮಾಡುವುದು ಮುಖ್ಯವಾಗುತ್ತದೆ.

ಮಾನವನು ಯಾವಾಗ ತನ್ನ ಸುತ್ತಲಿನ ಪರಿಸರದಲ್ಲಿ ಜರುಗುವ ಘಟನಾವಳಿಗಳನ್ನು ಪ್ರಶ್ನಾರ್ಥಕವಾಗಿ ನೋಡತೊಡಗಿದನೋ ಅದೇ ಸಂದರ್ಭದಲ್ಲಿ ಅವನಿಗೆ ಈ ಸೃಷ್ಟಿಯ

ಹಿಂದಿನ ಕಾಣದ ಕೈ ಬಗ್ಗೆ ಯೋಚನೆ ಮೂಡಿದಂತಿದೆ. ಆ ಕಾಣದ ಕೈಯನ್ನೇ ಅವನು ದೇವರ ಸ್ಥಾನಕ್ಕೆ ತಂದು ನಿಲ್ಲಿಸಿ, ತಾನು ಹಾಕಿಕೊಂಡ ಪ್ರಶ್ನೆಗಳಿಗೆ ಅದರ ಮುಖೇನ ಉತ್ತರವನ್ನು ಕಂಡುಕೊಳ್ಳಲು ಪ್ರಯತ್ನಿಸಿದ ಫಲವಾಗಿಯೇ ಅನೇಕ ಧಾರ್ಮಿಕ ವಿಚಾರಗಳು ಹುಟ್ಟಿಕೊಳ್ಳತೊಡಗಿದವು. ಈ ಧಾರ್ಮಿಕ ವಿಚಾರಗಳ ಸರಣಿಯೇ ಮುದೊಂದು ದಿನ ಪುರಾಣದ ಸ್ವರೂಪವನ್ನು ಪಡೆದಿರಬಹುದೆನಿಸುತ್ತದೆ. "ಮಾನವನ ವೈಜ್ಞಾನಿಕವಾದ ಮೊದಮೊದಲಿನ ವಿಚಾರಗಳೇ ಪುರಾಣ ಕಥೆಗಳು ಹುಟ್ಟಿಕೊಳ್ಳಲು ಕಾರಣವಾಗಿವೆ. ಈ ಭೂಮಿ, ಈ ಆಕಾಶ, ಗಿಡ, ಪ್ರಾಣಿ, ಮನುಷ್ಯ- ಹೇಗೆ ಸೃಷ್ಟಿಗೊಂಡವು ಎಂಬುದು ಆದಿಮಾನವನಿಗೆ ಕಾಡಿರಬಹುದಾದ ಮುಖ್ಯ ಸಮಸ್ಯೆ. ಆತ ತನ್ನಷ್ಟಕ್ಕೆ ತಾನು ಲೆಕ್ಕ ಹಾಕಿಕೊಂಡು ಕೂಡಿಸಿ, ಕಳೆದ ಫಲಿತಾಂಶಗಳಿಂದಾಗಿಯೇ ಸೃಷ್ಟಿ ಪುರಾಣದ ಅನಂತ ಕಲ್ಪನೆಗಳು ಹುಟ್ಟಿಕೊಳ್ಳಲು ಕಾರಣವಾಗಿದೆ ಎನ್ನಬೇಕು".೧

ಜನಪದರ ನಂಬಿಕೆಗಳ ಪ್ರಕಾರ ಪುರಾಣಗಳು ನಿನ್ನೆ ಮೊನ್ನೆ ಹುಟ್ಟಿಕೊಂಡವುಗಳಲ್ಲ. ಅವುಗಳು ಹಿಂದೆ ಯಾವ ಕಾಲದಲ್ಲೋ ನಡೆದ ನಿಜ ಘಟನೆಯ ನಿರೂಪಕಗಳಾಗಿವೆ. ಕಾಲಾಂತರದಲ್ಲಿ ಈ ಘಟನೆಗಳು ಬೇರೆ ಬೇರೆ ಸ್ವರೂಪಗಳನ್ನು ಪಡೆದುಕೊಳ್ಳುತ್ತಾ ಬಂದವು. ಯಾವುದೋ ಕಾಲಘಟ್ಟದಲ್ಲಿ ಯಾರೋ ಒಬ್ಬರು ಇವುಗಳಿಗೆ ಧಾರ್ಮಿಕ ವೇಷವನ್ನು ತೊಡಿಸಿದರು. ತತ್ಪರಿಣಾಮವಾಗಿ ಅವುಗಳ ಬಗ್ಗೆ ಜನಸಾಮಾನ್ಯರಲ್ಲಿ ಭಕ್ತಿ ಹುಟ್ಟಿತು. ಕಾಲಚಕ್ರ ಉರುಳಿದಂತೆ ದೈವಾಂಶ ಸಂಭೂತರಾದಂತಹ ಜನರ ಬದುಕಿನ ಸಂವಿಧಾನದಂತೆ ಪುರಾಣಗಳು ಕಾರ್ಯನಿರ್ವಹಿಸತೊಡಗಿದವು.

ಹೆರೆಸ್ಕೋವಿಟ್ಸ್ ಎನ್ನುವ ವಿದ್ವಾಂಸ ತನ್ನ 'Cultural Anthropology' ಕೃತಿಯಲ್ಲಿ 'ನಂಬಿಕೆಗೆ ಬರೆದ ಶಾಸನವನ್ನೇ ಪುರಾಣ' ಎನ್ನುತ್ತಾನೆ. ಒಂದು ಕಾಲಘಟ್ಟದಲ್ಲಿ ಯಾವುದೇ ಒಂದು ಸಮಾಜದಿಂದ ಅಥವಾ ಸಮುದಾಯದಿಂದ ಮನ್ನಣೆ ಪಡೆದ ನಂಬಿಕೆಯೊಂದು ಸಾರ್ವಕಾಲಿಕ ಸತ್ಯ ಎನ್ನುವ ರೂಪ ಪಡೆಯುತ್ತದೆ. ಅಂತಹ ನಂಬಿಕೆಗಳಿಗೆ ಪುರಾಣವು ಶಾಸನಬದ್ಧವಾದ ಧಾರ್ಮಿಕ ಮುದ್ರೆಯನ್ನೊತ್ತುತ್ತದೆ. ಎ.ಎಚ್. ಕ್ರಾಪೆಯವರು "ಪುರಾಣವು ಒಂದು ಕಥೆ, ಕವಿಗಳಿಂದ ಹೊಸ ರೂಪ ಪಡೆದದ್ದು. ಸಿದ್ಧಾಂತಗಳೊಡನೆ ಬೆರೆಯದೆ ಮತದೊಡನೆ ಶಿಥಿಲ ಸಂಬಂಧ ಹೊಂದಿದೆ." ಎಂದು ಹೇಳಿದ್ದಾರೆ. ಪುರಾಣವು ಮತೀಯ ಗುಣವುಳ್ಳದ್ದು. ಅಂದರೆ ಮನುಷ್ಯನ ಮೂಲ ಸತ್ವಕ್ಕೆ ಸಂಬಂಧಿಸಿದುದು. ಮಾನವನ ನಂಬಿಕೆ, ಶ್ರದ್ಧೆ, ನಡತೆ, ಮೌಲ್ಯ, ಆದರ್ಶಗಳನ್ನು ಕುರಿತು ನಿರ್ದೇಶಿಸಿ, ಅವನ ಆತ್ಮವನ್ನು ಎಚ್ಚರಿಸುವ ಗುಣವನ್ನು ಹೊಂದಿದೆ. ಈ ಬಗೆಯ ಮತಾಚರಣೆಗಳು ಮಧ್ಯಂತರ ಜಗತ್ತೊಂದನ್ನು ಪ್ರತಿನಿಧಿಸುತ್ತವೆ. ಈ ಮಧ್ಯಂತರ ಜಗತ್ತು ತಾತ್ಕಲಿಕವಾದುದು. ಅದರ ಮುಂದುಗಡೆ ಅಲೌಕಿಕ

ಜಗತ್ತಿದ್ದರೆ, ಹಿಂದುಗಡೆ ಲೌಕಿಕ ಜಗತ್ತಿರುತ್ತದೆ. ಅಲೌಕಿಕ ಜಗತ್ತಿಗೆ ಸೇರಿದ ಸಂಸ್ಕೃತಿ ವೀರರು ಅಥವಾ ಪುರಾಣವೀರರು ಮತಾಚರಣೆಯ ಸಂದರ್ಭದಲ್ಲಿ ಈ ಮಧ್ಯಂತರ ಜಗತ್ತಿಗೆ ಇಳಿದು ಬರುತ್ತಾರೆ.[5] ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕಂಡು ಬರುವ ಭೂತಾರಾಧನೆಯ ಕುರಿತಾದ ಆಚರಣೆಯನ್ನು ಇಟ್ಟುಕೊಂಡು ಈ ವಿವರವನ್ನು ಕೊಟ್ಟಿದ್ದಾರೆ. ಇಲ್ಲಿ ಮಧ್ಯಂತರ ಜಗತ್ತು ಯಾವುದೆಂದರೆ ಭೂತಾರಾಧನೆಯ ಸಂದರ್ಭದಲ್ಲಿ ಭೂತ ಕಟ್ಟಿದ ವ್ಯಕ್ತಿ ಆ ಜಗತ್ತಿಗೆ ಸಂಬಂಧಿಸಿದವನಾಗುತ್ತಾನೆ. ಭೂತ ಕಟ್ಟಿದ ವ್ಯಕ್ತಿಯ ಮುಂದೆ ನಿಂತು ಜನರು ತಮ್ಮ ಕಷ್ಟಗಳಿಗೆ ಪರಿಹಾರವನ್ನು ಕೇಳಿದಾಗ, ಭೂತ ಕಟ್ಟಿರುವ ವ್ಯಕ್ತಿಯು ಆಕಾಶದೆಡೆ ಮುಖಮಾಡಿ, ಅಲ್ಲಿಂದ ಏನೋ ವರ ಪಡೆದಂತೆ ವರ್ತಿಸುತ್ತಾ, ನಂತರ ಜನರೆಡೆ ತಿರುಗಿ ಯಾವುದೋ ಒಂದು ಪರಿಹಾರವನ್ನು ಅವರಿಗೆ ಸೂಚಿಸುತ್ತಾನೆ. ಆ ಸಂದರ್ಭದಲ್ಲಿ ಆತನೇ ಜನರ ಪಾಲಿಗೆ ವಿಶಿಷ್ಟವ್ಯಕ್ತಿಯಾಗಿ ಕಾಣಿಸಿಕೊಳ್ಳುತ್ತಾನೆ. ಇದನ್ನೆ ಜನರು ಪೌರಾಣಿಕವಾಗಿಸಿಕೊಳ್ಳುತ್ತಾರೆ.

ಮನುಷ್ಯನ ಮಾನಸಿಕ ಬೆಳವಣಿಗೆಯ ಹಂತವನ್ನು ಸೂಚಿಸುವ ಕಥಾನಕಗಳೇ ಪುರಾಣಗಳೆನ್ನಬಹುದು. ಆದುದರಿಂದಲೇ ಆಂಡ್ರ್ಯೂಲ್ಯಾಂಗ್ ಅವರು "ಮಾನವ ವಿಕಾಸದ ಚರಿತ್ರೆಯೇ ಪುರಾಣ" ಎಂದಿರುವುದು. ಇಲಿಯಟ್ ಎನ್ನುವ ವಿದ್ವಾಂಸರೂ ಕೂಡ ಇದನ್ನು ಒಪ್ಪಿ "ಪುರಾಣ ಎನ್ನುವುದು ಚರಿತ್ರೆಯ ಮಾತೃಕೆ" ಎಂದು ವ್ಯಾಖ್ಯಾನಿಸಿದ್ದಾರೆ.

ಪುರಾಣಕ್ಕೆ ಸಂಸ್ಕೃತದಲ್ಲಿ 'ಸ್ಮೃತಿ' ಎನ್ನುತ್ತಾರೆ. 'ಸ್ಮೃತಿ' ಎಂದರೆ ನೆನಪು. ಅಂದರೆ ಗತಿಸಿದ ಘಟನಾವಳಿಗಳನ್ನು ಒಂದು ಬಗೆಯ ಮೌಖಿಕವಾಗಿ ಕಥಾನಕ ರೂಪದಲ್ಲಿ ನೆನಪಿನಲ್ಲಿಡುವುದು ಎನ್ನಬಹುದು. ಈ ಹಿನ್ನೆಲೆಯಲ್ಲಿಯೇ ಪುರಾಣಗಳು ಬೆಳೆದು ಬಂದಿರಬಹುದು. ಪ್ರಾಚೀನ ಸಂದರ್ಭದಲ್ಲಿ ಭಾರತೀಯರು ಧಾರ್ಮಿಕ ವಲಯಕ್ಕೆ ನೀಡಿದ ಮಹತ್ವವೂ ಕೂಡ ಪುರಾಣಗಳು ಹೆಚ್ಚಿನ ಪ್ರಮಾಣದಲ್ಲಿ ಬೆಳೆಯಲಿಕ್ಕೆ ಸಹಾಯಕವಾಗಿದೆ. ಪ್ರತಿಯೊಂದು ಜನಾಂಗವು ತಾನು ಹೊಂದಿರುವ ಕಲ್ಪನೆಗಳನ್ನು ಪುರಾಣದ ರೂಪದಲ್ಲಿ ಹೊರಹಾಕುತ್ತಿರುವುದೆ ಇದಕ್ಕೆ ಕಾರಣವಾಗಿದೆ. ಅಂದರೆ ತಾವು, ತಮ್ಮ ಸಂಸ್ಕೃತಿಯ ಬಗೆಗಿರುವ ಶ್ರೇಷ್ಠತೆಯ ಕುರಿತು ಹೇಳುವಾಗ ಪೌರಾಣಿಕ ಪರಿಕಲ್ಪನೆಯನ್ನು ಸಮೀಕರಿಸಿಕೊಂಡಿದ್ದಾರೆ.

"ಪುರಾಣವು 'ಪುರಾ'ದಿಂದ ಬಂದದ್ದು. 'ಪುರಾ' ಎಂದರೆ ಹಳೆಯದು(ನೋಡಿ–ಪುರಾಣವಾಪಿ–ಹಳೆಯ ಬಾವಿ). ನಮ್ಮ ಪ್ರಾಚೀನರಿಗೆ ಇತಿಹಾಸ, ಪುರಾಣಗಳೆರಡೂ ವಾಸ್ತವಗಳೇ. ಆದರೆ ಅವುಗಳಿಗೆ ಈ ವ್ಯತ್ಯಾಸವನ್ನು ಮಾಡುವಂತೆ ತೋರುತ್ತದೆ. ಇತಿಹಾಸವು ಕಾಲಮಾನದಲ್ಲಿ ನಡೆದದ್ದನ್ನು ಹೇಳಿದರೆ, ಪುರಾಣ ಅದಕ್ಕಿಂತ ಬಹು ಬಹು ಹಿಂದೆ ನಡೆದದ್ದನ್ನು ಹೇಳುತ್ತದೆ.(ಆಧುನಿಕ ಪರಿಭಾಷೆಯಲ್ಲಿ ಹೇಳುವುದಾದರೆ, ಒಂದು History, ಇನ್ನೊಂದು

pre-History ಅಥವಾ proto-History)"[3] ಈಗಾಗಲೇ ನೋಡಿದಂತೆ ಪುರಾತನ ಕಾಲದಲ್ಲಿ ನಡೆದ ಧಾರ್ಮಿಕ ನಂಬಿಕೆಗಳಿಗೆ, ಆಚಾರಗಳಿಗೆ, ಸಂಪ್ರದಾಯಗಳಿಗೆ ಒಂದು ಬಗೆಯ ಮೂರ್ತ ರೂಪವನ್ನು ನೀಡುವುದೇ ಪುರಾಣ. ವಾಸ್ತವದ ಘಟನಾವಳಿಗಳಿಗೆ ದೈವಿ ರೂಪವನ್ನು ತೊಡಿಸಿ, ಆ ಮೂಲಕ ಒಂದು ಕಾಲದ, ಒಂದು ಜನಾಂಗದ, ಒಂದು ಸಾಮಾಜಿಕ ಪರಿಸರದ ರೂಢಿ-ಸಂಪ್ರದಾಯಗಳನ್ನು ಪವಿತ್ರಗೊಳಿಸುತ್ತವೆ. ಹೀಗೆ ಪವಿತ್ರಗೊಂಡ ಒಂದು ಕಾಲದ ನಂಬಿಕೆಗಳೇ ಮೌಲ್ಯಗಳಾಗುತ್ತವೆ. ಹೀಗೆ ನಂಬಿಕೆಗಳನ್ನು ಮೌಲ್ಯಗಳನ್ನಾಗಿ ಮಾರ್ಪಡಿಸುವಲ್ಲಿ ಪುರಾಣದ ಪಾತ್ರ ಮಹತ್ವದ್ದಾಗಿದೆ. ಹೀಗಾಗಿ ಒಂದು ಜನಾಂಗದ ಪವಿತ್ರತೆಗಳಾಗಿಬಿಡುತ್ತವೆ ಪುರಾಣಗಳು. ಈ ಪವಿತ್ರವಾದ ಸ್ಥಾನವೇ ಮುಂದೆ ಅವುಗಳನ್ನು ಎಲ್ಲಾ ಕಾಲದ ಪ್ರಸ್ತುತತೆಗೆ ಕೊಂಡುಯ್ಯುತ್ತದೆ ಎಂದರೆ ತಪ್ಪಾಗಲಾರದು.

ಭಾರತೀಯರ ಪರಿಕಲ್ಪನೆಯಲ್ಲಿ ಪುರಾಣ ಎನ್ನುವುದು ದೇವತೆಗಳಿಗೆ ಹಾಗೂ ಸಾಂಸ್ಕೃತಿಕ ವೀರರಿಗೆ ಸಂಬಂಧಿಸಿದ ಕಥೆ. ಯಾವುದೇ ಒಂದು ಜನಾಂಗಕ್ಕೆ ತನ್ನ ಸ್ವಸಾಮರ್ಥ್ಯದ ಮೂಲಕ ನೀತಿ ನಿಯಮಗಳನ್ನು ರೂಪಿಸಿದ ವ್ಯಕ್ತಿಯು ಸಾಂಸ್ಕೃತಿಕ ವೀರನಾಗುತ್ತಾನೆ. ಸೃಷ್ಠಿಯ ಉಗಮ ಅದರ ಹಿಂದಿನ ಲಯ, ಮಾನವ ಜನಾಂಗದ ಮೂಲ ಇವುಗಳಿಗೆ ಸಂಬಂಧಿಸಿದ ಕಥೆಗಳೇ ಪುರಾಣ ರೂಪಗಳಾಗಿವೆ. ಈ ಕುರಿತಂತೆ ಲೀಚ್ ಹೇಳಿರುವ ಮಾತನ್ನು ಒಪ್ಪಿಕೊಳ್ಳಬಹುದಾಗಿದೆ. "ಹಿಂದೆ ನಡೆದವುಗಳೆಂದೇ ಹೇಳಲಾಗುವ ಅತಿಮಾನುಷ ವ್ಯಕ್ತಿಗಳ, ದೈವ ದೇವರುಗಳ, ಸಾಂಸ್ಕೃತಿಕ ವೀರ ಪುರುಷರ, ಸಾಹಸ-ಮಹಿಮೆ-ಪವಾಡಗಳನ್ನು, ಪುರಾತನ ಸಂಪ್ರದಾಯ ಹಾಗು ಧಾರ್ಮಿಕ ನಂಬಿಕೆಗಳನ್ನು ವಿವರಿಸುವ ಕತೆಗಳನ್ನು ಪುರಾಣ." ಎಂದಿದ್ದಾರೆ. ಕೆಲ ಸಂದರ್ಭದಲ್ಲಿ ಕಾಣಿಸಿಕೊಳ್ಳುವ ಈ ವೀರ ಪುರುಷರು ದೈವಾಂಶ ಸಂಭೂತರು ಅಥವಾ ಅವತಾರ ಪುರುಷರು. ಅವರ ಲೀಲೆಗಳನ್ನು ಅಪಾರವಾದವುಗಳನ್ನಾಗಿ ಪುರಾಣಗಳಲ್ಲಿ ಬಿಂಬಿಸಲಾಗುತ್ತದೆ.

ಎ.ಎಚ್.ಕ್ರಾಪೆಯವರು "ಪುರಾಣವು ಒಂದು ಕಥೆ, ಕವಿಗಳಿಂದ ಹೊಸ ರೂಪ ಪಡೆದದ್ದು. ಸಿದ್ಧಾಂತಗಳೊಡನೆ ಬೆರೆಯದೆ ಮತದೊಡನೆ ಶಿಥಿಲ ಸಂಬಂಧ ಹೊಂದಿದೆ." ಎನ್ನುತ್ತಾರೆ. ಮತಕ್ಕೂ ಮತ್ತು ಪುರಾಣಕ್ಕು ನಿಕಟ ಸಂಬಂಧವಿದೆ. ದೇವರ ಕುರಿತಾದ ಸಿದ್ಧಾಂತ ಮತ್ತು ಆಚಾರಗಳಿಗಿಂತಲೂ ಮಿಗಿಲಾಗಿ ಪುರಾಣಕ್ಕೆ ಹೆಚ್ಚಿನ ಮಹತ್ವವಿದೆ. ಏಕೆಂದರೆ ಯಾವ ತತ್ವ ಅಥವಾ ಆಚಾರವನ್ನು ಒಂದು ಸಮುದಾಯ ಆಚರಿಸಿಕೊಂಡು ಬರುತ್ತದೆಯೋ ಅದಕ್ಕೊಂದು ಖಚಿತತೆಯನ್ನು ಕೊಡುವುದು ಪುರಾಣ. ಅದಕ್ಕಾಗಿಯೇ ಧಾರ್ಮಿಕ ಕ್ಷೇತ್ರದಲ್ಲಿ ಪುರಾಣಕ್ಕೆ ವ್ಯಾಪಕತೆಯಿದೆ.

"ಪುರಾಣಗಳು ಭಾರತೀಯರ ಬದುಕಿನಲ್ಲಿ ಮತ್ತೆ ಮತ್ತೆ ಕಾಣಿಸಿಕೊಂಡಿವೆ. ತತ್ವಜ್ಞಾನ ನೀತಿ ನಿಯಮಗಳನ್ನು ಸಾಮಾನ್ಯ ಜನರಲ್ಲಿ ಬಿಂಬಿಸಲು ಅವು ತಮ್ಮದೇ ಆದ ಮಾರ್ಗವನ್ನು ಅನುಸರಿಸುತ್ತವೆ. ಕಥಾಹಂದರದ ರಂಜನೀಯತೆ, ತಾತ್ವಿಕ ನಿರೂಪಣೆಗಳಿಂದ ಅವು ಮೇಳೈಸಿರುತ್ತವೆ. ಪುರಾಣ ಎಂಬುದು ಭಾರತೀಯ ಎಲ್ಲಾ ಧರ್ಮಗಳಲ್ಲಿ ಕಾಣಿಸಿಕೊಂಡಿದೆ. ಶಾಸ್ತ್ರೀಯ ದೃಷ್ಟಿಕೋನ, ಕಾವ್ಯದ ಕಲ್ಪನೆ, ಇತಿಹಾಸಾದಿಗಳ ಎಲ್ಲಾ ಧರ್ಮಗಳಲ್ಲಿ ಕಾಣಿಸಿಕೊಂಡಿದೆ. ಆದರೆ ಪುರಾಣಗಳು ಪ್ರಧಾನವಾಗಿ ಜನರಲ್ಲಿ ತತ್ವ ಧರ್ಮಗಳನ್ನು ಪ್ರಚುರಪಡಿಸುವ ಧ್ಯೇಯ ಹೊಂದಿರುತ್ತವೆ. ಜನಮನಕ್ಕೆ ತಲುಪಲು ಬೇಕಾದ ಕೆಲವು ತಂತ್ರಗಳನ್ನು ಅವು ಬಳಸಿಕೊಂಡರೂ ಹೇಳುವುದನ್ನು ಅವು ಅಧಿಕೃತವಾಗಿ ಸಾರುತ್ತವೆ".[೪]

ಭಾರತೀಯ ಸಾಮಾಜಿಕ ಪರಿಸರದಲ್ಲಿ ಧಾರ್ಮಿಕ ವಿಚಾರಗಳು ಹೆಚ್ಚು ಹೆಚ್ಚು ಗಟ್ಟಿಗೊಳ್ಳುತ್ತಾ ಹೋದಾಗ, ಮತ ಧರ್ಮದ ತತ್ವಗಳನ್ನು ಪ್ರಸಾರಗೊಳಿಸುವ ಸಂದರ್ಭದಲ್ಲಿ ಹುಟ್ಟಿಕೊಂಡ ಕಥಾನಕಗಳೇ ಪುರಾಣಗಳಾಗಿವೆ. ಪರಂಪರಾತಗವಾಗಿ ಬೆಳೆದು ಬಂದಂತಹ ವಿಚಾರಗಳನ್ನು ಒಂದು ಜನಾಂಗವು ತನ್ನ ಅಸ್ಮಿತೆಗೆ ಆಧಾರಗಳು ಎಂದುಕೊಳ್ಳುವಾಗ ಪೌರಾಣಿಕವಾದಂತಹ ವಿಚಾರಗಳನ್ನು ಐತಿಹಾಸಿಕವಾಗಿಸುವಾಗ ಪುರಾಣಗಳು ರೂಪುಗೊಂಡಂತಿವೆ.

ಪುರಾಣ ಮತ್ತು ಮತಾಚರಣೆಗೆ ಇರುವ ಸಂಬಂಧವು ಪುರಾಣಗಳ ತಾತ್ವಿಕತೆಯ ಹುಡುಕಾಟಕ್ಕೆ ಪ್ರಮುಖವಾಗಿ ಕಾಣಿಸಿಕೊಳ್ಳುತ್ತದೆ. ಪುರಾಣಗಳು ದೇವರುಗಳ ಮತ್ತು ಇತರ ಶಕ್ತಿಗಳ ಸ್ವರೂಪವನ್ನು ವಿವರಿಸುತ್ತವೆ. ಆ ಮೂಲಕ ಮಾನವನು ಆ ಶಕ್ತಿಗಳೊಂದಿಗೆ ಸಂಬಂಧವನ್ನು ಕಲ್ಪಿಸಿಕೊಳ್ಳಲು ಸಹಾಯಕವಾಗುತ್ತದೆ. ಮತದಲ್ಲಿನ ನಂಬಿಕೆಗೆ ಪುರಾಣಗಳು ಒಂದು ರೂಪ ಕೊಟ್ಟರೆ, ಆ ನಂಬಿಕೆಗಳನ್ನು ಪುನರ್‌ನವೀಕರಿಸಿ ಅದಕ್ಕೊಂದು ದೃಢತೆಯನ್ನು ತಂದು ಕೊಡುವುದೇ ಪುರಾಣ. ಪುರಾಣಗಳು ಜನರ ನಂಬಿಕೆಗಳನ್ನು ವ್ಯವಸ್ಥಿತಗೊಳಿಸುವಲ್ಲಿ ಬಹು ಮುಖ್ಯವಾದ ಪಾತ್ರವಹಿಸುತ್ತವೆ. ಧಾರ್ಮಿಕ ನಂಬಿಕೆ ವ್ಯವಸ್ಥೆಗಳಂತೂ ಬಹುಮಟ್ಟಿಗೆ ಪುರಾಣಗಳನ್ನವಲಂಬಿಸಿವೆ. ದೀನನಾಗಿ ದೈವದ ಮೊರೆ ಹೊಕ್ಕರೆ ಆ ದೈವ ಸಹಾಯಕ್ಕೆ ಬರುತ್ತದೆ ಎಂಬ ತತ್ವ, ನಂಬಿಕೆ ಜನರ ಮನಸ್ಸಿನಲ್ಲಿ ಬೇರೂರಿ ರೂಢಮೂಲವಾಗಲು ಪುರಾಣಗಳನ್ನವಲಂಬಿಸದೆ ಅನ್ಯ ಮಾರ್ಗವಿಲ್ಲ. ಆದುದರಿಂದ ಸತ್ಯ ಎಂದರೆ ಏನು ಎಂದು ಯಾರಾದರೂ ಕೇಳಿದರೆ ವಿವರಿಸಲು ತೀರ ಕಷ್ಟವಾದ ಆ ಜಟಿಲ ತತ್ವವನ್ನು ಜನ ಸುಲಭವಾಗಿ ವರ್ಣಿಸಿಬಿಡುತ್ತಾರೆ. ಹೇಗೆಂದರೆ ಗಿರಿಜೆಯ ತಪಸ್ಸು, ಹರಿಶ್ಚಂದ್ರನ ಸತ್ಯ, ಕರ್ಣನ ದಾನ, ಪ್ರಹ್ಲಾದನ ಭಕ್ತಿ, ಹನುಮಂತನ ಸೇವೆ ಹೀಗೆ ಜನಗಳ ಮನಸ್ಸಿನಲ್ಲಿ ಬೇರೂರಿರುವ ನಂಬಿಕೆಗಳೇ ಸಂಕೇತಗಳಾಗುತ್ತವೆ.

ಪುರಾಣಗಳು ಸೃಷ್ಟಿಯ ಆದಿಯಿಂದ ಇಡೀ ಜೀವಸಂಕುಲದ ಚರಿತ್ರೆಯ ಜೊತೆಗೆ ಮನು ಕುಲದ ಸ್ಥಿತ್ಯಂತರಗಳನ್ನು ತಿಳಿಸಿಕೊಡುತ್ತವೆ. ಜೀವಾತ್ಮ ಮತ್ತು ಪರಮಾತ್ಮನ ನಡುವಿನ ಅಲೌಕಿಕ ಚಿಂತನೆಗೆ ಮನುಷ್ಯನನ್ನು ಒಳಗು ಮಾಡುತ್ತವೆ. ಲೌಕಿಕ ಮತ್ತು ಅಲೌಕಿಕ ವಿಚಾರಗಳ ಸಂಘರ್ಷವನ್ನು ಪುರಾಣಗಳು ಒಳಗೊಂಡಿರುತ್ತವೆ. ಅಂದರೆ ಮಾನವ ಸಾಂಸ್ಕೃತಿಕ ಎಲ್ಲಾ ಮಗ್ಗಲುಗಳನ್ನು ತನ್ನೊಡಲಲ್ಲಿ ಇಟ್ಟುಕೊಂಡಿರುತ್ತವೆ.

ವಿಶ್ವಸೃಷ್ಟಿಯ ಕುರಿತಾದ ಪುರಾಣಗಳು ಮನುಷ್ಯನ ಹುಟ್ಟಿನೊಂದಿಗೆ ಕೊನೆಗೊಳ್ಳುತ್ತವೆ. ಹೀಗಾಗಿ ಮನುಷ್ಯನು ಈ ಸೃಷ್ಟಿಯ ಮೇಲೆ ಕಾಣಿಸಿಕೊಳ್ಳುವ ಪೂರ್ವದಲ್ಲಿ ಇದ್ದ ಸೃಷ್ಟಿಯು ಇಲ್ಲಿ ಮನುಷ್ಯ ಕಾಣಿಸಿಕೊಂಡ ತರುವಾಯ ಬದಲಾಯಿತೆಂಬ ಅಂಶವನ್ನು ಈ ಪುರಾಣ ಕಥೆಗಳಲ್ಲಿ ಕಾಣಬಹುದಾಗಿದೆ. ಮನುಷ್ಯ ಹುಟ್ಟುವ ಪೂರ್ವದಲ್ಲಿನ ಜಗತ್ತೇ ಬೇರೆಯದು; ಮನುಷ್ಯ ಹುಟ್ಟಿದ ನಂತರ ಜಗತ್ತು ಮಾನವನ ಸಂಸ್ಕೃತಿಯ ತಾಣವಾಗಿ ಬೆಳೆದದ್ದೇ ಬೇರೆ. ಈ ಬಗೆಯ ಪ್ರತ್ಯೇಕ ಘಟ್ಟಗಳ ಪರಿಚಯ ವಿಶ್ವಸೃಷ್ಟಿಯ ಕುರಿತಾದ ಪುರಾಣಗಳ ಮೂಲಕ ತಿಳಿದು ಬರುತ್ತದೆ. ಹಾಗೆಯೇ ಮುಂದುವರೆದು ನೋಡಿದರೆ ಸಾಮಾನ್ಯವಾಗಿ ಈ ಬಗೆಯ ಪುರಾಣಗಳಲ್ಲೂ ಸೃಷ್ಟಿಯ ಕ್ರಿಯೆಯನ್ನು ಮೂರು ಹಂತಗಳಲ್ಲಿ ಕಲ್ಪಿಸಿಕೊಂಡಿರುವ ಅಂಶ ಸಿಗುತ್ತದೆ. ಸೃಷಿಕರ್ತನಿಗೆ ಸಂಬಂಧಿಸಿದ ಲೋಕ ಮೊದಲನೆ ಹಂತಕ್ಕೆ ಸೇರಿದ್ದು; ಪೂರ್ವಿಕರದೆನ್ನಬಹುದಾದ ಲೋಕ ಎರಡನೆಯ ಹಂತದ್ದು; ಮನುಷ್ಯ ಲೋಕ ಮೂರನೆಯ ಹಂತದ್ದು. ಈ ಮೂರು ಹಂತಗಳಿಗೂ ಪರಸ್ಪರ ಅಂತರ್‌ಸಂಬಂಧ ಇರುವುದು ಕಂಡು ಬರುತ್ತದೆ. ದೇವತೆಗಳು ಮನುಷ್ಯನ ಪೂರ್ವಿಕರೆಂದಾಗಲಿ ಇಲ್ಲವೆ ಮನುಷ್ಯರ ಸೃಷ್ಟಿಕರ್ತರೆಂದಾಗಲಿ ಇಲ್ಲವೆ ಮನುಷ್ಯರಾಗಿ ಪರಿವರ್ತನೆ ಹೊಂದಿದರೆಂದಾಗಲಿ ಎಂಬುದನ್ನು ಈ ಪುರಾಣಗಳು ತಿಳಿಸುತ್ತವೆ.

ಬೇರೆ ಬೇರೆ ವಂಶದವರು ತಮ್ಮ ವಂಶಗಳು ಉದಯವಾದದ್ದಕ್ಕೆ ತಮ್ಮದೆಯಾದ ಕತೆಗಳನ್ನು ಸೃಷ್ಟಿಸಿಕೊಳ್ಳುತ್ತಾರೆ. ಉದಾಹರಣೆಗೆ ಕರ್ನಾಟಕದ ರಾಜವಂಶಗಳು ತಮ್ಮ ಮೂಲವನ್ನು ಬಹು ಹಿಂದಿನ ಯಾವುದೋ ದೈವಕ್ಕೆ, ಋಷಿಗೆ, ವೀರನಿಗೆ ಕೊಂಡೊಯ್ಯುವುದನ್ನು ಇಲ್ಲಿ ನೆನೆಯಬಹುದು. ಭೂಕಂಪಗಳ ಬಗ್ಗೆ ಬಗೆ ಬಗೆಯ ಕತೆಗಳಿವೆ. ಭೂಮಿಯನ್ನು ಹೊತ್ತಿರುವ ಸರ್ಪದ, ದಿಗ್ಗಜಗಳ ಕಲ್ಪನೆ ಭಾರತೀಯರಲ್ಲಿದೆ. ದಕ್ಷಿಣಭಾರತದ ವೈಶ್ಯರಲ್ಲಿ ಪ್ರಚಲಿತವಿರುವ ಪುರಾಣ ಕತೆಯೊಂದು ಸ್ವಾರಸ್ಯವಾಗಿದೆ. ಅವರ ವಂಶದಲ್ಲಿ ಹಿಂದೆ ಇದ್ದ ಸ್ಪುರದ್ರೂಪಿಯಾಗಿದ್ದ ಕನ್ನೆ ರಾಜಕುಮಾರಿಯೊಬ್ಬಳನ್ನು ಕಾಮುಕನೊಬ್ಬನು ಪೀಡಿಸಿದಾಗ ಅವಳು ಅಗ್ನಿ ಪ್ರವೇಶ ಮಾಡಿದಳೆಂದೂ ಅದಕ್ಕೆ ಮುನ್ನ ತನ್ನ ವಂಶದ ಜನ ಇತರರ ದುಷ್ಟದೃಷ್ಟಿಗೆ ಬಲಿಯಾಗದಿರಲಿ ಎಂಬ ಕರುಣೆಯಿಂದ ಅವರೆಲ್ಲರೂ ಕಪ್ಪಾಗಿ ಹುಟ್ಟಲೆಂದು ಹರಸಿದಳೆಂದು ಅವರು ನಂಬುತ್ತಾರೆ.

ವೈಶ್ಯರ ಬಣ್ಣದ ಕಾರಣವನ್ನು ಈ ಕತೆ ವಿವರಿಸುವುದಲ್ಲದೆ, ಕಪ್ಪಾಗಿ ಹುಟ್ಟುವುದು ಒಂದು ವರದ ಫಲವೆಂದು ಸಮರ್ಥಿಸಿಕೊಂಡಿರುವುದು ಸ್ವಾರಸ್ಯವಾಗಿದೆ. ಇಂತಹ ಕತೆಗಳು ಮೂಲತಃ ಒಬ್ಬನ ಕಲ್ಪನೆಯಲ್ಲಿ ಜನಿಸಿದ್ದರೂ ಅವು ಸಮಾಜದಲ್ಲಿ ಅಂಗೀಕೃತವಾಗಲು ಅರ್ಹವಾದ ಗುಣ ಇದ್ದರೆ ಮಾತ್ರವೇ ಮುಂದೆ ಪ್ರಚಾರಕ್ಕೆ ಬರಲು ಸಾಧ್ಯ. ಅಂತಹ ಕತೆಗಳು ಜನಕ್ಕೆ ಒಪ್ಪಿಗೆಯಾಗಿ ತಲೆಮಾರಿನಿಂದ ತಲೆಮಾರಿಗೆ ಹರಿದುಬರುತ್ತ ಅವರಿಗೆ ಪ್ರಿಯವೂ ಪವಿತ್ರವೂ ಆಗುತ್ತ ಬರುತ್ತವೆ.

ಪುರಾಣಗಳನ್ನು ಜನಪದ ಮತ್ತು ಲಿಖಿತ ಪುರಾಣಗಳೆಂದು ವರ್ಗೀಕರಿಸಲಾಗಿದೆ. ವಸ್ತುವಿನ ನಿರೂಪಣೆಯ ದೃಷ್ಟಿಯಿಂದ ಈ ಎರಡರಲ್ಲಿ ವ್ಯತ್ಯಾಸ ಕಂಡುಬರುತ್ತದೆ. ಈ ಕುರಿತು ಪುರುಷೋತ್ತಮ ಬಿಳಿಮಲೆಯವರು ಈ ರೀತಿಯಾಗಿ ಹೇಳುತ್ತಾರೆ. "ಜನಪದ ಪುರಾಣಗಳಲ್ಲಿ ನಾಯಕನು ತೋರುವ ವೀರತ್ವದಲ್ಲಿ ಒಂದು ಬಗೆಯ ಕ್ರಿಯಾತ್ಮಕ ಗುಣಧರ್ಮ ನೆಗೆದು ತೋರುತ್ತದೆ. ಇಲ್ಲಿಯ ವೀರರು, ವೀರರಾಗಲು ಕಾರಣ ಅವರು ದೈವದ ಅವತಾರವಾಗಿರುವುದು ಅಲ್ಲ. ಅವರಿಗೆ ಯಾವುದೇ ಪೂರ್ವಜನ್ಮದ ಪುಣ್ಯ ವಿಶೇಷಗಳಿಲ್ಲ. ಅವರ ತಾಯಂದಿರು ಗರ್ಭ ಧರಿಸುವಾಗ ಯಾವುದೇ ಶುಭ ಶಕುನಗಳು ಸಂಭವಿಸುವುದಿಲ್ಲ ಅಥವಾ ಅವರು ಜನಿಸುವಾಗ ದೇವತೆಗಳು ಪುಷ್ಪವೃಷ್ಟಿ ಮಾಡುವುದಿಲ್ಲ. ಅವರ ಸಾಮಾಜಿಕ ಸ್ಥಾನಮಾನಗಳು ಅವರ ವೀರತ್ವವನ್ನು ನಿರ್ಧರಿಸುವುದಿಲ್ಲ".[೫] ಸಾಮಾನ್ಯ ಜನರಂತೆ ಹುಟ್ಟಿ ಬೆಳೆವ ಜನಪದ ಪುರಾಣದ ನಾಯಕನು ತಾನು ಬೆಳೆದ ಪರಿಸರವನ್ನು ಮೀರಲೇ ಬೇಕಾದ ಸಾಂಸ್ಕೃತಿಕ ಒತ್ತಡಕ್ಕೆ ಸಿಲುಕಿಕೊಳ್ಳುತ್ತಾನೆ. ತನ್ನ ಚಾಣಕ್ಷತೆ ಹಾಗೂ ಸಾಹಸದಿಂದ ತನಗೆ ಎದುರಾದ ಸಮಸ್ಯೆಗಳಿಗೆ ಉತ್ತರ ಕಂಡೊಕೊಳ್ಳುತ್ತಾನೆ. ಈ ರೀತಿ ಕಷ್ಟಕರವಾದ ಕಾಲದಲ್ಲಿ ಇಂಥವರು ತೋರುವ ಕ್ರಿಯಾತ್ಮಕತೆ ಜನರ ದೃಷ್ಠಿಯಲ್ಲಿ ಅವರನ್ನು ನಾಯಕನನ್ನಾಗಿಸುತ್ತದೆ. ಆದರೆ ಲಿಖಿತ ಪುರಾಣಗಳು ಇದಕ್ಕೆ ವಿರುದ್ಧವಾದ ರೀತಿಯಲ್ಲಿ ಕಥಾನಕವನ್ನು ನಿರೂಪಿಸುತ್ತವೆ. ಲಿಖಿತ ಪುರಾಣಗಳು ಪೂರ್ವದಿಂದಲೂ ಬೆಳೆದು ಬಂದಿರುವ ವ್ಯವಸ್ಥೆಯನ್ನು ನಿಯಮಬದ್ಧಗೊಳಿಸಿದರೆ; ಜನಪದ ಪುರಾಣಗಳು ಅದರ ಒಳಗಿನ ಸಾಂಸ್ಕೃತಿಕ ಸಂಘರ್ಷವನ್ನು ಹೊರತರುತ್ತವೆ.

ಪುರಾಣಗಳು ಒಳಗೊಂಡಿರುವ ವಿಷಯಗಳೆಲ್ಲವೂ ಚರಿತ್ರೆಯ ಭಾಗವಾಗುತ್ತವೆಯೇ ಎನ್ನುವ ಪ್ರಶ್ನೆ ಹುಟ್ಟುತ್ತದೆ. ಮಾನವನ ಬೌದ್ಧಿಕ ವಿಕಾಸದ ಚರಿತ್ರೆಯನ್ನು ಪುರಾಣಗಳು ಒಳಗೊಂಡಿವೆ ಎನ್ನುವುದಾದರೆ, ಅವು ಇತಿಹಾಸ ಒಂದಂಶವನ್ನು ತನ್ನಲ್ಲಿ ಅಡಗಿಸಿಟ್ಟುಕೊಂಡಿವೆ ಎಂದರ್ಥ. ಅದ್ದರಿಂದಲೇ ಪುರಾಣವನ್ನು "ಅತ್ಯಂತ ಸಂಕೀರ್ಣವಾದ ಸಾಂಸ್ಕೃತಿಕ ಸತ್ಯ" ಎಂದು ಕರೆಯುವುದುಂಟು. ಅಲ್ಲದೆ ಪುರಾಣ ಒಂದು ಪವಿತ್ರ ಕಥೆಯೆಂದೂ, ಅದು

ಯಾವಾಗಲೂ ಸತ್ಯಗಳಿಗೇ ಸಂಬಂಧಿಸಿದ್ದರಿಂದ "ಸತ್ಯೇತಿಹಾಸ"ವೆಂದು ಪರಿಗಣಿಸಲಾಗುತ್ತಿದೆ. ಈ ಕಾರಣಗಳಿಂದ ಪುರಾಣವನ್ನು "ಭೂತಕಾಲದ ಪವಿತ್ರ ಇತಿಹಾಸ" ಎಂದೂ ನಂಬಲಾಗಿದೆ.[೬] ಇದಕ್ಕೆ ವಿರುದ್ಧವಾದ ಅಭಿಮತವನ್ನು ವಚನಕಾರರಲ್ಲಿ ಕಾಣಬಹುದು. ಅವರ ಪ್ರಕಾರ ಪುರಾಣವೆಂಬುದು ಪುಂಡರ ಗೋಷ್ಠಿ. ಇವರ ಈ ಅಭಿಪ್ರಾಯವನ್ನು ಪರಿಶೀಲಿಸಿ ನೋಡುವುದಾದರೆ, ಪುರಾಣ ಒಳಗೊಂಡಿರುವ ವಿಷಯಗಳೆಲ್ಲವೂ ವಚನಕಾರರು ಹೇಳುವಂತೆ ಪುಂಡರಗೋಷ್ಠಿಗಳೂ ಅಲ್ಲ; ಕಟ್ಟು ಕಥೆಗಳೂ ಅಲ್ಲ. ಅಲ್ಲಿ ಒಂದಿಷ್ಟಾದರೂ ಚಾರಿತ್ರಿಕವಾದ ಸತ್ಯವಿರುತ್ತದೆ. ಶರಣರ ಜೀವನವನ್ನೇ ನಾವು ತೆಗೆದುಕೊಂಡಾಗ ಶರಣರು ಆಗಿಹೋದ ನಂತರದಲ್ಲಿ ಅವರ ಕುರಿತು ಅದೆಷ್ಟೋ ಪುರಾಣಗಳು ರಚನೆಯಾದವು. ಅಂದಾಗ ಆ ಪುರಾಣದಲ್ಲಿರುವ ಅಂಶಗಳೆಲ್ಲವನ್ನೂ ನಾವು ಅಸತ್ಯ ಎಂದು ಭಾವಿಸಿದರೆ, ಈ ನಾಡಿನಲ್ಲಿ ಶರಣ ಹುಟ್ಟಿ, ವಚನಗಳನ್ನು ರಚಿಸಿದ್ದು ಸುಳ್ಳು ಎನ್ನುವ ಅಭಿಪ್ರಾಯವನ್ನು ತಳೆಯಬೇಕಾಗುತ್ತದೆ. ಈ ಹಿಂದೆ ನೋಡಿದಂತೆ ಒಂದು ಕಾಲದಲ್ಲಿನ ಒಬ್ಬ ಸಾಂಸ್ಕೃತಿಕ ವೀರನ ಚರಿತ್ರೆ ಆ ಕಾಲದ ಜನರಿಗೆ ಪವಿತ್ರ ಎಂದು ಕಂಡರೆ ಅದು ಪುರಾಣವಾಗುತ್ತದೆ ಎನ್ನುವಂತೆ ಶರಣರ ಜೀವನವೂ ಪವಿತ್ರವಾದ್ದರಿಂದ ಅದು ಪುರಾಣದ ಸ್ವರೂಪವನ್ನು ಪಡೆದುಕೊಂಡಿದೆ ಅಷ್ಟೆ. ಬಹುಶಃ ಶರಣರು ಅವುಗಳನ್ನು ಹೀಗಳೆದದ್ದು ಅವು ಒಳಗೊಂಡಿರುವ ಮೌಢ್ಯತೆಯೇ ಒಂದು ಕಾರಣ ಎನ್ನಬಹುದು. ಮ್ಯಾಲಿನೋವ್‌ಸ್ಕಿ ಪುರಾಣ ಕುರಿತಂತೆ ಹೇಳಿರುವ ಅಭಿಪ್ರಾಯ ಹೀಗಿದೆ; "ಈ ತನಕ ಪುರಾಣಗಳು ಪರಿಹರಿಸಿರುವ ಸಮಸ್ಯೆಗಳು ವಿರಳ; ಅವುಗಳು ತಣಿಸಿರುವ ಕುತೂಹಲವಿಲ್ಲ; ಅವುಗಳು ಸಿದ್ಧಪಡಿಸಿರುವ ಸಿದ್ಧಾಂತಗಳಿಲ್ಲ" ಎಂದು ಹೇಳುತ್ತಾ "ಅನಾಗರಿಕ ಸಮಾಜದಲ್ಲಿ ಪುರಾಣ ಬರಿಯ ಕಟ್ಟುಕತೆಯಲ್ಲ, ಅದೊಂದು ಜೀವಂತ ಸತ್ಯ"[೭] ಎಂದಿದ್ದಾರೆ.

ಫ್ರೆಂಚ್‌ನ ಮಾರ್ಸೆಲ್ ಮಾಸ್‌ನು ಪುರಾಣಗಳನ್ನು ಕುರಿತು 'ಒಟ್ಟಾರೆ ಸಾಮಾಜಿಕ ಸತ್ಯಗಳು' ಎಂದು ಹೇಳುತ್ತಾನೆ. ಅಂದರೆ ಪೌರಾಣಿಕವಾದಂತಹ ಸಂಕೇತಗಳು ಯಾವ ಸಂದರ್ಭದಲ್ಲಿ ಎಂತಹ ಕಾರ್ಯಕ್ಕಾಗಿ ಬಳಕೆಯಾಗಿವೆ ಎನ್ನುವುದರ ಆಧಾರದ ಮೇಲೆ ಅವುಗಳನ್ನು ಅಧ್ಯಯನಕ್ಕೊಳಪಡಿಸಬೇಕೆನ್ನುವುದು ಆತನ ವಾದ. ಒಂದು ಕಾಲದ ಸಾಮಾಜಿಕ ಸತ್ಯ ಎನ್ನುವಂತಹದ್ದು ಆಯಾ ಸಾಮಾಜಿಕ ವ್ಯವಸ್ಥೆಯ ಒಟ್ಟು ವಿನ್ಯಾಸವನ್ನು ರೂಪಿಸಿಕೊಳ್ಳುವಲ್ಲಿ ಯಾವ ಬಗೆಯಲ್ಲಿ ಕೆಲಸ ಮಾಡುತ್ತದೆ ಎನ್ನುವುದರ ಮೂಲಕ ಅಂದಿನ ಸಾಮಾಜಿಕ ವ್ಯವಸ್ಥೆಯ ಚಿತ್ರಣ ನೀಡುತ್ತವೆ ಎನ್ನುವುದನ್ನು ತಿಳಿದುಕೊಳ್ಳಬಹುದಾಗಿದೆ. ಪುರಾಣಗಳನ್ನು ಸೃಷ್ಟಿಸಿದವರಿಗೆ ಅವರದೇ ಆದ ಲೋಕದೃಷ್ಟಿ ಇರುತ್ತದೆ. ಈ ಲೋಕದೃಷ್ಟಿಯು ಸಂಸ್ಕೃತಿಯಿಂದ ಮೂಡಿದುದಾಗಿದೆ. ಅದನ್ನು ಪುರಾಣದೊಳಗಿರುವ ತರ್ಕದ ಮೂಲಕ ತಿಳಿದುಕೊಳ್ಳಬೇಕು. ಯಾಕೆಂದರೆ ಪ್ರತಿಯೊಬ್ಬರ ಲೋಕದೃಷ್ಟಿಯೂ ಭಿನ್ನವಾಗಿ ವ್ಯಕ್ತವಾಗಿರುತ್ತದೆ. ಅದು ಕೆಲ

ಸಂದರ್ಭದಲ್ಲಿ ಒಂದು ಪ್ರದೇಶದ ಜನಾಂಗವನ್ನು ಆಧರಿಸಿದರೆ, ಮತ್ತೆ ಕೆಲ ಸಂದರ್ಭಗಳಲ್ಲಿ ಇಡೀ ಮಾನವ ಸಂಸ್ಕೃತಿಯ ಬಗೆಗಿನ ವಿಚಾರಗಳನ್ನು ಆಧರಿಸಿ ರೂಪುಗೊಂಡಿರುತ್ತದೆ. ಮತ್ತೆ ಕೆಲ ತರ್ಕಗಳು ಆಯಾ ಕಾಲಘಟ್ಟಕ್ಕೆ ಮಾತ್ರ ಸೀಮಿತಗೊಳ್ಳುವಂತಿದ್ದರೆ, ಕೆಲವು ಸಾರ್ವಕಾಲಿಕವಾದ ಸತ್ಯವನ್ನು ಒಳಗೊಂಡಿರುತ್ತವೆ.

"ಯಾವುದೇ ಪರಂಪರೆಯ ಪುರಾಣವಾಗಲಿ ಅವುಗಳಲ್ಲಿ ಕೆಲವು ಮುಖ್ಯವಾದ ಕಥೆಗಳಿರುತ್ತವೆ. ಈ ಕಥೆಗಳ ವಿಷಯ ವಿಶ್ವದ ಸೃಷ್ಟಿಯನ್ನು ಕುರಿತದ್ದಾಗಿರುತ್ತದೆ. ಯಾವುದೇ ಸಮಾಜ ತನ್ನ ವ್ಯವಸ್ಥೆಯು ಸುಸೂತ್ರವಾಗಲು ಹಲವಾರು ಆಚರಣೆಗಳನ್ನು ರೂಪಿಸಿಕೊಂಡಿರುತ್ತದೆ; ಇವುಗಳಲೆಲ್ಲ ಒಂದಲ್ಲ ಒಂದು ರೀತಿಯಲ್ಲಿ ವಿಶ್ವದ ಸೃಷ್ಟಿಯ ಉಲ್ಲೇಖವಿರುತ್ತದೆ. ತೀರ ಇತ್ತೀಚಿನವರೆಗೆ ನಮ್ಮ ಮಹಾರಾಜರುಗಳ ಪಟ್ಟಾಭಿಷೇಕ ಕಾಲದಲ್ಲಿ ನಡೆಸುವ ಆಚರಣೆಗಳು ಈ ವಿಶ್ವಸೃಷ್ಟಿಯ ಸಾಂಕೇತಿಕ ಪುನರಭಿನಯಗಳೇ ಆಗಿದ್ದವು. ಮೆಸಪಟೋಮಿಯಾದ ಮಹಾಕಾವ್ಯ 'ಎನುಮಾ ಎಲಿಷ್' ಪ್ರಪಂಚ ಹುಟ್ಟನ್ನು ಹೇಳುತ್ತದೆ. ವಿಶ್ವದ ಅವ್ಯವಸ್ಥೆಯನ್ನು ಕೊನೆಗಾಣಿಸಿ ವ್ಯವಸ್ಥೆಯನ್ನು ಸ್ಥಾಪಿಸಿದ ಕಥೆ ಅದು. ನಮ್ಮಲ್ಲಿಯೂ ಪೃಥ್ವಿ ಪತಿಯು ವಿಷ್ಣುವಿನ ಅಂಶ ಎಂಬ ಸಮರ್ಥನೆಯ ಕಥೆಗಳಿವೆಯಷ್ಟೇ. ಆಳುವ ರಾಜರ ಅಧಿಕಾರವನ್ನು ಸಮರ್ಥಿಸುವುದಕ್ಕೆ ಪುರಾಣಗಳು ಒದಗಿ ಬರುತ್ತವೆ".[೮] ಪುರಾಣವು ಒಂದಲ್ಲ ಒಂದು ಬಗೆಯಲ್ಲಿ ಇತಿಹಾಸ ಮಾಡಬಹುದಾದ ಕಾರ್ಯವನ್ನು ಮಾಡುತ್ತದೆ ಎನ್ನುವುದು ಮೇಲಿನ ಉದ್ಧರಣೆಯಿಂದ ತಿಳಿದು ಬರುತ್ತದೆ. ಒಂದು ಕಾಲದ ಕಥೆಗೆ ಕಾಲ್ಪನಿಕತೆಯ ವರ್ಗೀಕರಣೆ ಹಾಕಿದಾಗ ಅದು ಪುರಾಣದ ಸ್ವರೂಪವನ್ನು ಪಡೆದುಕೊಳ್ಳುತ್ತದೆ ಎಂದಾಯಿತು. ಆದರೆ ಇಲ್ಲಿ ಪುರಾಣ ಮತ್ತು ಚರಿತ್ರೆಯ ವಿಷಯಕ್ಕೆ ಬಂದಾಗ ಒಂದು ಪುರಾಣದ ಐತಿಹಾಸಿಕ ಅಂಶಗಳ ಕುರಿತು ಖಚಿತವಾದ ತೀರ್ಮಾನಕ್ಕೆ ಬರಲು ಕಷ್ಟವಾಗುತ್ತದೆ. ಸಾಮಾನ್ಯವಾಗಿ ಇತಿಹಾಸವೆಂದರೆ ಹಿಂದೆ ಹೀಗೆ ಇತ್ತು ಎನ್ನುವ ಅರ್ಥದಲ್ಲಿ ಬಳಸುತ್ತೇವೆ. ಈ ಸಂದರ್ಭದಲ್ಲಿ ಪುರಾಣದಲ್ಲಿನ ಘಟನೆಗಳು ಹಿಂದೆ ಹೀಗಿದ್ದವು ಎಂದು ಹೇಳಿದರೆ, ಅದಕ್ಕೆ ಸಾಕ್ಷ್ಯಾಧಾರಗಳು ಬೇಕಾಗುತ್ತವೆ. ಅಂತಹ ಸಂದರ್ಭದಲ್ಲಿ ಪುರಾಣದ ಸ್ಥಾನವನ್ನು ಗುರುತಿಸಬೇಕಾಗುತ್ತದೆ. ಅದು ಹೇಗೆಂದರೆ "ಯಾವ ಸಮಾಜದಲ್ಲಿ ಅಥವಾ ಭಾಷೆಯಲ್ಲಿ ಬರವಣಿಗೆ ಬೆಳೆದಿರುವುದಿಲ್ಲವೋ ಅಥವಾ ಅಕ್ಷರ ಜ್ಞಾನ ಹೆಚ್ಚು ಇರುವುದಿಲ್ಲವೋ ಅಲ್ಲಿ ಚರಿತ್ರೆಯ ದೃಷ್ಟಿಗಿಂತ ಪುರಾಣದ ದೃಷ್ಟಿ ಹೆಚ್ಚು ಪ್ರಬಲವಾಗಿರುತ್ತದೆ. ಬಾಯಿ ಮಾತಿನ ಮುಖಾಂತರ ಸಾಗಿ ಬಂದ ಪುರಾಣದ ಕಥೆಗಳು, ಅವುಗಳಿಗೆ ಆಯಾ ಸಂದರ್ಭವನ್ನು ಅನುಸರಿಸಿ ನೀಡುವ ವ್ಯಾಖ್ಯಾನ ಇವಷ್ಟೇ ಗತಕಾಲದ ಅಧಿಕೃತ ಕ್ಷಣಿಕ ದಾಖಲೆಗಳಾಗುತ್ತವೆ".[೯] ಎನ್ನುವುದನ್ನು ಒಪ್ಪಿಕೊಳ್ಳಬೇಕಾಗುತ್ತದೆ.

ಪುರಾಣಗಳನ್ನು ಅರ್ಥೈಸಿಕೊಳ್ಳಬೇಕಾದರೆ ಅದಕ್ಕೆ ಸಂಬಂಧಿಸಿದ ಕೆಲ ಹಂತಗಳನ್ನು ಕಂಡುಕೊಳ್ಳಬೇಕೆನ್ನುವುದು ಲೆವಿ ಸ್ಟ್ರಾಸ್‌ನ ವಾದ. "A myth must be interpreted on one level only. No privileged explanation exists, for any myth consists in an interrelation of several explanatory levels"[೧೦] ಒಂದು ಪುರಾಣದ ಕುರಿತ ವಿಶ್ಲೇಷಣೆಯನ್ನು ಆ ಪುರಾಣ ರಚನೆಗೊಂಡ ಕಾಲ, ಅಲ್ಲಿ ಅಡಕವಾಗಿರುವ ವಿಚಾರ, ಆ ಪುರಾಣವು ಪ್ರತಿಬಿಂಬಿಸುವ ಒಂದು ಜನಾಂಗದ ಸಂಸ್ಕೃತಿ ಮತ್ತು ಕಾಲಾಂತರದಲ್ಲಿ ಆ ಸಂಸ್ಕೃತಿಯಲ್ಲಾದ ಪಲ್ಲಟಗಳು ಇವೆಲ್ಲವನ್ನೂ ಕುರಿತು ಅರಿತಾದ ಮೇಲೆಯೇ ಆ ಪುರಾಣದ ವಾಸ್ತವತೆಯನ್ನು ತಿಳಿಯುವ ಪ್ರಯತ್ನ ಮಾಡಬೇಕಾಗುತ್ತದೆ.

ಪುರಾಣಗಳ ರಚನೆಯ ಹಿಂದಿನ ಉದ್ದೇಶ ಕೇವಲ ಒಂದೆರಡಲ್ಲ; ಹತ್ತು ಹಲವು. ಆರಂಭದ ಕಾಲದಲ್ಲಿ ಸೃಷ್ಟಿ, ಲಯ, ಸ್ಥಿತಿಯ ಬಗೆಗಿನ ಪುರಾಣಗಳು ರಚನೆಯಾದರೆ ಕಾಲಾಂತರದಲ್ಲಿ ಅವುಗಳ ಸ್ವರೂಪದಲ್ಲಿ ಬದಲಾವಣೆಯಾಗುತ್ತಾ ಬಂದಿದೆ. ಒಂದು ಜನಾಂಗದ ಮೂಲದ ಕುರಿತು, ಒಂದು ವೃತ್ತಿಯ ಮೂಲದ ಕುರಿತು, ಒಬ್ಬ ವ್ಯಕ್ತಿಯ ಚರಿತ್ರೆಯ ಕುರಿತು, ಒಂದು ಘಟನೆಯ ಕುರಿತು, ಒಂದು ಸ್ಥಳದ ಕುರಿತು ಹೀಗೆ ಪುರಾಣ ನಾನಾ ರೂಪಗಳಲ್ಲಿ ತನ್ನ ಸ್ವರೂಪವನ್ನು ಪಡೆದುಕೊಂಡಿದೆ. ಇದಕ್ಕೆ ಆಯಾ ಕಾಲದ ಒತ್ತಾಸೆಗಳು ಕಾರಣವಾಗಿಬಹುದು ಮತ್ತು ತಮ್ಮ ಚರಿತ್ರೆಯನ್ನು ವೈಭವೀಕರಿಸಿಕೊಳ್ಳಲು, ಆ ಮೂಲಕ ತಮ್ಮ ಅಸ್ಮಿತೆಯನ್ನು ಕಟ್ಟಿಕೊಳ್ಳುವ ಸಲುವಾಗಿ ಈ ಬಗೆಯ ಪುರಾಣಗಳ ರಚನೆಯನ್ನು ಮಾಡಿರಬೇಕೆನಿಸುತ್ತದೆ.

ಪುರಾಣಗಳು ಸಾಮಾಜಿಕ, ಐತಿಹಾಸಿಕ, ಶೈಕ್ಷಣಿಕ ಮತ್ತು ಭೌಗೋಳಿಕ ಮಹತ್ವವನ್ನು ಹೊಂದಿವೆ. ಪ್ರಾಚೀನ ಸಂಸ್ಕೃತಿಯ, ನಾಗರೀಕತೆಯ, ಧರ್ಮನಿಷ್ಠ ಋಷಿಕುಲಗಳಿಂದ ಮೆರೆದ ಸಮಾಜದ ಪರಿಚಯವಾಗುತ್ತದೆ. ಪ್ರಾಚೀನ ಕಾಲದ ರಾಜಾಮಹಾರಾಜರ ಇತಿಹಾಸದ ಪರಿಚಯವಾಗುತ್ತದೆ. ಇವರ ತ್ಯಾಗ, ಅಹಿಂಸೆ, ಆಸ್ತೇಯ, ಸಮತೆ ಇತ್ಯಾದಿ ಆದರ್ಶ ಗುಣಗಳಲ್ಲಿ ನಮಗೆ ಶಿಕ್ಷಣವೂ ದೊರೆಯುತ್ತದೆ. ಪ್ರಾಚೀನ ನಗರಗಳ ಪರಿಚಯ, ತೀರ್ಥ ಕ್ಷೇತ್ರಗಳ ಸ್ವರೂಪ ತಿಳಿಯುತ್ತವೆ. ಸೃಷ್ಟಿಯ ಮೂಲದಿಂದ ಹಿಡಿದು ಇಂದಿನವರೆಗೂ ಮಾನವನ ಸಮಾಜದ ಬೆಳವಣಿಗೆಯು ಇಲ್ಲಿ ಕಾಣಸಿಗುತ್ತದೆ. ಪುರಾಣಗಳು ಸೃಷ್ಟಿ, ಲಯ ಮತ್ತು ಪುನಃ ಸೃಷ್ಟಿ, ಸೃಷ್ಟಿಯ ಆದಿ, ವಂಶಾವಳಿ, ಮನ್ವಂತರಗಳು ಮತ್ತು ಸೂರ್ಯ ಚಂದ್ರ ವಂಶಗಳ ಅರಸರ ಮುಂತಾದವುಗಳ ವರ್ಣನೆಗಳನ್ನೊಳಗೊಂಡಿವೆ.

ಕೆಲ ಸಂದರ್ಭದಲ್ಲಿ ಐತಿಹಾಸಿಕವಾದಂತಹ ಅಂಶಗಳು ಜನರ ಮನಸ್ಸನ್ನು ಸೂರೆಗೊಂಡೆ ಅವುಗಳೇ ಪುರಾಣಗಳ ರೂಪ ತಾಳುತ್ತವೆ. ಅದರಲ್ಲೂ ಭಾರತದಂತದ ಅತ್ಯಂತ ಮತಿಶ್ರದ್ಧೆ

ಇರುವ ದೇಶದಲ್ಲಿ ಇಂತಹ ರಚನೆಗಳು ಅತ್ಯಲ್ಪಕಾಲದಲ್ಲಿ ಹುಟ್ಟಿಕೊಳ್ಳುತ್ತವೆ. ಇದಕ್ಕೆ ಕುಮಾರ ರಾಮನ ಕಥೆ ಒಂದು ಉತ್ತಮ ನಿದರ್ಶನ. ಹದಿನಾಲ್ಕನೆಯ ಶತಮಾನದ ಸಂದರ್ಭದಲ್ಲಿ ಮುಸ್ಲಿಮರೊಡನೆ ಹೋರಾಡಿ ಸಾಹಸ ಮೆರೆದ ಕುಮಾರರಾಮನು ಮರಣ ಹೊಂದಿದ ಬಳಿಕ ಅವನ ಸುತ್ತ ಹುಟ್ಟಿಕೊಂಡ ಕಥೆಗಳನ್ನೇ ನೋಡಬಹುದು. ಅವನು ಗತಿಸಿದ ಒಂದೆರಡು ಶತಮಾನದ ಅವನ ಸುತ್ತ ಅದ್ಭುತ ಕಥೆಗಳು, ಅಲೌಕಿಕ ಘಟನೆಗಳು ಹುಟ್ಟಿಕೊಂಡಂತಿವೆ. ಇವುಗಳೇ ಮುಂದೆ ಅವನನ್ನು ಒಬ್ಬ ಅತಿಮಾನುಷ ಪುರುಷನ ಸ್ಥಾನದಲ್ಲಿ ನಿಲ್ಲಿಸಿವೆ ಎನ್ನಬಹುದು.

ಪುರಾಣ ಪ್ರಜ್ಞೆಯ ಕುರಿತು ಮಾತನಾಡುತ್ತಾ ಕೆ.ಕೆ.ರೂತ್ವೆನ್ ಅವರು "ಬೌದ್ಧಿಕವಾಗಿ ಹೆಳವರಾದವರಿಗೆ ಮಾತ್ರ ಪುರಾಣಗಳಿಂದ ಪ್ರಯೋಜನವಾಗುತ್ತದೆ." ಎಂದಿದ್ದಾರೆ. ವಾಲ್ಟೇರ್ ಎನ್ನುವವನೂ ಸಹ "ಪುರಾಣಗಳ ಅಧ್ಯಯನ ಹೆಡ್ಡರ ಉದ್ಯೋಗ" ಎಂದಿದ್ದಾನೆ. ಅಂದರೆ ನಾವು ಪುರಾಣದಲ್ಲಿನ ಎಲ್ಲಾ ವಿಷಯಗಳನ್ನು ಸಾಂಸ್ಕೃತಿಕ ಸತ್ಯ ಎಂದು ಒಪ್ಪಿಕೊಳ್ಳಬೇಕಾಗಿಲ್ಲ ಎಂದರ್ಥ. ಹೀಗೆಂದ ಮಾತ್ರಕ್ಕೆ ಅವುಗಳನ್ನು ತಿರಸ್ಕರಿಸುವಂತೆಯೂ ಇಲ್ಲ. ಪುರಾಣಗಳ ಪ್ರೇರಣೆಯನ್ನು ಮತ್ತು ಅವು ಹೊಂದಿರುವ ಧೋರಣೆಯನ್ನು ಪರೀಕ್ಷಿಸುವ ಮೂಲಕ ಅವುಗಳ ಅನಾವರಣ ಮಾಡಬೇಕಾಗಿದೆ. ಏಕೆಂದರೆ ನಾವು ಪುರಾಣಗಳನ್ನು ಪರೀಕ್ಷಿಸುವಾಗ ಯಾವುದೋ ಒಂದು ಕಟ್ಟುಪಾಡಿಗೆ ಬೀಳುತ್ತೇವೆ. ಇದಕ್ಕೆ ಕಾರಣ ಪುರಾಣಗಳನ್ನು ಪೂಜ್ಯನೀಯ ಕೃತಿಗಳ ಸಾಲಿಗೆ ಸೇರಿಸಿರುವ ನಮ್ಮ ಪರಂಪರಾಗತ ನಂಬಿಕೆಗಳು. ಇದಕ್ಕೆ ಸಂಬಂಧಿಸಿದಂತೆ ಬರಗೂರ ರಾಮಚಂದ್ರಪ್ಪನವರು ತಾಳುವ ಅಭಿಪ್ರಾಯ ಹೀಗಿದೆ. 'ನಮಗೆ ಪರಂಪರೆಯ ಪ್ರಜ್ಞೆ ಬೇಕು; ಆದರೆ ಪರಂಪರೆಯ ಪೂಜೆಬೇಡ. ಯಾಕೆಂದರೆ ಪುರಾಣ ಮತ್ತು ಇತಿಹಾಸಗಳ ವೈಭವೀಕರಣವೆಂದರೆ ವಾಸ್ತವದ ವಂಚನೆ ಮತ್ತು ಆತ್ಮವಂಚನೆ. ಪರಂಪರೆ ಇರುವುದು ಅರ್ಥಮಾಡಿಕೊಳ್ಳುವುದಕ್ಕಾಗಿಯೇ ಹೊರತು ಆರಾಧನೆಗಲ್ಲ.' ಅಂದರೆ ನಾವು ಹಿಂದಿನ ಪುರಾಣಗಳಲ್ಲಿ ವಸ್ತು ವಿಚಾರಗಳನ್ನು ಹೆಕ್ಕಿ ತೆಗೆಯುತ್ತಾ ಅವುಗಳ ಆರಾಧಕರಾಗದೆ, ಅವುಗಳನ್ನು ಆಧಾರವಾಗಿ ಮಾಡಿಕೊಂಡು ಈ ಕಾಲದ ಕ್ರಿಯಾಶೀಲತೆಯನ್ನು ಬೆಳೆಸಿಕೊಳ್ಳಬೇಕು.

ಪುರೋಹಿತಷಾಹಿ ವ್ಯವಸ್ಥೆಯು ವ್ಯಾಪಕವಾಗಿ ಬೆಳೆದಂತೆಲ್ಲ ಜನಸಮುದಾಯಗಳು ಸಾಮಾಜಿಕ ಸ್ಥಾನಕ್ಕೆ ಧಕ್ಕೆಯಾಗದಂತೆ ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳಲು ಪುರಾಣಕಥೆಗಳ ಮೂಲಕ ದೇವತೆಗಳ ಚರಿತ್ರೆಗೆ ಮೆರುಗುಕೊಟ್ಟು ಸಮೀಕರಿಸಲಾಗುತ್ತದೆ. ಇದರಿಂದಾಗಿ ಮತೀಯ ಸಂಘರ್ಷಣೆಯು ಉಂಟಾಗುತ್ತದೆ. ಇದರ ಫಲವಾಗಿ ಪ್ರತಿಯೊಂದು ಮತದವರೂ ತಮ್ಮ ತಮ್ಮ ಮತ ಧರ್ಮಗಳಿಗೆ ಅನುಗುಣವಾಗಿ ದೇವತೆಗಳನ್ನು ಸೃಷ್ಟಿಸಿಕೊಂಡರು. ಹೀಗೆ ಹಲವು ವಾಸ್ತವಿಕ ಅದ್ಭುತ ಕಲ್ಪನೆಗಳನ್ನು ಮುತ್ತಿಕೊಂಡಿರುವ ಘಟನೆಗಳನ್ನು ಬಿಡಿಸಿದರೆ ಮಾನವನ ಪೂರ್ವ ಇತಿಹಾಸದ, ಅವನ ತಿಳುವಳಿಕೆಯ ಹಾಗೂ ಸಾಂಸ್ಕೃತಿಕ ಬದುಕಿನ ಮಗ್ಗಲುಗಳ ಸ್ವರೂಪ ಗೋಚರವಾಗುತ್ತದೆ.

ಪುರಾಣಗಳು ಪುರಾತನ ಕಾಲದಿಂದ ಸಾಗಿಬಂದಿರುವ ಸೃಷ್ಟಿಯ ವಿವರಣೆ. ಸಾಂಕೇತಿಕ ಕಟ್ಟುಕತೆ, ರೂಪಕ ಸಂಪ್ರದಾಯ. ಮತ, ಸಮಾಜ, ನಿಯಮ ಮೊದಲಾದವುಗಳ ಲೋಕಪ್ರಿಯ ನಿರೂಪಣೆಗಳಾಗಿರಬೇಕೆಂಬ ಮೂಲೋದ್ದೇಶದಿಂದ ಕೂಡಿದ್ದವು. ಎಲ್ಲಾ ಪುರಾಣಗಳಲ್ಲೂ ಕಂಡುಬರುವ ಪ್ರಮುಖ ಅಂಶಗಳು ಇವು. ಆದರೆ ಪುರಾಣ ಬೆಳವಣಿಗೆಗಳನ್ನೂ ಸೇರಿಸಿ ಪುರಾಣಗಳ ಅವಶ್ಯಕತೆ ಕಂಡುಬಂದಿದೆ. ಇದಕ್ಕೆ ಆಯಾಕಾಲದ ಪರಿಸ್ಥಿತಿ, ಸನ್ನಿವೇಶ ಮೊದಲಾದವು ಕಾರಣವೆನ್ನಬೇಕು. ಉದಾಹರಣೆಗೆ ಒಂದಾನೊಂದು ಕಾಲದಲ್ಲಿ ಭಾರತೀಯರ ಹೃದಯದಲ್ಲಿ ಸನಾತನ ವೈದಿಕ ಧರ್ಮವು ಆಳವಾಗಿ ಬೇರುಬಿಟ್ಟಿತ್ತು. ಆದರೆ ಬರಬರುತ್ತಾ ಧರ್ಮಾಚರಣೆಯಲ್ಲಿ ಜನರ ಆದರಪೂರ್ವಕವಾದ ಪ್ರವೃತ್ತಿ ಕುಂಠಿತವಾಗತೊಡಗಿತು. ದೈನಂದಿನ ವೈದಿಕ ಜೀವನದಲ್ಲಿ ಮೇಲ್ಮೆಯುಂಟಗಬೇಕಾದರೂ ಸಮಾಜದಲ್ಲಿ ಶಾಶ್ವತವಾದ ಸುಖ-ಸಂತೋಷ ಶಾಂತಿಗಳು ನೆಲಸಬೇಕಾದರೂ ಅನನ್ಯ ಭಾವದಿಂದ ಅವರವರ ಧರ್ಮಕ್ಕೆ ಶರಣು ಹೋಗುವುದು ಏಕೈಕ ಉಪಾಯವೆಂಬ ಭಾವನೆ ಅವರ ಮನಸ್ಸಿನಿಂದ ಜಾರತೊಡಗಿತು.

**ಐತಿಹ್ಯ**

ನಮ್ಮ ನಾಡಿನಲ್ಲಿ ಜಾನಪದ ಐತಿಹ್ಯ, ಆಖ್ಯಾಯಿಕೆ, ದಂತಕತೆ, ಪವಾಡ ಇವುಗಳಿಗೇನೂ ಕೊರತೆಯಿಲ್ಲ. ನಮ್ಮ ನಾಡಿನ ಗ್ರಾಮಗಳಲ್ಲಿ ಸಂಚರಿಸುತ್ತಾ, ಕಿವಿಗೊಟ್ಟು ಕೇಳುವವರಿಗೆ ಇಂತಹ ಸಂಗತಿಗಳು ಊರೂರಿಗೂ ಹೇರಳವಾಗಿ ದೊರಕುತ್ತವೆ. ಆ ಊರ ಸ್ಥಾಪನೆಯನ್ನು ಕುರಿತು ಒಂದು ದಂತ ಕತೆ ವಿವರಿಸುವುದಾದರೆ, ಇನ್ನೊಂದು ಅಲ್ಲಿಯ ಅರಸನೋ, ನಾಯಕನೋ ಆತನನ್ನು ಕುರಿತು ನಿವೇದಿಸುವುದು. ಒಂದು ಊರಲ್ಲಿಯ ಪೂರ್ವದ ದೇವಾಲಯ, ವಿಗ್ರಹ, ಕೋಟೆ, ಬಾವಿ, ಕೆರೆ ಮುಂತಾದವುಗಳ ವಿಷಯವನ್ನು ತಿಳಿಸುವ ಕತೆಗಳು ಕೆಲವು. ಅಲ್ಲಿಯ ಸಾಮಂತರಾದ ಜನಗಳ ಶೌರ್ಯ, ಪರಾಕ್ರಮ, ಔದಾರ್ಯ, ತ್ಯಾಗ ಮುಂತಾದ ಚರಿತ್ರೆಗಳನ್ನು ಹೇಳುವ ಕತೆಗಳು ಕೆಲವು. ರಾಮಾಯಣ, ಭಾರತ ಕಾಲದ ಪುಣ್ಯಶ್ಲೋಕ ಋಷಿಮುನಿಗಳ ಪ್ರವರ ಪುರುಷರ ವಾಸಸ್ಥಳವೆನಿಸುವ ಪವಿತ್ರ ಪ್ರದೇಶಗಳೂ ತೀರ್ಥಕ್ಷೇತ್ರಗಳೂ ನಮ್ಮ ನಾಡಿನಲ್ಲಿ ಅಲ್ಪವಾಗಿಲ್ಲ. ಇಂತಹ ಸತ್ಯತೆಯನ್ನು ಚಾರಿತ್ರಿಕ ದೃಷ್ಟಿಯಿಂದ ಅವುಗಳ ವಾಸ್ತವತೆಯನ್ನು ಕಂಡುಹಿಡಿಯುವುದು ಮನೋರಂಜಕವಾಗಿದ್ದರೂ ಸುಲಭ ಸಾಧ್ಯವಾಗಿಲ್ಲ.

ಈ ರೀತಿಯ ಅನ್ವೇಷಣೆಗಳನ್ನು ನಡೆಸಿದರೆ ಕೆಲವೊಂದು ಕತೆಯ ಸನ್ನಿವೇಶಗಳು ಅನೇಕ ಕಡೆಯಲ್ಲಿ ಒಂದೆ ತೆರನಾಗಿ ಇದ್ದಂತೆ ತೋರಿಬರುವುದು. ಉದಾ: ರಾಜ್ಯ ಸ್ಥಾಪನೆಯ ಸಂದರ್ಭ: ಇದರಲ್ಲಿ ಬೇಟೆನಾಯಿಗಳಿಂದ ಬೆನ್ನಹಟ್ಟಿಸಿಕೊಳ್ಳುವ ಮೊಲವು ಒಂದೆಡೆಗೆ ಬಂದು ಆ ಬೇಟೆನಾಯಿಗಳ ಮೇಲೆ ತಿರುಗಿ ನಿಲ್ಲುತ್ತದೆ. ಈ ಸ್ಥಳವು ಗಂಡುಭೂಮಿ ಎಂದು

ಮನವರಿಕೆಯಾಗಿ ಮುಂದೆ ಆ ಪ್ರದೇಶದಲ್ಲಿ ರಾಜ್ಯ ಸ್ಥಾಪನೆಯೂ ಆಗುತ್ತದೆ. ವಿಜಯನಗರದ ಸ್ಥಾಪನೆಯ ಐತಿಹ್ಯದಲ್ಲಿ ಈ ಕತೆ ಬರುವುದು. ವಿಜಯನಗರದ ತರುವಾಯ ಈಚೆಗೆ ಉದಯವಾದ ಕೆಲವು ಪಾಳೆಯ ರಾಜ್ಯದ ಸ್ಥಾಪನೆಯ ಚರಿತ್ರೆಯಲ್ಲಿಯೂ ಈ ಘಟನೆ ಸಂಭವಿದಂತೆ ಉಕ್ತವಾಗಿದೆ. ಇದರ ಮೇಲಿಂದ ಮೊಟ್ಟಮೊದಲು ಈ ಕತೆ ವಿಜಯನಗರದ ಕಾಲದಲ್ಲಿ ಮಾತ್ರ ಹುಟ್ಟಿತು. ಆದುದರಿಂದ ಅದರಲ್ಲಿ ನಿಜಾಂಶವು ಇದ್ದಿರಬೇಕು ಎಂದು ಊಹಿಸುವಂತಿಲ್ಲ. ಏಕೆಂದರೆ ವಿಜಯನಗರದ ಪೂರ್ವದ ಕಾಲದಿಂದಲೂ ಇಂತಹ ನಂಬುಗೆ ಪ್ರಚುರವಾಗಿರಬೇಕು ಎಂದು ಅನುಮಾನಿಸಲು ಅವಕಾಶವಿದೆ.

ಇದೇ ಮಾದರಿಯ ಇನ್ನೊಂದು ಐತಿಹ್ಯ ಇಂತಹನೊಬ್ಬ ಪುರುಷನು ಮುಂದೆ ಅರಸನಾಗುವನು ಎಂಬ ಮಾತಿಗೆ ಮುನ್ನಿನ ಸೂಚನೆಯಾಗಿ ಆತನು ಮಲಗಿದಾಗ ನಾಗರಹಾವು ಬಂದು ಆತನ ತಲೆಯ ಮೇಲೆ ತನ್ನ ಹೆಡೆಯ ಕೊಡೆಯನ್ನು ಹಿಡಿಯುವುದು. ಆ ಆಖ್ಯಾಯಿಕೆ ಕರ್ನಾಟಕದ ಕೆಲವು ಪಾಳೆಯಗಾರರ ಸಂಬಂಧದಲ್ಲಿ ನಿರೂಪಿಸಲಾದಂತೆ ಮಹಾರಾಷ್ಟ್ರ ಮಲ್ಹಾರರಾವ್ ಹೋಳಕರನ ವಿಷಯವಾಗಿಯೂ ಹೇಳಲಾಗಿದೆ. ಜಕಣಾಚಾರ್ಯರಿಂದ ಸ್ಥಾಪಿತವೆಂದು ಹೇಳುವ ಹಳೆಯ ದೇವಾಲಯಗಳಂತೂ ಊರೂರಿಗೆ ಎದ್ದು ಕಾಣುವಂತಿವೆ. ಇದೇ ಮೇರೆಗೆ ಶ್ರೀರಾಮಚಂದ್ರ, ಪಾಂಡವರು, ಜನಮೇಜಯ, ಹರಿಶ್ಚಂದ್ರ, ಬಾಣಾಸುರ ಮೊದಲಾದ ಪುರಾಣ ಪುರುಷರೊಡನೆ ನಂಟನ್ನು ಬೆಳೆಸುವ ಅನೇಕ ಅಖ್ಯಾಯಿಕೆಗಳು ಅಲ್ಲಿ ಇಲ್ಲಿ ಬಾಳಿಕೊಂಡಿವೆ.

ಈ ವಿಧವಾದ ಕತೆಗಳು ಕೇವಲ ಈಚೆಯ ಕಾಲದಲ್ಲಿ ಹುಟ್ಟಿ ಬೆಳೆದ ಪವಾಡಗಳಲ್ಲ. ಇವುಗಳಲ್ಲಿ ಕೆಲವು ಸಾಹಿತ್ಯ ಗ್ರಂಥಗಳಲ್ಲಿ ಸೇರಿಕೊಳ್ಳುವ ಗೌರವವನ್ನು ಪಡೆದಿವೆ. ಇಂತಹವುಗಳನ್ನು ನಮ್ಮ ಪುರಾಣ ಕಾವ್ಯಗಳಲ್ಲಿ ಗುರುತಿಸಿ ಆಯ್ದುಕೊಳ್ಳಬಹುದು. ರುಚಿರಕಲ್ಪನಾ ವಿಹಾರಕ್ಕೆ ಅನುಕೂಲ ಕ್ಷೇತ್ರವಾದ ಕಾವ್ಯಗಳಲ್ಲಿ ಇವುಗಳ ದರ್ಶನ ಪಡೆಯುವುದು ಅಷ್ಟೇನು ಅಚ್ಚರಿಯಲ್ಲ. ಆದರೆ ಕೇವಲ ಚಾರಿತ್ರಿಕ ಸಂಗತಿಗಳನ್ನು ನಿರೂಪಿಸಲಿಕ್ಕೆಂದು ನಿರ್ಮಿತವಾದ ಹಲವು ಶಿಲಶಾಸನಗಳಾದರೂ ೧೧-೧೨ನೆಯ ಶತಮಾನದಷ್ಟು ಪ್ರಾಚೀನ ಕಾಲದವು. ಇದರ ಮೇಲಿಂದ ಇಂತಹ ಐತಿಹ್ಯಗಳ ಬೇರುಗಳು ಕಾಲದ ಉದರದಲ್ಲಿ ಎಷ್ಟು ಆಳವಾಗಿಯೂ ಹರವಾಗಿಯೂ ಹರಡಿಕೊಂಡು ತಲತಲಾಂತರಗಳಿಂದ ಜನಜನಿತವಾಗಿ ಬಂದಿವೆ ಎಂಬುದು ನಿದರ್ಶನವಾಗುತ್ತವೆ. ಇವುಗಳ ಮೂಲಕ ನಮ್ಮ ಸಂಸ್ಕೃತಿ ಎಷ್ಟು ಪ್ರಾಚೀನವೂ ಅಪರಿವರ್ತನಶೀಲವೂ ಆಗಿದೆ ಎಂಬುದು ಚೆನ್ನಾಗಿ ಪ್ರಕಾಶಿತವಾಗುತ್ತದೆ.

ಐತಿಹ್ಯ ಹಾಗೂ ಪುರಾಣಕ್ಕೂ ಇರುವ ಮೇರೆಯನ್ನು ಗುರುತಿಸುವುದು ಕಷ್ಟ. ಇವೆರಡರ ನಡುವಿನ ಸಂಬಂಧವು ಸಮಸ್ಯಾತ್ಮಕವಾದುದು. ಪುರಾಣ ಕತೆಯ ಪ್ರಧಾನ ಪಾತ್ರಗಳು

ದೇವತೆಗಳು ಮತ್ತು ಪ್ರಕೃತಿ ಶಕ್ತಿಗಳು. ಉದ್ದೇಶವಿವರಣೆ ಐತಿಹ್ಯಗಳು ಪ್ರಾಚೀನ ವೀರರನ್ನು ಕುರಿತವು. ಈ ವೀರರ ಕತೆಗಳು ಆಗಾಗ್ಗೆ ಪೌರಾಣಿಕ ಹಾಗೂ ಭ್ರಾಮಕ ಅಂಶಗಳನ್ನು ಒಳಗೊಂಡಿರುತ್ತವೆ; ಸತ್ಯಾಂಶವೆಲ್ಲಿ ಕೊನೆಗೊಳ್ಳುತ್ತದೆ ಮತ್ತು ಕಲ್ಪನೆ ಎಲ್ಲಿ ಪ್ರಾರಂಭವಾಗುತ್ತದೆ ಎಂಬುದನ್ನು ತೀರ್ಮಾನಿಸಲು ಕೆಲವು ಸಾರಿ ಅಸಾಧ್ಯವಾಗಬಹುದು. ಆದರೆ ಐತಿಹ್ಯಗಳು ಸಾಕಷ್ಟು ಪ್ರಮಾಣದ ವಾಸ್ತವಿಕ ಅಥವಾ ಚಾರಿತ್ರಿಕ ಸತ್ಯದ ಆಧಾರಗಳ ಮೇಲೆ ರೂಪಿತವಾಗಿರುತ್ತವೆ ಎಂಬುದನ್ನು ಮರೆಯಬಾರದು. "ಪುರಾಣ-ಐತಿಹ್ಯಗಳು ಒಂದೇ ನಾಣ್ಯದ ಎರಡು ಮುಖಗಳು. ಎರಡಕ್ಕೂ ನಿಟಕ ಸಂಬಂಧ. ಐತಿಹ್ಯ ಜನರು ನಂಬಿದ ಇತಿಹಾಸವಾದರೆ, ಪುರಾಣ ಪವಿತ್ರವೆಂದು ಭಾವಿಸಿದ ಸತ್ಯ ಕಥನ. ಹಿಂದೆಂದೋ ನಡೆಯಿತೆಂದು ಹೇಳಲಾದ ಘಟನೆಗಳ ಸುತ್ತ ಹುಟ್ಟಿಕೊಳ್ಳುವ ಕಟ್ಟು ಕತೆಗಳೇ ಐತಿಹ್ಯಗಳು. ನಡೆಯಿತೆನ್ನಲಾದ ಘಟನೆಗಳನ್ನು ಮರೆಮಾಚಿ ಅದರೊಂದಿಗೆ ದೈವಿಕ ಅಂಶಗಳು ಬೆರೆತು, ಪವಾಡಗಳು ವಿಜೃಂಭಿಸಿ ಅದ್ಭುತವಾಗಿ ಬೆಳೆದು ಅವೆಲ್ಲವೂ ಎಂದೋ ಒಂದು ಕಾಲದಲ್ಲಿ ನಡೆದವುಗಳೇ ಎಂಬ ಭ್ರಮೆಯನ್ನು ಹುಟ್ಟಿಸುವ ಕಥೆಗಳೇ ಪುರಾಣಗಳು".[೧೧]

ಐತಿಹ್ಯ ಹಾಗೂ ಪುರಾಣದ ಸಂಬಂಧ ಅನನ್ಯವಾದುದು. ಜರುಗಿದ ಘಟನೆಗಳ ಕಥಾನಕ ನಿರೂಪಣೆಯು ಐತಿಹ್ಯ. ಹಳೆಯದಾದ ಬಹು ಪ್ರಾಚೀನದಲ್ಲಿ ನಡೆದಿದೆ ಎನ್ನಲಾದ ನಿರೂಪಣೆಯು ಪುರಾಣ. ಐತಿಹ್ಯವು ವಾಸ್ತವ ಘಟನೆಗಳೊಂದಿಗೆ ಹುಟ್ಟಿಕೊಂಡಿರುತ್ತದೆ. ಪುರಾಣವು ಲೌಕಿಕ ಹಾಗೂ ಅಲೌಕಿಕ ವಿಚಾರಗಳನ್ನು ತಿಳಿಸುತ್ತಾ ಐತಿಹ್ಯಕ್ಕಿಂತ ಪವಿತ್ರತೆಯನ್ನು ಕಾಪಾಡಿಕೊಳ್ಳುತ್ತದೆ. ಆರಂಭದಲ್ಲಿ ಯಾವುದೇ ಒಂದು ಸ್ಥಳ, ಒಂದು ಘಟನೆ, ಒಬ್ಬ ವ್ಯಕ್ತಿಯ ಬಗೆಗೆ ಐತಿಹ್ಯ ಹುಟ್ಟಿಕೊಂಡು, ನಂತರ ಕಾಲದಲ್ಲಿ ಆ ಸ್ಥಳ, ಆ ಘಟನೆ ಮತ್ತು ಆ ವ್ಯಕ್ತಿಯ ಬಗ್ಗೆ ಪೂಜ್ಯಭಾವನೆ ಹುಟ್ಟಿಕೊಂಡರೆ ಅದು ಪುರಾಣದ ಸ್ವರೂಪವನ್ನು ಪಡೆದುಕೊಳ್ಳುತ್ತದೆ.

ಐತಿಹ್ಯ ಎಂದರೆ ಮನುಷ್ಯನು ವಾಸ್ತವವಾಗಿ ನಡೆದಿದೇ ಎಂದು ನಂಬಿಕೊಂಡು ಬಂದಿರುವ ಘಟನೆಯೊಂದರ ಕಥೆ. ಹಿಂದೆ ನಡೆದಿರಬಹುದಾದ ಘಟನೆಯೊಂದಕ್ಕೆ ಕಲಾತ್ಮಕತೆಯ ರೂಪಕೊಟ್ಟು ಹೆಣೆದಿರಬಹುದಾದ ಪ್ರಕಾರವಿದು. ಐತಿಹ್ಯಗಳು ಇತಿಹಾಸದ ಸ್ಪರ್ಶದಿಂದ ಕೂಡಿರುತ್ತವೆ. ಯಾವುದೋ ಕಾಲದಲ್ಲಿನ ಒಂದು ಚಾರಿತ್ರಿಕ ಘಟನೆಯನ್ನಾಧರಿಸಿ ಹುಟ್ಟಿಕೊಂಡ ಅದ್ಭುತವಾದ ಸನ್ನಿವೇಶಗಳು ಬೆಳೆದು, ಅವು ಮೌಖಿಕ ಪರಂಪರೆಯ ಮೂಲಕ ಹರಿಯುವ ಕಥೆಯಾಗಿ ರೂಪಗೊಂಡರೆ ಅಂಥವನ್ನು ಐತಿಹ್ಯ ಎಂದು ಕರೆಯಬಹುದು. ಒಂದು ರೀತಿಯಲ್ಲಿ ಇದು ಪೂರ್ವ ಕಾಲದ ಜನ ರೂಢಿಸಿಕೊಂಡಿರುವ ಇತಿಹಾಸ. ಅತ್ಯಂತ ಸರಳವಾಗಿ ಐತಿಹ್ಯವನ್ನು ಗುರುತಿಸುವುದೆಂದರೆ ಒಂದು ಸಂಗತಿಯನ್ನು ವಿವರಿಸುತ್ತಾ ಅದಕ್ಕೆ ಪೂರಕವಾದ ಸಾಕ್ಷಿಯೊಂದನ್ನು ಒದಗಿಸುವುದು. ಉದಾ: ವಿಜಯನಗರದ ಅರಸ ಸದಾಶಿವರಾಯನು ತನ್ನ

ಧರ್ಮಪತ್ನಿಯಾದ ನಾಗಲಾದೇವಿಯೊಂದಿಗೆ ಗರಗ ನಾಗಲಾಪುರ ಪ್ರದೇಶದಲ್ಲಿ ಬೇಟೆಗಾಗಿ ಬಂದಿದ್ದ. ಬೇಟೆಯಾಡಿ ವಿಶ್ರಾಂತಿ ಪಡೆಯಲು ಅಲ್ಲಿಯೇ ಇದ್ದ ಮರದ ನೆರಳಿನಲ್ಲಿ ತಂಗಿದ್ದರು. ನಿದ್ರಾವಸ್ಥೆಯಲ್ಲಿದ್ದ ರಾಣಿ ನಾಗಲಾದೇವಿಯು ಸ್ವಪ್ನವೊಂದನ್ನು ಕಾಣುತ್ತಾಳೆ. ಆ ಸ್ವಪ್ನದಲ್ಲಿ ಒಬ್ಬ ಸಾಧುವು ದರ್ಶನವಿತ್ತು ತಾನು ಒಪ್ಪತ್ತೇಶ್ವರ ಸ್ವಾಮಿ ಎಂದು, ನಾನು ಬಹಳ ವರ್ಷಗಳ ಹಿಂದೆಯೇ ಇಲ್ಲಿ ಸಮಾಧಿ ಹೊಂದಿದ್ದೇನೆಂದು ಹೇಳಿ ಅದೃಶ್ಯನಾದನು. ಎಚ್ಚತ್ತ ರಾಣಿಯು ಈ ವಿಷಯವನ್ನು ರಾಜನಿಗೆ ತಿಳಿಸಿ ಆ ಸ್ಥಳದಲ್ಲಿ ಒಪ್ಪತ್ತೇಶ್ವರ ಸ್ವಾಮಿಯ ಹೆಸರಿನಲ್ಲಿ ದೇವಾಲಯವೊಂದನ್ನು ನಿರ್ಮಿಸುವಂತೆ ಕೇಳಿಕೊಳ್ಳುತ್ತಾಳೆ. ಸಮ್ಮತಿಯಿತ್ತ ರಾಜನು ಅಲ್ಲಿ ದೇವಾಲಯವೊಂದನ್ನು ನಿರ್ಮಿಸುತ್ತಾರೆ. ಈ ದೇವಾಲಯ ನಿರ್ಮಾಣಕ್ಕೆ ಕಾರಣಳಾದ ರಾಣಿ ನಾಗಲದೇವಿಯ ಹೆಸರೇ ಮುಂದೆ ಈ ಗ್ರಾಮಕ್ಕೆ ನಾಗಲಾಪುರ ಎಂದು ಹೆಸರು ಬರಲು ಕಾರಣವಾಯಿತು ಎಂದು ಇಲ್ಲಿನ ಐತಿಹ್ಯ ಹೇಳುತ್ತದೆ.

ಹೀಗೆ ನಿರ್ಮಿತವಾದ ಐತಿಹ್ಯಗಳನ್ನು ಸ್ವೀಕರಿಸುವುದಾಗಲೀ, ತಿರಸ್ಕರಿಸುವುದಾಗಲೀ ಅಷ್ಟು ಸುಲಭವಾದುದಲ್ಲ. ಹೆಚ್ಚಾಗಿ ಐತಿಹ್ಯಗಳು ಪವಾಡ ಸಾದೃಶ್ಯವಾದ ಅದ್ಭುತ ಅಂಶಗಳನ್ನು ವಿವರಿಸುತ್ತವೆ. ಅಂದ ಮಾತ್ರಕ್ಕೆ ಇಲ್ಲಿ ವಾಸ್ತವಾಂಶ ಇದ್ದೇ ಇರುತ್ತದೆ ಎಂಬುದನ್ನು ಕಡೆಗಾಣಿಸುವಂತಿಲ್ಲ. ಆದರೆ ಯಾವುದೋ ಸಂಗತಿಯೊಂದು ಬೆಳೆದು ಕಟ್ಟುಕಥೆಯೂ ಆಗಲೂಬಹುದು. ಹೊಸಪೇಟೆ ಹತ್ತಿರ ಇರುವ ಹಿಪ್ಪತ್ತೇರಿ ಗ್ರಾಮದ ನೀಲಮ್ಮನಿಗೆ ಸಂಬಂಧಿಸಿದ ಐತಿಹ್ಯವು ಇದಕ್ಕೆ ನಿದರ್ಶನವಾಗಿದೆ. ನೀಲಮ್ಮನು ಕುರುಗೋಡು ದೊಡ್ಡಬಸವೇಶ್ವರನ ಹೆಂಡತಿ. ಟಿಪ್ಪುಸುಲ್ತಾನನು ಮಾತಾಡದ ದೇವರುಗಳನ್ನು(ಮೂರ್ತಿಗಳನ್ನು) ನಾಶಪಡಿಸುತ್ತಿದ್ದನಂತೆ. ಇದರಿಂದ ಭೀತಿಗೊಂಡ ನೀಲಮ್ಮನು ಕುರುಗೋಡನ್ನು ಬಿಟ್ಟು ಹಿಪ್ಪತ್ತೇರಿ ಗ್ರಾಮಕ್ಕೆ ಬಂದು ನೆಲೆಸಿದಳೆಂದು ಐತಿಹ್ಯವಿದೆ. ಕುರುಗೋಡು ದೊಡ್ಡಬಸವೇಶ್ವರನ ಚರಿತ್ರೆಯು ವಿಜಯನಗರ ಕಾಲಕ್ಕಿಂತಲೂ ಪೂರ್ವದ್ದು. ಆದರೆ ಟಿಪ್ಪುಸುಲ್ತಾನನು ಆಳ್ವಿಕೆ ಮಾಡಿದ್ದು ೧೮ನೇ ಶತಮಾನದ ಕೊನೆಯ ಭಾಗದಲ್ಲಿ. ಮೇಲಾಗಿ ಟಿಪ್ಪುವು ಈ ಭಾಗಕ್ಕೆ ಆಕ್ರಮಣ ಮಾಡಿದ್ದು ಚರಿತ್ರೆಯಲ್ಲಿ ಎಲ್ಲಿಯೂ ಉಲ್ಲೇಖವಿಲ್ಲ. ಹೀಗೆ ಇದ್ದ ಚರಿತ್ರೆಯೇ ಬೇರೆ, ಕಲ್ಪಿತವಾದ ಐತಿಹ್ಯವೇ ಬೇರೆ ಎನ್ನುವುದು ಸ್ಪಷ್ಟ.

"ಐತಿಹ್ಯ ಇತಿಹಾಸದಿಂದ ಬಹುದೂರ ಸಾಗಿರುತ್ತದೆ. ಹಾಗೆಂದು ಅದು ಪೂರ್ತಿ ಕಲ್ಪಿತ ದಂತಕತೆಯೂ ಅಲ್ಲ. ಎಲ್ಲೋ ಯಾವಾಗಲೋ ಘಟಿಸಿದ ಒಂದು ಘಟನೆ ಅಥವಾ ಒಂದು ಸ್ಥಳದ ವೈಶಿಷ್ಟ್ಯ ಅಥವಾ ವ್ಯಕ್ತಿಯೊಬ್ಬನ ಸಾಧನೆ, ಆ ಪರಿಸರದ ವ್ಯಕ್ತಿಗಳ ಮೇಲೆ ಪ್ರಭಾವ ಬೀರಿರುತ್ತದೆ. ಈ ಪ್ರಭಾವವೇ ಪರಿಣಾಮವಾಗಿ ಅವರಲ್ಲೊಬ್ಬ ಪ್ರತಿಭಾಶಾಲಿ ಆ ನಿರ್ದಿಷ್ಟ ಘಟನೆಗೆ ಅಥವಾ ಸ್ಥಳಕ್ಕೆ ಅಥವಾ ವ್ಯಕ್ತಿಗೆ ತನ್ನ ಕಲ್ಪನೆಯ ವೈಭವೀಕರಣದ ಅಂಶಗಳನ್ನು

ಸೇರಿಸಿ ಬಿಡುತ್ತಾನೆ. ಆ ಪರಿಷ್ಕೃತ ಅಂಶಗಳನ್ನು ಹರಡುತ್ತಾನೆ. ಹೀಗೆ ಒಂದು ಘಟನೆಗೆ ಅಥವಾ ಸ್ಥಳಕ್ಕೆ ಅಥವಾ ಒಂದು ವ್ಯಕ್ತಿಗೆ ಸಂಬಂಧಿಸಿದ ಐತಿಹ್ಯ ಉಂಟಾಗುತ್ತದೆ".[೧೨] ಐತಿಹ್ಯಗಳು ಇತಿಹಾಸದ ಮುರಿದ ಚೂರುಗಳಾಗಿ ಚರಿತ್ರೆಯ ನಿರ್ಮಾಣಕ್ಕೆ ಸಹಾಯಕವಾಗುತ್ತವೆ. ಚರಿತ್ರೆಕಾರರು ಸಂದಿಗ್ಧ ಸ್ಥಿತಿಯಲ್ಲಿದ್ದಾಗ ಐತಿಹ್ಯಗಳು ಒಂದೊಂದು ಸಲ ಸ್ಪಷ್ಟವಲ್ಲದಿದ್ದರೂ ಅಸ್ಪಷ್ಟ ಬೆಳಕನ್ನು ಚೆಲ್ಲಿ ಸಂಶೋಧನೆಗೆ ನೆರವಾಗುತ್ತವೆ. ಹೀಗಾಗಿ ಇತಿಹಾಸದ ಮೇಲೆ ಹೆಚ್ಚಿನ ಬೆಳಕು ಚೆಲ್ಲುವ ಐತಿಹ್ಯಗಳು ಐತಿಹಾಸಿಕ ಮಹತ್ವವನ್ನು ಪಡೆಯುತ್ತವೆ. ನಮ್ಮಲ್ಲಿ ಪ್ರಾಚೀನ ವೀರರ, ಅರಸರ, ಸಾಧನೆ, ಬಿರುದು, ಲಾಂಛನ, ಯುದ್ಧ, ದೇವಾಲಯ, ಸ್ಥಳ ಮುಂತಾದವುಗಳಿಗೆ ಸಂಬಂಧಪಟ್ಟ ಐತಿಹ್ಯಗಳು ದೊರೆಯುತ್ತವೆ. ಇವೆಲ್ಲಾ ಸಾಮೂಹಿಕ ಆಧಾರದ ಮೇಲೆ ನಿಂತು ಒಟ್ಟುಗೂಡಿ ಸೃಷ್ಟಿಯಾಗಿ ಇತಿಹಾಸವೆನಿಸಿವೆ.

ಒಂದು ವಸ್ತು, ಘಟನೆ ಇಲ್ಲವೆ ಒಬ್ಬ ವ್ಯಕ್ತಿಯ ಕುರಿತು ಪ್ರಚಲಿತವಿರುವ ಐತಿಹ್ಯವನ್ನು ಸಂಪೂರ್ಣ ಸತ್ಯವೆನ್ನಲೂಬಾರದು. ಪೂರ್ಣ ಮಿಥ್ಯವೆಂದೂ ಹೇಳಲಿಕ್ಕಾಗದು. ಇವು ಒಂದು ಕಾಲಕ್ಕೆ ಸತ್ಯ ಕಥೆಗಳೇ. ಸತ್ಯ ಕಥೆಗಳ ಸುತ್ತ ಹುಟ್ಟಿಕೊಳ್ಳುವ ಅನೇಕ ಉಪಕಥೆಗಳಿಂದಾಗಿ ಕಟ್ಟುಕಥೆಗಳಾಗಬಹುದು. ಇನ್ನೊಂದೆಡೆ ಅತಿಶಯೋಕ್ತಿ, ಮುಗ್ಧಭಕ್ತಿ, ದೈವ-ಧಾರ್ಮಿಕತೆ ಮುಂತಾದವುಗಳ ಪರಿಣಾಮದಿಂದಲೂ ಸಹ ಐತಿಹ್ಯಗಳು ಸೃಷ್ಟಿಯಾಗಿ ಅದರಲ್ಲಿ ಯಾವ ಹುರುಳಿಲ್ಲದೆಯೂ ಹೋಗುವ ಸಾಧ್ಯತೆ ಇರುತ್ತದೆ.

ಒಬ್ಬ ವ್ಯಕ್ತಿ ತನ್ನಲ್ಲಿರುವ ವಿಶಿಷ್ಟ ಶಕ್ತಿಯಿಂದ ಇತರರು ಮಾಡದ ಕಾರ್ಯವನ್ನು ಮಾಡಿ ತೋರಿಸಿದಾಗ ಜನ ಆತನಲ್ಲಿ ಭಯ, ಭಕ್ತಿ, ನಿಷ್ಠೆ ತಾಳುತ್ತಾರೆ. ನಂತರದಲ್ಲಿ ಅತಿಶಯೋಕ್ತಿ ಕಥೆಗಳನ್ನು ಆತನ ಹೆಸರಿನಲ್ಲಿ ಕಟ್ಟಿ ಐತಿಹ್ಯ ಸೃಷ್ಟಿಸುತ್ತಾರೆ. ಹಾಗೆಯೇ ಒಂದು ಸ್ಥಳದಲ್ಲಿ ಒಂದು ವಿಶೇಷತೆ ಜರುಗಿ, ಜನರು ಅದನ್ನು ನಂಬಿ ಆ ಸ್ಥಳವನ್ನು ಪವಿತ್ರ ಸ್ಥಳವನ್ನಾಗಿಸುತ್ತಾರೆ. ಆ ಹೆಸರಿನಲ್ಲಿ ಆನೇಕ ಐತಿಹ್ಯಗಳನ್ನು ರಚಿಸುತ್ತಾರೆ. ಕನಸುಗಳು, ಮನೋವಿಕಾರಗಳೂ ಸಹ ಐತಿಹ್ಯಗಳ ಜನನಕ್ಕೆ ಕಾರಣವಾಗಬಹುದು. ಇಂದಿಗೂ ನಂಬಿಕೊಂಡ ಬಂದಿರುವ ದೆವ್ವ, ಪಿಶಾಚಿ, ರಾಕ್ಷಸ, ಕಿನ್ನರ, ಆತಿಮಾನುಷ ವ್ಯಕ್ತಿ ಮುಂತಾದ ಕಲ್ಪನೆಗಳು ಐತಿಹ್ಯಗಳ ಹುಟ್ಟಿಗೆ ಕಾರಣೀಭೂತವಾಗುತ್ತವೆ. ಒಂದು ಕಾಲದ ಸಮಾಜ ಐತಿಹ್ಯಗಳನ್ನು ಸೃಷ್ಟಿಸಿದರೆ, ಇನ್ನೊಂದು ಕಾಲದ ಸಮಾಜ ಅವುಗಳನ್ನು ಪೋಷಿಸುತ್ತಾ ಬಂದಿದದ್ದರ ಪರಿಣಾಮವಾಗಿ ಅನೇಕ ಐತಿಹ್ಯಗಳು ಇಂದಿಗೂ ನಮ್ಮ ಮಧ್ಯದಲ್ಲಿವೆ. "ಇಂತಹ ಐತಿಹ್ಯದ ಸೃಷ್ಟಿಯಲ್ಲಿ ಉಪಲಬ್ದ ದಾಖಲೆಗಳನ್ನು ಬಳಸಿಕೊಳ್ಳಲಾಗುತ್ತದೆ. ಆದರೆ ಇವು ನೈಜ ಚರಿತ್ರೆಯಾಗಲು ಬೇಕಾದ ವಸ್ತು ನಿಷ್ಠುರತೆಯಿಂದ, ವೈಜ್ಞಾನಿಕ ದೃಷ್ಟಿಕೋನದಿಂದ ದೂರಸರಿದು ಕಲ್ಪನೆಯ ಆಶ್ರಯವನ್ನು

ಪಡೆದು ಕಾವ್ಯದ ಧಾಟಿಯಲ್ಲಿ ಸಾಗುತ್ತವೆ. ಭಾವುಕತೆ ವಿಜೃಂಭಿಸುತ್ತದೆ. ಅಂದಾಗಲೂ ನಡೆದಿರಬಹುದಾದ ಘಟನೆಯೊಂದು ಅದರ ತಳಭಾಗದಲ್ಲಿ ರೂಪಾಂತರಗೊಳ್ಳದೇ ಇರುವುದುಂಟು. ಸಂಭವ್ಯ ಅಂಶಗಳು ಮೇಲಿಂದ ಮೇಲೆ ಸೇರುತ್ತಿದ್ದರೂ ಮೂಲ ಸತ್ಯ ಪೂರ್ಣ ನಾಶವಾಗುವುದಿಲ್ಲ. ಕಲಾಕೃತಿಯೊಂದರಲ್ಲಿ ನಡೆಯುವಂತೆ ಪೂರ್ಣವಾಗಿ ಹೊಸ ಮೈಯನ್ನು ಪಡೆಯುವುದಿಲ್ಲ. ಅಂದರೆ ಪ್ರಾಚೀನ ಕಾಲದ ಚಾರಿತ್ರಿಕ ಸಂಗತಿಯೊಂದು ಕ್ರಮೇಣ ಅಪೂರ್ವವೂ ಅದ್ಭುತವೂ ಆದ ಸನ್ನಿವೇಶಗಳನ್ನು ಒಳಗೊಳ್ಳುತ್ತ ತಲೆಮಾರುಗಳ ಮೂಲಕ ಹರಿದು ಬರಿವಾಗ ಒಂದು ಹಂತದಲ್ಲಿ ಐತಿಹ್ಯ ನಿಧಾನವಾಗಿ ರೂಪಗೊಳ್ಳುತ್ತಾ ಸಾಗಿ ಕೊನೆಗೆ ನಿರ್ದಿಷ್ಟ ಆಕೃತಿಯನ್ನು ಪಡೆದು ಗಟ್ಟಿಯಾಗುತ್ತದೆ".[೧೩]

ಸತ್ಯ ಘಟನೆಗಳೆಲ್ಲವೂ ಐತಿಹ್ಯಕ್ಕೆ ವಸ್ತುವಾಗಲಾರವು. ಅವು ಸಾಮಾನ್ಯದವುಗಳಿಗಿಂತ ಕೊಂಚ ಭಿನ್ನವಾಗಿದ್ದು ವಿಶಿಷ್ಟವಾಗಿರಬೇಕು. ಇಲ್ಲವೆ ಅಸಾಮಾನ್ಯವಾಗಿರಬೇಕು. ಸಾಮಾನ್ಯ ವಿಷಯಗಳಿಗಿಂತ ಅಸಾಮಾನ್ಯವಾಗಿರುವುದು ಯಾವುದೇ ಆಗಿದ್ದರೂ ಅದು ತನ್ನ ಇರುವಿಕೆಯ ಸ್ಥಿತಿಯಲ್ಲಿಯೇ ಜನರ ಮೇಲೆ ಪ್ರಭಾವ ಬೀರಲು ಸಮರ್ಥವಾಗಿರುತ್ತದೆ. ವ್ಯಕ್ತಿ, ಸ್ಥಳ ಮತ್ತು ಕಾಲ ಈ ಮೂರರಲ್ಲಿ ಅಸಾಮಾನ್ಯತ್ವವನ್ನು ಗುರುತಿಸಬಹುದಾಗಿದೆ. ಸಾಮಾನ್ಯರಿಗಿಂತ ವಿಶೇಷ ಶಕ್ತಿವಂತ ಇಲ್ಲವೆ ಪ್ರತಿಭಾಶಾಲಿ ವ್ಯಕ್ತಿ, ಸಾಮಾನ್ಯ ಜೀವನದಲ್ಲಿನ ಕಾಲಕ್ಕಿಂತ ವಿಶಿಷ್ಟ ಅರ್ಥಪೂರ್ಣವಾದ ಕಾಲ ಇಂತವುಗಳು ಐತಿಹ್ಯದಲ್ಲಿ ಸ್ಥಾನ ಪಡೆಯುತ್ತವೆ. ಪುರಾಣ ವ್ಯಕ್ತಿಗಳು ಸಾಮಾನ್ಯರಿಗಿಂತ ವಿಶಿಷ್ಟರೆಂದು ಗ್ರಹಿಸಿಕೊಂಡಿದ್ದರಿಂದ ಅವರಿಗೆ ಐತಿಹ್ಯದಲ್ಲಿ ವಿಶೇಷ ಸ್ಥಾನವಿದೆ.

ಐತಿಹ್ಯ ಮತ್ತು ಆಚರಣೆಗಳಿಗೆ ಒಂದು ಬಗೆಯ ಪೂರಕ ಸಂಬಂಧವಿದೆ. ಇದಕ್ಕೆ ಸಂಬಂಧಿಸಿದಂತೆ ವಿಜಯ ದಶಮಿಯ ಹಬ್ಬವನ್ನು ನೋಡಬಹುದಾಗಿದೆ. ಪಾಂಡವರು ವನವಾಸ ಮುಗಿಸಿದ ನಂತರ ಒಂದು ವರ್ಷದ ಅಜ್ಞಾತ ವಾಸ ಕೈಗೊಳ್ಳಬೇಕಾದಾಗ, ತಮ್ಮ ಆಯುಧಗಳನ್ನು ಬನ್ನಿ ಮರದಲ್ಲಿ ಇಟ್ಟು ಹೋದರಂತೆ. ಒಂದು ವರ್ಷದ ಅಜ್ಞಾತ ವಾಸವನ್ನು ಮುಗಿಸಿದ ನಂತರ ಬನ್ನಿ ಮರದಲ್ಲಿಟ್ಟಿದ್ದ ಆಯುಧಗಳನ್ನು ವಿಜಯದಿಂದ ತೆಗೆದುಕೊಂಡರು. ಅದರ ಸಂಕೇತವಾಗಿ ಬನ್ನಿ ಅಥವಾ ವಿಜಯದಶಮಿ ಹಬ್ಬವನ್ನು ಆಚರಿಸಲಾಗುತ್ತದೆ. ಇಲ್ಲಿ ಆಚರಣೆ ಮತ್ತು ಐತಿಹ್ಯ ಎರಡೂ ಕೂಡಿಕೊಂಡಿರುವುದನ್ನು ಕಾಣುತ್ತೇವೆ. ಪಾಂಡವರು ಬನ್ನಿಯ ಮರದಲ್ಲಿ ಆಯುಧಗಳನ್ನಿಟ್ಟಿದ್ದು ಐತಿಹ್ಯವಾದರೆ; ಅದರ ಸಂಕೇತದಲ್ಲಿ ಬಹು ಕಾಲದಿಂದಲೂ ರೂಢಿಸಿಕೊಂಡು ಬಂದಿರುವ ವಿಜಯ ದಶಮಿ ಹಬ್ಬ ಆಚರಣೆಯಾಗುತ್ತದೆ. ಇದರಂತೆ ಗಜಗೌರಿ ವ್ರತ, ಹುಲಿಗಿಯ ಹುಲಿಗೆಮ್ಮ, ಹೊಸೂರಮ್ಮ, ಪಟ್ಟಣದ ಯಲ್ಲಮ್ಮ, ಪಾಪಿನಾಯಕನಹಳ್ಳಿ ಅಂಕಲಮ್ಮ ಮುಂತಾದವುಗಳನ್ನು ನೋಡಬಹುದಾಗಿದೆ.

ಐತಿಹ್ಯಗಳಲ್ಲಿ ಕಂಡುಬರುವ ಇನ್ನೊಂದು ಮುಖ್ಯ ಅಂಶವೆಂದರೆ ಸಾಮಾಜಿಕ ಬದುಕಿಗೆ ನೈತಿಕ ಮೌಲ್ಯಗಳನ್ನು ಮತ್ತು ಕೆಳ ಸಮುದಾಯಗಳ ಅಥವಾ ಶ್ರಮಿಕ ವರ್ಗದವರಿಗಾದ ಅನ್ಯಾಯವನ್ನು ಸಾಂಸ್ಕೃತಿಕ ನೆಲೆಯ ಮೂಲಕ ಕಟ್ಟಿಕೊಡುತ್ತವೆ. ಜನಸಾಮಾನ್ಯರಲ್ಲಿ ನಡೆದ ಅನೇಕ ಘಟನಾವಳಿಗಳನ್ನು ಸಮಾಜದಲ್ಲಿನ ಪ್ರಮುಖ ವರ್ಗಗಳು ಮುಚ್ಚಲು ಯತ್ನಿಸುತ್ತವೆ. ಆದರೆ ಅಂತಹ ಘಟನೆಗಳು ಜನಮಾನಸದಿಂದ ಜಾರಿ ಹೋಗಲು ಸಾಧ್ಯವಿಲ್ಲ. ಅಂಥವುಗಳಲ್ಲಿ ಕೆಲವರ್ಗದ ಅಥವಾ ಅನ್ಯಾಯಕ್ಕೊಳಗಾದವರ ಬಗೆಗಿನ ವಿವರಗಳು ದೊರೆಯುತ್ತವೆ. ಮಹಿಳೆಯರನ್ನು ದೇವರ ಹೆಸರಿನಲ್ಲಿ ದೇವದಾಸಿಯರನ್ನಾಗಿಸುವುದು, ಕೆರೆ, ಕೋಟೆ ಕೊತ್ತಲುಗಳನ್ನು ಕಟ್ಟುವಾಗ ಅಮಾಯಕರ ಬಲಿಗಳನ್ನು ಕೊಟ್ಟಿರುವುದು ಮುಂತಾದ ಸಂಗತಿಗಳು ಸಾಮಾನ್ಯರ ಕುರಿತವುಗಳಾಗಿವೆ.

**ಶಾಸನ**

ಇತಿಹಾಸ–ಶಾಸನ–ಪುರಾಣ–ಐತಿಹ್ಯಗಳಲ್ಲಿ ವ್ಯತ್ಯಾಸವಿದ್ದರೂ ಸಾಂಸ್ಕೃತಿಕ ಚರಿತ್ರೆಯನ್ನು ನಿರ್ಮಾಣ ಮಾಡಿಕೊಳ್ಳುವಲ್ಲಿ ಒಂದಕ್ಕೊಂದು ಪರಸ್ಪರ ಪೂರಕಗಳಾಗಿವೆಯೇ ಹೊರತು ವಿರುದ್ಧವಾಗಿಲ್ಲ ಎನ್ನುವ ಅಂಶವನ್ನು ಮನಗಾಣಬೇಕಾಗಿದೆ. ಶಾಸನ ಮತ್ತು ಪುರಾಣಗಳಲ್ಲಿ ವ್ಯಕ್ತವಾಗಿರುವ ಹೇಳಿಕೆಗಳಲ್ಲಿ ಶಾಸನದಲ್ಲಿನ ಹೇಳಿಕೆ ಕಥೆಯಂತೆ ಕಂಡುಬಂದರೆ, ಪುರಾಣದಲ್ಲಿ ಬಂದಿರುವ ಹೇಳಿಕೆ ಇತಿಹಾಸದ ಸನ್ನಿಹದಲ್ಲಿದೆ ಎಂದೆನಿಸುತ್ತದೆ. ಈ ಹಿನ್ನೆಲೆಯಲ್ಲಿ ಶಾಸನಗಳ ತಾತ್ವಿಕತೆ ಕುರಿತು ಚರ್ಚಿಸಲಾಗಿದೆ.

ಸಾಮಾನ್ಯ ಅರ್ಥದಲ್ಲಿ ಹೇಳುವುದಾದರೆ ಕಲ್ಲು, ತಾಮ್ರ, ಬೆಳ್ಳಿ, ಶಂಖ, ದಂತ, ಮಣ್ಣಿನ ಮಡಕೆ, ಮರ, ಪ್ರಾಣಿಗಳ ಚರ್ಮ ಮುಂತಾದ ವಸ್ತುಗಳ ಮೇಲೆ ಬರೆಯಲಾದ ಬರವಣಿಗೆಗಳನ್ನು ಮಾತ್ರ 'ಶಾಸನ'ವೆಂದು ಹೇಳುತ್ತೇವೆ.

ಶಾಸನಗಳು ಜನ್ಮ ತಾಳಲು ಕಾರಣಗಳೇನು? ರಾಜರು ತಮ್ಮ ಚರಿತ್ರೆ ಶಾಶ್ವತವಾಗಿರಬೇಕೆಂಬ ಆಕಾಂಕ್ಷೆಯಿಂದ ಶಾಸನಗಳನ್ನು ಕಲ್ಲಿನ ಮೇಲೆ ಕೊರೆಸಿದರು ಎಂಬುದು ಸಾಮಾನ್ಯ ಗ್ರಹಿಕೆಯಿದೆ. ಆದರೂ ಅವು ಕಾಲಕ್ರಮೇಣ ವಿವಿಧ ಉದ್ದೇಶಗಳ ಹಿನ್ನಲೆಯಲ್ಲಿ ಹಾಕಿಸಿರುವ ಸಂಗತಿ ಗೋಚರಿಸುತ್ತವೆ. ಹೀಗಾಗಿ ಒಂದೇ ಉದ್ದೇಶದಿಂದ ಜನ್ಮತಾಳಿದವು ಎಂದು ಖಚಿತವಾಗಿ ಹೇಳುವುದು ಕಷ್ಟ, ಆರಂಭದಲ್ಲಿ ಶಾಸನಗಳು ರಾಜಾಜ್ಞೆಗೆಂದೇ ಮೀಸಲಾಗಿದ್ದವು. ರಾಜನು ಹೊರಡಿಸಿದ ಆಜ್ಞೆಗಳನ್ನು ಪ್ರಜೆಗಳಿಗೆ ತಲುಪಿಸುವ ಮಾಧ್ಯಮವಾಗಿ ಶಾಸನಗಳು ರೂಪುಗೊಂಡವು. ಕಾಲಾನಂತರದಲ್ಲಿ ಅವು ರಾಜಾಜ್ಞೆಗಷ್ಟೇ ಮೀಸಲಾಗದೆ ದಾನದ ವಿಷಯ ಹಾಗೂ ದಾನ ನೀಡಿದ ವಂಶದ ವರ್ಣನೆ, ಯುದ್ಧದಲ್ಲಿ ಹೋರಾಡಿ

ಮಡಿದ ವೀರರ ಶೌರ್ಯ, ರಾಜರುಗಳ ಲೋಕೋಪಯೋಗಿ ಕಾರ್ಯ– ಹೀಗೆ ಅನೇಕ ವಿಷಯಗಳನ್ನು ಒಳಗೊಂಡವು. ಈ ಕುರಿತು ಚಿದಾನಂದಮೂರ್ತಿಯವರು "ಸಾಹಿತ್ಯಕ್ಕೆ ಸಾಹಿತ್ಯ, ಧರ್ಮಕ್ಕೆ ಧರ್ಮ, ಇತಿಹಾಸಕ್ಕೆ ಇತಿಹಾಸವೆನಿಸಿದ ಶಾಸನಗಳು ಪ್ರಾಚೀನ ಕರ್ನಾಟಕದ ಸಾಹಿತ್ಯ, ಧರ್ಮ ಮತ್ತು ಸಮಾಜಗಳಿಗೆ ಹಿಡಿದ ಶಿಲಾದರ್ಪಣಗಳೆನಿಸಿವೆ. ಪ್ರಾಚೀನ ಶಾಸನಗಳಲ್ಲಿ ರಾಜಮನೆತನ, ರಾಜನ ಹೆಸರು, ದತ್ತಿಯ ಕಾಲ, ದತ್ತಿಯ ವಿವರ ಮಾತ್ರವಷ್ಟೆ ಬರೆಯುತ್ತಿದ್ದರು. ಬರಬರುತ್ತಾ ಶಾಸನಕಾರರು ಹೆಚ್ಚಿನ ವಿಷಯವನ್ನು ಅದರಲ್ಲಿ ಉಲ್ಲೇಖಿಸಹತ್ತಿದರು. ದೇವತಾಸ್ತುತಿ, ದೇಶದವರ್ಣನೆ, ಅದರ ರಾಜ, ಅವನ ಅಧಿಕಾರ, ಅದರ ಕಾಲ, ದಾನವನ್ನು ಸ್ವೀಕರಿಸುವವನ ಪಾಂಡಿತ್ಯ, ಜನರ ನೀತಿಯ ಮಟ್ಟ, ಆದರ್ಶ ಬುದ್ಧಿವಂತಿಕೆ ಇತ್ಯಾದಿ ವಿಷಯಗಳನ್ನು ಶಾಸನಗಳಲ್ಲಿ ಬರೆಯತೊಡಗಿದರು".[೧೪]

ಹೀಗಾಗಿ ಕಾಲಾನುಕ್ರಮದಲ್ಲಿ ಶಾಸನಗಳ ಅರ್ಥವ್ಯಾಪ್ತಿ ವಿಸ್ತೃತ ಸ್ವರೂಪವನ್ನು ಪಡೆದುಕೊಳ್ಳುತ್ತ ಬಂದಿದೆ. ಆದರೂ ಮೊದಲು ಅವುಗಳ ಕುರಿತು ಕಟ್ಟುಕತೆಗಳಿದ್ದವು. ಇವುಗಳನ್ನು ದೇವರೆ ಬರೆದಿಟ್ಟಿದ್ದಾನೆ, ಇವುಗಳನ್ನು ಓದಿದವರು ಮರಣ ಹೊಂದುತ್ತಾರೆ, ಇಲ್ಲವೇ ಹೇರಳ ಧನಲಾಭ ಪಡೆಯುತ್ತಾರೆ. ಪಾಪಿಗಳು ಈ ಶಾಸನಗಳನ್ನು ಓದಲಾರರು ಎಂಬಿತ್ಯಾದಿ ಮೂಢ ನಂಬಿಕೆಗಳು ಶಾಸನ ಕುರಿತಾಗಿದ್ದವು. ಹೀಗಾಗಿ ಅವುಗಳ ಕಡೆಗೆ ಹೆಚ್ಚು ಗಮನ ಹರಿಸಿರಲಿಲ್ಲ. ಅನೇಕ ಹಳ್ಳಿಗಳಲ್ಲಿ ಇಂದಿಗೂ ಶಾಸನಗಳನ್ನು ಪೂಜಿಸುವುದು ಇದಕ್ಕೆ ನಿದರ್ಶನವಾಗಿದೆ.

ಭಾರತದಲ್ಲಿ ಇತಿಹಾಸ ರಚಿಸಲು ಯಾವುದೇ ರೀತಿಯ ಆಕರಗಳು ಇಲ್ಲ ಎನ್ನುವ ಕೊರತೆ ಓರಿಯಂಟಲಿಸ್ಟರನ್ನು ಕಾಡಿದಾಗ, ಅವರಿಗೆ ದೊರೆತ ಆಕರಗಳೆಂದರೆ ಈ ಶಾಸನಗಳು. ಹಾಗಾಗಿ ಶಾಸನಗಳಿಗೆ ಹೆಚ್ಚು ಮಹತ್ವ ಬಂದದ್ದು ಬ್ರಿಟಿಷ್ ವಸಾಹತುಶಾಹಿ ಆಡಳಿತಾವಧಿಯಲ್ಲಿ. ಅಲ್ಲಿಯವರೆಗೂ ಭಾರತೀಯರಲ್ಲಿ ಚರಿತ್ರೆಯ ಪ್ರಜ್ಞೆಯ ಸ್ವರೂಪ ಪುರಾಣ ಹಾಗೂ ಮೌಖಿಕ ಪರಂಪರೆಯನ್ನು ಅವಲಂಬಿಸಿತ್ತು. ಆದರೆ ವಸಾಹತುಶಾಹಿ ಆಡಳಿತಾವಧಿಯಲ್ಲಿ ಭಾರತಕ್ಕೆ ಬಂದ ಪಾಶ್ಚಾತ್ಯ ವಿದ್ವಾಂಸರು ಇಲ್ಲಿನ ಚರಿತ್ರೆಯನ್ನು ಅಧಿಕೃತ ದಾಖಲೆಗಳ ಮೂಲಕ ನಿರ್ಮಾಣ ಮಾಡಿಕೊಳ್ಳಲು ಪ್ರಾರಂಭಿಸಿದರು. ಅವರು ವಸಾಹತುಶಾಹಿ ರಾಜಕೀಯಕ್ಕೆ ಪೂರಕವಾಗಿ ಇತಿಹಾಸ ನಿರ್ಮಾಣಮಾಡಿಕೊಳ್ಳಲು ಶಾಸನಗಳನ್ನು ಬಳಸಿಕೊಂಡರು. ಹೀಗಾಗಿ ಆ ಸಂದರ್ಭದಲ್ಲಿ ಬಹುಕಾಲದಿಂದಲೂ ಉಳಿದುಬಂದ ಶಾಸನಗಳು ಚಾರಿತ್ರಿಕ ರಚನೆಗೆ ತುಂಬ ಮಹತ್ವದ ದಾಖಲೆಗಳಾದವು. ಅವರು ಮುಖ್ಯವಾಗಿ ಗಮನ ಹರಿಸಿದ್ದು ರಾಜಕೀಯ ಚರಿತ್ರೆಯ ಮೇಲೆ. ಏಕೆಂದರೆ ಅವರ ಉದ್ದೇಶವು ಭಾರತೀಯರನ್ನು ಆಳುವುದಾಗಿತ್ತು. ಅದೇನೆ ಇದ್ದರೂ ಶಾಸನಗಳಿಗೆ ಅಂದಿನಿಂದಲೇ ಹೆಚ್ಚು ಮಹತ್ವ ಬಂದು, ಶಾಸನಗಳ ಅಧ್ಯಯನ ಕಾರ್ಯ ಆರಂಭವಾಯಿತು.

ಆರಂಭದಲ್ಲಿ ಶಾಸನಗಳನ್ನು ರಾಜಕೀಯ ನೆಲೆಯಲ್ಲಿ ಅಧ್ಯಯನಕ್ಕೊಳಪಡಿಸಿದರೂ ಅವುಗಳಲ್ಲಿನ ವಸ್ತು ವೈವಿಧ್ಯತೆಯಿಂದಾಗಿ ಶಾಸನಗಳು ಒಟ್ಟು ಸಾಂಸ್ಕೃತಿಕ ಬದುಕಿನ ದಾಖಲೆಗಳಂತೆ ಕಾಣತೊಡಗಿದವು. ಶಾಸನಗಳು ಪ್ರಾಚೀನ ಕಾಲದ ದಾಖಲೆಗಳನ್ನೊಳಗೊಂಡ ಅಮೂಲ್ಯ ಖನಿಯಾಗಿವೆ. ಶಾಸನವು ಕೇವಲ ಶಿಲೆಯಲ್ಲ. ಅದರಲ್ಲಿ ಧರ್ಮಶಾಸ್ತ್ರ, ರಾಜ್ಯಶಾಸ್ತ್ರ, ಅರ್ಥಶಾಸ್ತ್ರ, ಇತಿಹಾಸ, ಸಮಾಜಶಾಸ್ತ್ರ ಮುಂತಾದ ವಿಷಯಕ್ಕೆ ಸಂಬಂಧಿಸಿದ ಸಂಗತಿಗಳನ್ನು ಕಾಣಬಹುದಾಗಿದೆ. ಅವುಗಳ ಕಾಪಾಡುವಿಕೆಯೆಂದರೆ ಒಟ್ಟು ದೇಶದ ಬಹು ಮೌಲಿಕವಾದ ಸಾಂಸ್ಕೃತಿಕ ಬದುಕಿನ ರಕ್ಷಣಯೇ ಆಗಿದೆ. ಶಾಸನಗಳು ಗತದ ಇತಿಹಾಸಕ್ಕೆ ಪ್ರವೇಶ ಮಾಡಲು ದಾರಿಯನ್ನು ತೋರಿಸುವ ಕೈ ದೀವಿಗಿಗಳಂತಿವೆ. ಅವು ರಾಜ ಪ್ರಭುತ್ವ ವ್ಯವಸ್ಥೆಯ ಚಹರೆಗಳನ್ನು ಅನಾವರಣಗೊಳಿಸಿ ಚರಿತ್ರೆಯನ್ನು ಕಟ್ಟಿಕೊಳ್ಳಲು ಸಹಾಯಕವಾಗುತ್ತವೆ. ಈ ಸತ್ಯವನ್ನು ಮನಗಂಡಿರುವ ಖ್ಯಾತ ಶಾಸನ ಸಂಶೋಧಕ ಜೆ.ಎಫ್.ಫ್ಲೀಟ್ ಅವರು ಒಂದಡೆಯಲ್ಲಿ ಶಾಸನ ಮಹತ್ವವನ್ನು ಕುರಿತಂತೆ ಹೀಗೆ ಹೇಳುತ್ತಾರೆ. "Not only is India particularly rich in inscriptions, but also those remains are the only save grounds of historical results in every line of research connected with is ancient past".

ಹಾಗೆಯೇ Encyclopaedia Britannica –XII. Document incied on some hard or permanent material in the form of letters or other conventional signs, for the purpose of conveying some information or preserving a record, They are, therefore to be distinguished on the one hand for manuscript or documents written on papyrus, parchment, paper or other more or less smooth surface by means of a brush, read or pen and some colured, fluid. (ತಾಳೆಗರಿ, ಭೂರ್ಜಪತ್ರ, ಕಾಗದ ಮುಂತಾದವುಗಳ ಮೇಲೆ ಕಂಡು ಬರುವ ಬರಹಗಳನ್ನು ಬಿಟ್ಟು ಬಹುಕಾಲ ಉಳಿಯುವ ಸಾಮಾಗ್ರಿಯ ಮೇಲೆ ಕೆತ್ತಿರುವ ಬರಹಗಳನ್ನು ಶಾಸನಗಳೆಂದು ಸ್ಥೂಲವಾಗಿ ಕರೆಯಬಹುದು).

ಪಾಶ್ಚಾತ್ಯ ವಿದ್ವಾಂಸರ ಮಾದರಿಯಲ್ಲಿಯೇ ದೇಶಿ ವಿದ್ವಾಂಸರು ಕಣ್ಮರೆಯಾಗಿದ್ದ ಶಾಸನಗಳನ್ನು ಹುಡುಕುವ ಮತ್ತು ಅವುಗಳನ್ನು ಸಂಗ್ರಹಿಸಿ ಮುದ್ರಣ ರೂಪಕ್ಕೆ ತರುವ ಪ್ರಯತ್ನ ಮೊದಲ ಹಂತದಲ್ಲಿ ಮಾಡಿದ್ದಾರೆ. ನಂತರದ ಅವಧಿಯಲ್ಲಿ ಭಾರತೀಯರು ಶಾಸನ ಎಂಬ ಪದಕ್ಕೆ ವಿಶಾಲ ಅರ್ಥವನ್ನು ನೀಡುವುದರ ಸಲುವಾಗಿ ಅವುಗಳ ಆಂತರಿಕ ವಿಷಯಗಳನ್ನು ಗಮನದಲ್ಲಿರಿಸಿಕೊಂಡು ವ್ಯಾಖ್ಯಾನಿಸಿದರು. ಹೀಗಾಗಿ ಶಾಸನವೆಂಬುದು ಆಜ್ಞೆ, ಪ್ರಜೆಗಳೆಲ್ಲರೂ

ಪಾಲಿಸಬೇಕಾದ ಒಂದು ಸಂಹಿತೆ, ಸಂವಿಧಾನ, ನೀತಿ ನಿಯಮಗಳನ್ನು ಉಲ್ಲಂಘಿಸಿದರೆ ಶಿಕ್ಷೆಗೆ ಗುರಿಯಾಗುತ್ತೀರೆಂಬ ಎಚ್ಚರಿಕೆಯ ನೀತಿ ಸಂಹಿತೆಗಳು ಎಂಬ ಅರ್ಥ ಪಡೆದುಕೊಂಡಿದ್ದರು ಅಧ್ಯಯನಕಾರರು ಶಾಸನದ ಅಂತರಂಗದಲ್ಲಿನ ವಿಷಯವನ್ನಾಧರಿಸಿ ಅವುಗಳ ಮಹತ್ವವನ್ನು ಈ ಮುಂದಿನಂತೆ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಶಾಸನ (ಎಂಬ ಪದ) ರಾಜರ ಆಜ್ಞೆಗಳನ್ನು ತಿಳಿಸುವ ಬರಹವನ್ನು ಹೇಳುತ್ತದೆ ಎಂದು ಕೌಟಿಲ್ಯನು ಅಭಿಪ್ರಾಯಿಸುತ್ತಾನೆ. ಹಾಗೆಯೇ ಎಂ.ಬಿ. ನೇಗಿನ ಹಾಳರು 'ಶಾಸನ' ಎಂಬ ಶಬ್ಧಕ್ಕೆ ನಾನಾರ್ಥಗಳಿರುವವಾದರೂ ಈ ದಾಖಲೆಗಳ ಸಂದರ್ಭದಲ್ಲಿ ಅದಕ್ಕೆ 'ರಾಜಾಜ್ಞೆ' ಎಂಬ ವಿಶಿಷ್ಟಾರ್ಥ ಅನ್ವಯವಾಗುತ್ತದೆ. ಇದನ್ನು ಬರೆಯಿಸಿದವರೂ ಕೂಡ ಆಗೀಗ ಇವನ್ನು 'ಶಾಸನ' ಎಂದೇ ಹೆಸರಿಸಿದ್ದಾರೆ. ಇದಲ್ಲದೆ ಲಿಪಿ, ಧರ್ಮಲಿಪಿ, ಲೇಖ, ಶಿಲಾಲೇಖ, ಕಲ್ಬರಹ, ತಾಮ್ರಪಟ, ತಾಮ್ರಶಾಸನ ಇತ್ಯಾದಿ ನಾಮಾಂತರಗಳೂ ಶಾಸನಗಳಿಗೆ ಉಂಟು ಎನ್ನುತ್ತಾರೆ. ಪಿ.ವಿ. ಕೃಷ್ಣಮೂರ್ತಿಯವರು ಪ್ರಾಚೀನ ಕರ್ನಾಟಕದ ಭೌಗೋಳಿಕ ವ್ಯಾಪ್ತಿ, ಸಾಂಸ್ಕೃತಿಕ ಪ್ರಭಾವ ವಲಯದ ವಿಸ್ತಾರ; ನೆಲೆ, ಬೆಲೆಗಳನ್ನು ಅರಿಯಲು ಶಾಸನಗಳು ಅಮೂಲ್ಯ ಆಕರಗಳಾಗಿರುತ್ತವೆ ಎನ್ನುತ್ತಾರೆ. ಸಿ. ನಾಗಭೂಷಣ ಅವರು ಶಾಸನಗಳು ಪ್ರಮುಖವಾಗಿ ಒಂದು ಕಾಲದಲ್ಲಿ ನಡೆದ ವ್ಯವಹಾರಗಳ ಲಿಖಿತ ದಾಖಲೆಗಳು. ನಾಡಿನ ರಾಜಕೀಯ, ಸಾಂಸ್ಕೃತಿಕ, ಸಾಮಾಜಿಕ, ಆರ್ಥಿಕ, ಧಾರ್ಮಿಕ ಅಂಶಗಳನ್ನು ಅರ್ಥಮಾಡಿಕೊಳ್ಳುವ ಮೂಲ ಸಾಮಾಗ್ರಿಗಳಾಗಿವೆ ಎಂದಿದ್ದಾರೆ. ಈ ಮೇಲಿನ ಅಭಿಪ್ರಾಯಗಳು ಶಾಸನಗಳ ಸ್ವರೂಪದ ವ್ಯಾಪ್ತಿಯ ಮಹತ್ವವನ್ನು ಒತ್ತಿಹೇಳಲಾಗಿದೆ. ಒಟ್ಟಾರೆಯಾಗಿ ಹೇಳುವುದಾದರೆ ಶಾಸನ ಅಧ್ಯಯನದ ವ್ಯಾಪ್ತಿ ಬಹಳ ವಿಶಾಲವಾದುದು. ಚರಿತ್ರೆಯಲ್ಲದೆ ಧಾರ್ಮಿಕ, ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳು, ಸಾಹಿತ್ಯ, ಭಾಷೆ, ಶಬ್ಧಶಾಸ್ತ್ರ, ಛಂದಸ್ಸು, ವಾಸ್ತುಶಿಲ್ಪ ಮೇಲಾಗಿ ಅಕ್ಷರಗಳ ವಿನ್ಯಾಸ, ವಿಕಾಸಗಳನ್ನೊಳಗೊಂಡ ಬರಹದ ಕಲೆ ಹೀಗೆ ಅನೇಕ ವಿಷಯಗಳ ಅಧ್ಯಯನಕ್ಕೆ ಶಾಸನಗಳು ಅತ್ಯಂತ ಮಹತ್ವದ ಸಾಮಾಗ್ರಿಗಳನ್ನು ಒದಗಿಸುತ್ತವೆ. ಆದರೂ ಈವರೆಗಿನ ಅಧ್ಯಯನಗಳು ಹೆಚ್ಚು ಲಿಖಿತ ಪರಂಪರೆಗೆ ಮಹತ್ವ ನೀಡಿರುವುದಕ್ಕೆ ಮೇಲಿನ ಅಭಿಪ್ರಾಯಗಳು ಸಾಕ್ಷಿಯಾಗಿವೆ. ಇದಕ್ಕೆ ಪಾಶ್ಚಾತ್ಯ ಧೋರಣೆಯೇ ಕಾರಣವೆಂದು ಹೇಳಬಹುದಾಗಿದೆ.

ಇತಿಹಾಸ ಬರೆಯುವ ಪ್ರಸಂಗದಲ್ಲಿ ಲಿಖಿತ ಸಾಮಾಗ್ರಿಯಾದ ಶಾಸನಾದಿಗಳಿಗೆ ಪ್ರಧಾನ ಸ್ಥಾನವನ್ನು, ಕಾವ್ಯಾದಿಗಳಿಗೆ ಗೌಣಸ್ಥಾನವನ್ನು ನೀಡಿರುವಂತೆ ಭಾರತೀಯ ಇತಿಹಾಸಕಾರರು, ಅಲಿಖಿತ ಸಾಮಗ್ರಿಯಾದ ಪುರಾಣ ಮತ್ತು ಐತಿಹ್ಯಗಳಂಥ ವಿಷಯಗಳನ್ನು ಉಪೇಕ್ಷಿಸುತ್ತಾ ಬಂದಿದ್ದಾರೆ. ಹಾಗೆಯೇ ಶಾಸನಗಳಲ್ಲಿ ದಾಖಲಾಗಿರುವ ಪೌರಾಣಿಕ ಮತ್ತು ಐತಿಹ್ಯದಂತಹ ಅಂಶಗಳನ್ನು ಉಪೇಕ್ಷಿಸಿ ನೋಡಲಾಗಿದೆ. ಪ್ರಾಚೀನ ಕಾಲದಿಂದಲೂ ಭಾರತೀಯರು ಮೌಖಿಕ

ಪರಂಪರೆ ಮೂಲಕ ತಮ್ಮ ಚರಿತ್ರೆಯನ್ನು ಉಳಿಸಿಕೊಂಡು ಬಂದಿದ್ದಾರೆ. ಆದರೆ ವಸಾಹತುಶಾಹಿ ಆಡಳಿತದ ಅವಧಿಯಲ್ಲಿ ಲಿಖಿತ ಪರಂಪರೆಗೆ ಹೆಚ್ಚು ಮಹತ್ವ ಬಂದಿದ್ದು, ಆ ಹಿನ್ನಲೆಯಲ್ಲಿ ಅಲಿಖಿತ ಪರಂಪರೆಯನ್ನು ನಿರ್ಲಕ್ಷಿಸುವುದಾದರೆ, ಇಡೀ ಭಾರತೀಯ ಪರಂಪರೆಯನ್ನು ನಿರ್ಲಕ್ಷಿಸಿದಂತಾಗುತ್ತದೆ. ಏಕೆಂದರೆ ಲಿಖಿತರೂಪದಲ್ಲಿ ಉಳಿದು ಬಂದಿರುವ ಆಕರ ಸಾಮಾಗ್ರಿ ಬೆರಳೆಣಿಕೆಯಷ್ಟು ಮಾತ್ರ, ಆದರೆ ಅಲಿಖಿತ ರೂಪದಲ್ಲಿ ಉಳಿದು ಬಂದಿರುವ ಆಕರ ಸಾಮಾಗ್ರಿ ಅಪಾರ ಪ್ರಮಾಣದಲ್ಲಿ ಲಭ್ಯವಿವೆ. ಹೀಗಿರುವಾಗ ಇತಿಹಾಸ ರಚನೆಯಲ್ಲಿ ಅಲಿಖಿತ ಸಾಮಾಗ್ರಿಯಾದ ಪುರಾಣ ಮತ್ತು ಐಹಿಹ್ಯಗಳಂತಹ ಅಂಶಗಳನ್ನು ಅಲಕ್ಷಿಸುವುದು ಎಷ್ಟರಮಟ್ಟಿಗೆ ಸರಿ ಎನ್ನುವುದನ್ನು ಯೋಚಿಸಬೇಕಾಗಿದೆ. ಅಂದರೆ ಶಾಸನಗಳಲ್ಲಿ ದಾಖಲಾಗಿರುವ ಸಂಗತಿಗಳಲ್ಲಿ ಅನೇಕ ಮೌಖಿಕ ಪರಂಪರೆಯಲ್ಲಿರುವ ಅಂಶಗಳು ಸೇರಿಕೊಂಡಿವೆ. ನಿರ್ಲಕ್ಷಕ್ಕೆ ಒಳಗಾಗಿರುವ ಇಂಥ ಅಂಶಗಳಿಗೆ ಹೆಚ್ಚಿನ ಗಮನ ಹರಿಸಬೇಕಾಗಿದೆ. ಇತಿಹಾಸ ರಚನೆಗೆ ಇಂದು ಲಿಖಿತದೊಂದಿಗೆ ಅಲಿಖಿತ ಸಾಮಾಗ್ರಿಯನ್ನು ಬಳಸಿಕೊಂಡು ತನ್ನ ವ್ಯಾಪ್ತಿಯನ್ನು ವಿಸ್ತರಿಸಿಕೊಳ್ಳುವುದು ಸರಿಯಾದ ಕ್ರಮವೆಂದು ಹೇಳಬಹುದಾಗಿದೆ. ಏಕೆಂದರೆ, ಶ್ರೇಣಿಕೃತ ವ್ಯವಸ್ಥೆಯಲ್ಲಿ ಮೇಲ್‌ವರ್ಗಕ್ಕೆ ಸಂಬಂಧಿಸಿದಂತೆ ಮಾತ್ರ ಲಿಖಿತ ದಾಖಲೆಗಳು ದೊರೆಯುವ ಸಾಧ್ಯತೆ ಹೆಚ್ಚು. ಆದರೆ ಹಲವು ತಳಸಮುದಾಯದಿಂದ ಕೂಡಿದ ಭಾರತದಂತಹ ದೇಶದಲ್ಲಿ ಸಮಗ್ರ ಇತಿಹಾಸ ರಚನೆಗೆ ಪೌರಾಣಿಕ ಮತ್ತು ಐತಿಹ್ಯದಂತಹ ಅಂಶಗಳು ಮಹತ್ವವಾದವು.

ಮೊದಲ ಹಂತದಲ್ಲಿ ಅಧ್ಯಯನಕಾರರು ಶಾಸನಗಳನ್ನು ಪ್ರಧಾನ ರಾಜಮನೆತನಗಳ ಚರಿತ್ರೆ ನಿರ್ಮಾಣ ಮಾಡಿಕೊಳ್ಳಲು ಹೆಚ್ಚು ಗಮನ ಹರಿಸಿದಂತಿದೆ. ನಂತರದ ಅಧ್ಯಯನಕಾರರು ಚಿಕ್ಕಪುಟ್ಟ ಅರಸುಮನೆತನಗಳ, ಪಾಳೆಪಟ್ಟುಗಳ, ಸ್ಥಳೀಯ ಮುಖಂಡರ ಆಳ್ವಿಕೆಯ ಕಡೆಗೆ ಹೆಚ್ಚು ಒಲವನ್ನು ತೊರಿದ್ದಾರೆ. ಒಂದು ಸ್ಥಳೀಯ ಇತಿಹಾಸದ ಅಖಂಡತೆಯು ಅದರ ಜೀವದ್ರವ್ಯವಾದ ಸಾಂಸ್ಕೃತಿಕ ಅನನ್ಯತೆಯಲ್ಲಿ ಕೇಂದ್ರಿತವಾಗಿದೆ. ಸ್ಥಳೀಯ ಇತಿಹಾಸ ಹಾಗೂ ಸಂಸ್ಕೃತಿಗಳು ಪರಸ್ಪರ ಪೂರಕ ನೆಲೆಯಲ್ಲಿ ನಿಲ್ಲುವುದರಿಂದ ಒಂದು ಸ್ಥಳೀಯ ಇತಿಹಾಸದ ಅಧ್ಯಯನವು ಅದರ ಸಾಂಸ್ಕೃತಿಕ ಪರಂಪರೆಯ ಒಳಮುಖ ಅಧ್ಯಯನವೂ ಆಗಿದೆ ಎನ್ನುವ ಅಂಶವನ್ನು ಒಳಗೊಂಡಿದೆ.

ಸಮಾಜವು ನಿತ್ಯ ಪರಿವರ್ತನೆಯತ್ತ ಸಾಗಿದೆ. ಪರಿವರ್ತಿತ ಸಮಾಜದಲ್ಲಿ ನಿರಂತರ ಉತ್ಖನನ ಮತ್ತು ಅನ್ವೇಷಣೆಗಳಿಂದ ಹೊಸ ಹೊಸ ಆಕರಗಳು ದೊರೆತಂತೆಲ್ಲಾ ಚರಿತ್ರೆಯನ್ನು ಪುನರ್‌ರಚಿಸಿಕೊಳ್ಳುವ ಕಾರ್ಯ ನಿರಂತರವಾಗಿ ನಡೆದಿದೆ ಮತ್ತು ನಡೆಯುತ್ತದೆ. ಶಾಸನಗಳನ್ನು ಆಕರವಾಗಿಟ್ಟುಕೊಂಡು ಅಧ್ಯಯನ ಕೈಗೊಳ್ಳುವವರು ತಮ್ಮ ಕಾಲದ ಸಾಂಸ್ಕೃತಿಕ ಒತ್ತಡದ ಹಿನ್ನಲೆಯಲ್ಲಿ ನಿರ್ವಚಿಸುತ್ತಾರೆ. ಈ ಹಿನ್ನಲೆಯಲ್ಲಿ ಶಾಸನಗಳನ್ನು ಹಲವು ದೃಷ್ಟಿಕೋನಗಳಿಂದ

ಪುನರ್‌ಪರಿಶೀಲಿಸಿ ನಿರ್ಲಕ್ಷಕ್ಕೊಳಗಾದ ಅನೇಕ ಅಂಶಗಳ ಮೇಲೆ ಬೆಳಕು ಚೆಲ್ಲುವ ಕಾರ್ಯವು ನಿರಂತರವಾಗಿ ನಡೆದುಬಂದಿದೆ. ಆರವತ್ತು, ಎಪ್ಪತ್ತರ ದಶಕದಲ್ಲಿ ಬ್ರಾಹ್ಮಣ ಸಂಸ್ಕೃತಿ ಮತ್ತು ಶೂದ್ರ ಸಂಸ್ಕೃತಿಯೆಂದು ವಿಭಾಗಿಸುವುದನ್ನು ನೋಡಬಹುದಾಗಿದೆ. ಈ ಪರಿಕಲ್ಪನೆಗಳು ರಾಜಕಿಯ ಧೃವೀಕರಣದ ಭಾಗವಾಗಿ ಮೂಡಿಬಂದಿವೆ. ಆದರೆ ಸಾಂಸ್ಕೃತಿಕ ಅಧ್ಯಯನದಲ್ಲಿ ಈ ಪರಿಕಲ್ಪನೆ ಹೊಸಬಗೆಯ ಚಿಂತನೆಗೆ ದಾರಿಮಾಡಿಕೊಟ್ಟವು. ಶ್ರೇಣಿಕೃತ ಸಾಮಾಜಿಕವ್ಯವಸ್ಥೆಯಲ್ಲಿ ನಿರ್ಲಕ್ಷಕ್ಕೊಳಗಾದ ಹಲವು ಸಂಸ್ಕೃತಿಗಳ ಅನನ್ಯತೆಯನ್ನು ಪ್ರತಿಷ್ಠಾಪಿಸಲು ಪ್ರಯತ್ನಿಸಿದವು. ಈ ಹಿನ್ನಲೆಯಲ್ಲಿ ಅಧ್ಯಯನಕಾರರು ಶಾಸನಗಳಲ್ಲಿ ದಾಖಲಾಗಿದ್ದು, ನಿರ್ಲಕ್ಷಕ್ಕೊಳಗಾದ ಅಂಶಗಳಕಡೆಗೆ ಹೆಚ್ಚು ಗಮನಹರಿಸಲಾಗಿದೆ. ಉದಾಹರಣೆಗೆ ಮಹಾಸತಿಗಲ್ಲುಗಳನ್ನು ಸ್ತ್ರೀವಾದಿ ದೃಷ್ಟಿಕೋನದ ಹಿನ್ನಲೆಯಲ್ಲಿ ಅಧ್ಯಯನ ಕೈಗೊಂಡ ಅಧ್ಯಯನಕಾರರು ಮಹಾಸತಿ ಹೋಗುವುದನ್ನು ಸಾಮಾಜಿಕ ಮೌಲ್ಯವೆಂದು ಪರಿಗಣಿಸದೆ ಅವುಗಳನ್ನು ಅಪಮೌಲ್ಯವೆಂದೆ ಗುರುತಿಸುತ್ತಾರೆ.

ಅಧ್ಯಯನಕಾರರು ಶಾಸನವನ್ನು ಆಕರವಾಗಿಟ್ಟುಕೊಂಡರೂ ಅವುಗಳನ್ನು ನೋಡುವ ದೃಷ್ಟಿಕೋನವು ಭಿನ್ನವಾಗಿವೆ. "ಕಳೆದ ದಶಕದಿಂದ ಇತಿಹಾಸವನ್ನು ನೋಡುವ ದೃಷ್ಟಿ ಗಮನಾರ್ಹವಾದ ಬದಲಾವಣೆಯನ್ನು ಪಡೆಯಿತು. ಇತಿಹಾಸ ರಚನೆಯ ಆಕರಗಳನ್ನು ಹೊಸ ರೀತಿಯಿಂದ ನೋಡುವ ದೃಷ್ಟಿ ಬೆಳೆದಿದೆ. ಕೇವಲ ರಾಜಕೀಯ ಚರಿತ್ರೆಯ ಅಧ್ಯಯನ ಮಾರ್ಗವನ್ನು ಬಿಟ್ಟು ಸಾಂಸ್ಕೃತಿಕ ಇತಿಹಾಸ ರಚನೆಯ ಮಾರ್ಗವನ್ನು ಹಿಡಿದಿದ್ದಾರೆ. ನಮ್ಮ ಜನರ ದಿನ ನಿತ್ಯದ ಬದುಕನ್ನು ಅವರ ಸಂಪ್ರದಾಯ ರೀತಿ–ನೀತಿಗಳನ್ನು ಮತ್ತು ಬದುಕಿನ ಏಳು–ಬೀಳಿನ ಹಾದಿಯನ್ನು ವಿವಿಧ ಮಗ್ಗಲುಗಳಿಂದ ಅಧ್ಯಯನ ಮಾಡತೊಡಗಿದ್ದಾರೆ. ವಿವಿಧ ಕ್ಷೇತ್ರಗಳ ವಿದ್ವಾಂಸರು ಇತಿಹಾಸ ಕ್ಷೇತ್ರದಲ್ಲಿ ಒಲವನ್ನು ತೋರಿ ಕಾರ್ಯರೂಪಕ್ಕಿಳಿದರು. ಇದರಿಂದಾಗಿ ಇತಿಹಾಸ ಜನಾನುಮತವನ್ನು ಪಡೆದು ಸಾಮಾನ್ಯ ಜನರಲ್ಲಿ ಇತಿಹಾಸದ ಅರಿವು ಮೂಡತೊಡಗಿತು. ಇಂತಹ ಅಧ್ಯಯನದ ಫಲವಾಗಿ ಐತಿಹಾಸಿಕ ಆಕರಗಳಲ್ಲಿ ಪ್ರಮುಖವೆನಿಸುವ ಶಾಸನಗಳನ್ನು ವಿಭಿನ್ನ ದೃಷ್ಟಿಯಲ್ಲಿ ಅಧ್ಯಯನ ಮಾಡತೊಡಗಿದರು. ರಾಜಕೀಯ ಜ್ಞಾನಕ್ಕೆ ಬುನಾದಿಯಾಗಿದ್ದ ಶಾಸನಗಳನ್ನು ರಾಜಕೀಯೇತರ ಅಧ್ಯಯನಗಳಿಗೂ ಪರಿಣಾಮಕಾರಿಯಾಗಿ ಬಳಸಿಕೊಳ್ಳತೊಡಗಿದರು".[೧೫] ಹೀಗೆ ವಿಭಿನ್ನ ದೃಷ್ಟಿಕೋನದಿಂದ ಹಲವು ತೀರ್ಮಾನಗಳು ನಿರ್ಮಾಣಗೊಂಡಿವೆ. ನಿರ್ಮಾಣಗೊಂಡ ತೀರ್ಮಾನಗಳು ಸರಿ ತಪ್ಪಿನ ಮಾದರಿಯಲ್ಲಿ ಗ್ರಹಿಸಿರುವುದಿಂದ ಹಲವು ಗೊಂದಲಗಳು ಸೃಷ್ಟಿಯಾಗಿವೆ ಎಂಬುದನ್ನು ಅಲ್ಲಗಳೆಯುವಂತಿಲ್ಲ. ಸಮಕಾಲೀನ ಸಮಾಜವನ್ನು ಪ್ರತಿನಿಧಿಸುವ ಶಾಸನಗಳ ವಿಷಯ ಜೀವನದಷ್ಟು ವೈವಿಧ್ಯಮಯ. ಅವುಗಳನ್ನು ಹಲವಾರು ವರ್ಗಗಳಲ್ಲಿ ವಿಭಾಗಿಸಬಹುದು. ವೀರಶಾಸನಗಳು, ಯುದ್ಧವಿಜಯ ಶಾಸನಗಳು, ಧರ್ಮಶಾಸನಗಳು, ದೇವಾಲಯ ನಿರ್ಮಾಣ, ಲಿಂಗ ಪ್ರತಿಷ್ಠಾಪನೆ, ದತ್ತಿ, ನಿಷಧಿ, ಸಹಾಗಮನಗಳ ಉಲ್ಲೇಖವನ್ನು ಶಾಸನಗಳು ಒಳಗೊಂಡಿರುತ್ತವೆ.

**ಉಪಸಂಹಾರ:**

ಈ ಹಿಂದೆ ಭಾರತದಲ್ಲಿ ಲಿಖಿತ ಚರಿತ್ರೆ ಎನ್ನುವುದು ಇರಲಿಲ್ಲ. ಇಲ್ಲಿನದು ಮೌಖಿಕ ಇತಿಹಾಸ. ಹಾಗಾಗಿ ಇಲ್ಲಿ ಹೆಚ್ಚು ಪ್ರಾಶಸ್ತ್ಯವಿದ್ದುದು ಪುರಾಣ ಮತ್ತು ಐತಿಹ್ಯಗಳಿಗೆ. ಇವೆರಡೂ ಕೂಡ ಮೂಲದಲ್ಲಿ ಕಥೆಗಳೆ. ಆದರೆ ಅವುಗಳನ್ನು ನಿರೂಪಿಸುವ ವಿಧಾನಗಳು ಮಾತ್ರ ಭಿನ್ನ. ಈ ದಾಖಲೆಗಳೇ ಭಾರತೀಯರ ಇತಿಹಾಸವಾಗಿದ್ದವು. ಪಾಶ್ಚಾತ್ಯ ಮಾದರಿಯ ಚರಿತ್ರೆಯನ್ನು ರೂಪುಗೊಳಿಸಲು ಇವು ಆಕರ ಸಾಮಗ್ರಿಗಳಾದವು.

ಇತಿಹಾಸಕ್ಕೆ ಸಂವಾದಿಯಾಗಿ ಚರಿತ್ರೆ ಎಂಬ ಪರಿಕಲ್ಪನೆಯನ್ನು ಬಳಸಲಾಗುತ್ತದೆ. ಇಂದು ನಾವು ಯಾವುದನ್ನು ಚರಿತ್ರೆ ಎಂದು ಕರೆಯುತ್ತೇವೆಯೋ ಅದು ಯುರೋಪ್ ಮಾದರಿಯನ್ನು ಅನುಸರಿಸಿದ್ದು. ಈ ಮಾದರಿಯು ನಮ್ಮ ದೇಶದಲ್ಲಿ ಹೆಚ್ಚು ಪ್ರಚಲಿತವಾದದ್ದು, ನಾವು ಇಂಗ್ಲೇಂಡಿನ ವಸಾಹತುಶಾಹಿ ಆಡಳಿತದಲ್ಲಿದ್ದಾಗ. ಆಡಳಿತಾಧಿಕಾರಿಗಳಾಗಿ ಬಂದ ಪಾಶ್ಚಾತ್ಯರು ಇಂಡಿಯಾದ ಚರಿತ್ರೆಯನ್ನು ದಾಖಲಿಸುವ ಕಾರ್ಯಕೈಗೊಂಡರು. ಈ ಕಾರ್ಯಕ್ಕೆ ಆಧಾರವಾದದ್ದು ಚರಿತ್ರ ಲೇಖನಶಾಸ್ತ್ರ. ಆ ಚರಿತ್ರ ಲೇಖನಾಶಾಸ್ತ್ರದಲ್ಲಿ ಐತಿಹ್ಯ, ಪುರಾಣ, ಶಾಸನ ಮುಂತಾದ ಆಕರಗಳನ್ನು ಬಳಸಿಕೊಳ್ಳಲು ವಿವರಿಸಲಾಗಿದೆ. ಆದರೆ ಲಿಖಿತ ದಾಖಲೆಗಳು ಲಭ್ಯವಿದಿದ್ದಾಗ ಮಾತ್ರ ಪುರಾಣ ಮತ್ತು ಐತಿಹ್ಯಗಳನ್ನು ಪರಿಗಣಿಸಲಾಯಿತು. ಈ ಹಿನ್ನೆಲೆಯಲ್ಲಿ ಭಾರತದ ಚರಿತ್ರೆಯನ್ನು ನಿರ್ಮಾಣ ಮಾಡಲು ಹೊರಟ ಈ ಅಧಿಕಾರಿಗಳು ಹೆಚ್ಚು ಮಹತ್ವ ನೀಡಿದ್ದು ಲಿಖಿತ ದಾಖಲೆಗಳಾದ ಶಾಸನಗಳಿಗೆ. ಮತ್ತು ಇಲ್ಲಿನ ಸ್ಥಳೀಯ ವಿದ್ವಾಂಸರಿಗೆ. ಆ ಸಂದರ್ಭದಲ್ಲಿನ ಇಲ್ಲಿನ ಸ್ಥಳೀಯ ವಿದ್ವಾಂಸರು ಮೇಲ್ವರ್ಗ ಮತ್ತು ಮೇಲ್ಜಾತಿಗೆ ಸೇರಿದವರಾಗಿದ್ದು, ತಮ್ಮ ಹಿತಾಸಕ್ತಿಯನ್ನು ಕಾಪಾಡುವ ಆಂಶಗಳಿಗೆ ಹೆಚ್ಚಿನ ಮಹತ್ವ ನೀಡಿದ್ದಾರೆ. ಶ್ರೇಣಿಕೃತ ಸಾಮಾಜಿಕ ವ್ಯವಸ್ಥೆಯನ್ನು ಹೊಂದಿರುವ ಭಾರತದಲ್ಲಿ ಅಂದು ರೂಪಗೊಂಡ ಚರಿತ್ರೆ ಮೇಲ್ ಶ್ರೇಣಿಯವರ ಹಿತಾಸಕ್ತಿಯನ್ನು ಕಾಪಾಡುವಂತ ಚರಿತ್ರೆ ನಿರ್ಮಾಣವಾಯಿತು. ಇದಕ್ಕೆ ನಿದರ್ಶನಗಳೆಂದರೆ ಸುವರ್ಣಯುಗದ ಪರಿಕಲ್ಪನೆಗೆ ಸೇರಿಸಿರುವ ವಿಜಯನಗರ ಮತ್ತು ಗುಪ್ತ ಸಾಮ್ರಾಜ್ಯದ ಚರಿತ್ರೆಗಳು.

ಈ ಬಗೆಯ ಚರಿತ್ರೆಯ ರಚನೆಗೆ ಒಂದು ಹೊಸ ಬಗೆಯ ದೃಷ್ಟಿಕೋನ ಆರಂಭವಾದದ್ದು ಸ್ವಾತಂತ್ರ್ಯ ನಂತರದಲ್ಲಿ. ಕೇವಲ ಒಂದೆರಡು ವರ್ಗದ ಹಿತಾಸಕ್ತಿಯನ್ನು ಕಾಪಾಡಿದ ಚರಿತ್ರೆಯ ನಿರ್ಮಾಣಕ್ಕೆ ಇಟ್ಟುಕೊಂಡಿದ್ದ ಆಕರಗಳ ಪುನರ್ ಪರಿಶೀಲನೆ ಒಳಪಡಬೇಕಾದ ಅಗತ್ಯತೆಯ ಅರಿವಾಯಿತು. ಹಾಗಾಗಿ ಇಂಡಿಯಾದ ಚರಿತ್ರೆ ರಚನೆಗೆ ಕೇವಲ ಲಿಖಿತಾಕರಗಳು ಪರಿಪೂರ್ಣವಾದ ಮಾಹಿತಿಯನ್ನು ನೀಡುವುದಿಲ್ಲ. ಬದಲಾಗಿ ಮೌಖಿಕ ಆಕರಗಳೂ ಕೂಡ

ಅಷ್ಟೇ ಮಹತ್ವದವುಗಳು ಎನ್ನುವ ಪ್ರಶ್ನೆ ಬೆಳೆಯಿತು. ಇದಕ್ಕೆ ಕಾರಣ ಲಿಖಿತ ಆಕರಗಳು ಜನಸಾಮಾನ್ಯರ ಸಾಂಸ್ಕೃತಿಕ ಬದುಕನ್ನು ಕಟ್ಟಿಕೊಡುವಲ್ಲಿ ವಿಫಲವಾಗಿದ್ದವು ಎನ್ನುವುದು. ಹೀಗಾಗಿ ತಳಸಮುದಾಯದ ಮತ್ತು ಸ್ಥಳೀಯ ಚರಿತ್ರೆಯ ನಿರ್ಮಾಣದಲ್ಲಿ ಮೌಖಿಕ ಆಕರಗಳಿಗೂ ಪ್ರಾಶಸ್ತ್ಯ ಕಲ್ಪಿಸಲಾಯಿತು. ಅದರೆ ಪರಿವರ್ತಿತ ಸಾಮಾಜಿಕ ವ್ಯವಸ್ಥೆಯಲ್ಲಿ ಮೌಖಿಕ ಪರಂಪರೆಯಲ್ಲಿ ಬೆಳೆದು ಬಂದ ಐತಿಹ್ಯ ಮತ್ತು ಪುರಾಣಗಳು ಒಂದೇ ಸ್ಥಿತಿಯಲ್ಲಿ ಇಲ್ಲ. ಕಾಲಂತರದಲ್ಲಿ ಬೆಳೆಯುತ್ತಾ ಬಂದ ಇವುಗಳಿಗೆ ಅನೇಕ ಕಲ್ಪನಾಂಶಗಳು ಸೇರಿಕೊಂಡಿವೆ. ಪರಿವರ್ತಿತ ಸಮಾಜದಲ್ಲಿನ ನಂಬಿಕೆ ಮತ್ತು ಮೌಲ್ಯಗಳು ಈ ಬಗೆಯ ರೂಪಾಂತರಕ್ಕೆ ಹಲವು ಅಂಶಗಳು ಪ್ರೇರಕವಾಗಿವೆ. ಅವುಗಳೆಂದರೆ ಸ್ಥಳ, ಐತಿಹ್ಯ ಮತ್ತು ಪುರಾಣಗಳನ್ನು ಕಟ್ಟುವ ಕಲಾಕಾರನ ಕಲಾತ್ಮಕತೆ, ಅವನ ಮನೋಭಾವ(ಸಮುದಾಯ ಆಧಾರಿತ ಭಾವನೆಗಳು), ಅಂದಿನ ಸಮಾಜದ ಒತ್ತಾಸೆಗಳು, ಆರ್ಥಿಕ-ಧಾರ್ಮಿಕ ಸ್ಥಿತಿಗತಿಗಳು, ಪ್ರಾಕೃತಿಕ ಆಗುಹೋಗುಗಳು.

ಹೀಗೆ ಒಂದು ಕಾಲದ ವರ್ತಮಾನದ ಒತ್ತಾಸೆಗಳಿಗೆ ಅನುಗುಣವಾಗಿ ರಚನೆಯಾದ ಐತಿಹ್ಯ ಮತ್ತು ಪುರಾಣಗಳು ಬದಲಾದ ನಂತರದ ಕಾಲದಲ್ಲಿನ ಒತ್ತಾಸೆಗಳನ್ನು ಮೈಗೂಡಿಸಿಕೊಂಡು ಹೊಸ ರೂಪವನ್ನು ಧರಿಸುತ್ತವೆ. ಹೀಗೆ ಕಾಲಾಂತರದಲ್ಲಿ ಭಿನ್ನ ರೂಪವನ್ನು ಪಡೆದ ಪುರಾಣ ಮತ್ತು ಐತಿಹ್ಯಗಳು ಚರಿತ್ರೆಯ ನಿರ್ಮಾಣಕ್ಕೆ ಹೇಗೆ ಪ್ರಮುಖ ಆಕರಗಳಾಗುತ್ತವೆ ಎನ್ನುವ ಪ್ರಶ್ನೆ ಹುಟ್ಟಿಕೊಳ್ಳುತ್ತದೆ. ಭಾರತ "ಜಾತಿನಿಷ್ಠ ದೇಶ. ಸಾಮಾಜಿಕ ಶ್ರೇಣೀಕರಣಕ್ಕೆ ಇಲ್ಲಿ ಜಾತಿಯೇ ತಳಹದಿಯಾಗಿದೆ. ಶ್ರೇಣೀಕರಣದ ಮೇಲ್ತುದಿಯಲ್ಲಿ ಇರುವ ಬ್ರಾಹ್ಮಣನು ಪೂರ್ತಿ 'ಮಡಿ ಅಥವಾ ಶುದ್ಧ'(Pure) ನಾದರೆ ಕೆಳತುದಿಯಲ್ಲಿರುವ ಪಂಚಮ ಅಥವಾ ಹೊಲೆಯ ಪೂರ್ತಿಯಾಗಿ ಮೈಲಿಗೆ ಅಥವಾ ಅಶುದ್ಧ(Impure) ನಾಗುತ್ತಾನೆ. ಇವೆರಡರ ಮಧ್ಯದಲ್ಲಿ ಬರುವವರು ಮೇಲಿನವರ ದೃಷ್ಟಿಯಲ್ಲಿ ಮೈಲಿಗೆಯಾಗಿಯೂ, ಕೆಳಗಿನವರ ದೃಷ್ಟಿಯಲ್ಲಿ 'ಮಡಿ'ಯಾಗಿಯೂ ವರ್ತಿಸುತ್ತಾರೆ. ಇಂಥ ಕಡೆ ಶ್ರೇಣೀಕರಣ ಮೇಲ್ತುದಿಯಿಂದ ಸೃಷ್ಟಿಯಾಗುವ ಐತಿಹ್ಯಗಳು, ತನ್ನ ಅನುಲೋಮ ಕ್ರಮದಲ್ಲಿ ಎಲ್ಲರಿಗೂ ಅರ್ಥಪೂರ್ಣವಾಗುತ್ತದೆ. ಆದರೆ ಕೆಳತುದಿಯಿಂದ ಸೃಷ್ಟಿಯಾದದ್ದು ತನ್ನ ವಿಲೋಮ ಕ್ರಮದಲ್ಲಿ ಮೇಲಿನವರಿಗೆ ಕೇವಲ ಕಟ್ಟುಕತೆಗಳಂತೆ ತೋರುತ್ತವೆ. ಇಂಥ ಕಡೆಗಳಲ್ಲಿ ಆಳುವ ವರ್ಗ ಅಥವಾ ಜಾತಿಯ ನಿರ್ಮಾಣ ಮಾಡಿದ ಐತಿಹ್ಯಗಳು ಸಾಮಾಜಿಕ ಶ್ರೇಣೀಕರಣವನ್ನು ಉಳಿಸುವ, ಮತ್ತಷ್ಟು ಬಲಪಡಿಸುವ, ಉದ್ದೇಶವನ್ನು ಹೊಂದಿರುತ್ತವೆ. ಜಾತಿಯ ಇತಿಹಾಸವು ವರ್ತಮಾನಕ್ಕೆ ಒಗ್ಗಿ ಬರುವಾಗ ಇತಿಹಾಸದ ಶ್ರೇಣೀಕರಣವು ವರ್ತಮಾನವನ್ನು ಬಲಪಡಿಸುತ್ತದೆ. ಆಧುನೀಕರಣದಿಂದ (Modernisation) ಜಾತಿ ಸಂಬಂಧಗಳು ಸಡಿಲವಾಗತೊಡಗಿದರೆ, ಆಗ ಹಳೆಯ ವ್ಯವಸ್ಥೆಯ ಗರ್ಭದಿಂದ ಹೊಸ ಐತಿಹ್ಯಗಳು ಹುಟ್ಟಿ ಹಳೆಯದನ್ನು ಗಟ್ಟಿಗೊಳಿಸಲು ಶ್ರಮಿಸಬಹುದು".[೧೬]

ಇಂತಹ ಸಂದರ್ಭದಲ್ಲಿ ಮೇಲ್ವರ್ಗ ಮತ್ತು ತಳಸಮುದಾಯಗಳ ನಡುವೆ ಸಂಘರ್ಷಾತ್ಮಕವಾದ ನೆಲೆಗಳು ಕಾಣಿಸಿಕೊಳ್ಳುತ್ತವೆ. ಮೇಲ್ವಗದವರು ಹಳೆ ಕಾಲದ ವ್ಯವಸ್ಥೆಯನ್ನು ಗಟ್ಟಿಗೊಳಿಸುವ ಬಗೆಗೆ ಯೋಚಿಸಿದರೆ, ತಳಸಮುದಾಯದವರು ಅದರ ವಿರುದ್ಧವಾಗಿ ಬದಲಾವಣೆಯ ಕುರಿತು ಯೋಚಿಸುತ್ತಾರೆ. ಹೀಗೆ ಸಂಘರ್ಷಾತ್ಮಕ ನೆಲೆಯಲ್ಲಿ ಐತಿಹ್ಯ ಮತ್ತು ಪುರಾಣಗಳನ್ನು ಆಕರವಾಗಿಸಿ ತಮ್ಮ ತಮ್ಮ ಚರಿತ್ರೆಯನ್ನು ನಿರ್ಮಾಣ ಮಾಡಿಕೊಳ್ಳಲು ಹಲವು ಸಮುದಾಯಗಳು ಪ್ರಯತ್ನಿಸುತ್ತವೆ. ಇಲ್ಲಿ ಕೆಲವು ಸಮುದಾಯಗಳಿಗೆ ಕಲ್ಪಿತವನಿಸಿದ್ದು, ಕೆಲ ಸಮುದಾಗಳಿಗೆ ಸತ್ಯದ ಮಾದರಿಯಲ್ಲಿ ಕಾಣಿಸುತ್ತದೆ. ಈ ಸಂಘರ್ಷವು ಕೇವಲ ಮೌಖಿಕ ಆಕರಗಳಿಗಷ್ಟೇ ಸೀಮಿತವಾಗದೆ ಲಿಖಿತ ಆಕರಗಳಿಗೂ ಸಂಬಂಧಿಸಿದೆ.

ಇಲ್ಲಿ ಶಾಸನಗಳಿಗೆ ಸಂಬಂಧಿಸಿದ ವಿಷಯವನ್ನು ಕುರಿತು ವಿವೇಚಿಸಬಹುದು. ಶಾಸನಗಳನ್ನು ಚರಿತ್ರೆ ನಿರ್ಮಾಣದ ಅಧಿಕೃತ ದಾಖಲೆಗಳೆಂದು ಕರೆಯಲಾಗುತ್ತದೆ. ಆದರೆ ಇಂದು ಶಾಸನಗಳ ಕುರಿತ ಈ ಅಭಿಪ್ರಾಯವೂ ಸರ್ವಸಮ್ಮತವಾಗಿಲ್ಲ. ಶಾಸನಗಳೂ ಸಹ ಆಯಾ ಕಾಲದ ಒಟ್ಟಾರೆ ಸಾಮಾಜಿಕ ಚಿತ್ರಣವನ್ನು ಕೊಡುವಲ್ಲಿ ವಿಫಲವಾಗಿವೆ. ಅವು ರಾಜಮಹಾರಾಜರ, ಸಾಮಂತರ ಇತಿಹಾಸದ ಮೇಲೆ ಬೆಳಕು ಚೆಲ್ಲುತ್ತವೆ. ಕ್ವಚಿತ್ತಾಗಿ ಜನಸಾಮಾನ್ಯರ ಕುರಿತ ಉಲ್ಲೇಖಗಳು ಶಾಸನಗಳಲ್ಲಿ ಕಂಡು ಬಂದರೂ ಅವು ಅವರ ಚರಿತ್ರೆಗಿಂತ ದಾನ ತೆಗೆದುಕೊಂಡವರ ಬಗೆಗಿನ ವಿವರಗಳು ಹೆಚ್ಚಾಗಿ ಕಂಡು ಬರುತ್ತವೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಂಡುಬಂದ ಅಂಶವನ್ನು ಇಲ್ಲಿ ಉಲ್ಲೇಖಿಸುವುದು ಸೂಕ್ತವೆನಿಸುತ್ತದೆ. ಕಮಲಾಪುರದ ಪೆನುಗೊಂಡ ದಾರಿಯಲ್ಲಿನ ಗವುಂಡರ ವೆಂಕಟೇಶ ಇವರ ಗದ್ದೆಯಲ್ಲಿ ದೊರೆತ ಅಪ್ರಕಟಿತ ಶಾಸನದಲ್ಲಿ ಅಚ್ಯುತದೇವರಾಯನ ಆಡಳಿತ ಸಂದರ್ಭದಲ್ಲಿ ಸೇನಬೋವನಾಗಿ ಕೆಲಸ ಮಾಡುತ್ತಿದ್ದ ವ್ಯಕ್ತಿಯೊರ್ವನು ದಾನ ನೀಡಿದ ಉಲ್ಲೇಖವಿದೆ. ಇಲ್ಲಿ ದಾನ ಕೊಟ್ಟವರ ಹೆಸರು ಮಾತ್ರ ಇದೆ. ಉಳಿದಂತೆ ಯಾವುದೇ ವಿವರಗಳು ಅಲ್ಲಿ ಸಿಗುವುದಿಲ್ಲ.

ಆದರೆ ಜನಸಾಮಾನ್ಯರ ಚರಿತ್ರೆಯನ್ನು ರೂಪಿಸಿಕೊಳ್ಳಲು ವೀರಗಲ್ಲು, ಮಹಾಸತಿಗಲ್ಲು ಮತ್ತು ಅವುಗಳ ಸುತ್ತ ಹುಟ್ಟಿಕೊಂಡ ಐತಿಹ್ಯಗಳು, ಪುರಾಣಗಳು ಸಾಕಷ್ಟಿರುತ್ತವೆ. ಆದರೆ ಲಿಪಿಸಹಿತ ವೀರಗಲ್ಲು ಮತ್ತು ಮಹಾಸತಿಗಲ್ಲುಗಳು ಸಿಗುವ ವಿವರಗಳು ತೀರಾ ವಿರಳ. ಅವುಗಳ ಸುತ್ತ ಹುಟ್ಟಿರುವ ಐತಿಹ್ಯ ಮತ್ತು ಪುರಾಣಗಳಿಂದಲೇ ಹೆಚ್ಚಿನ ಮಾಹಿತಿ ತಿಳಿದುಕೊಳ್ಳಬೇಕಾಗುತ್ತದೆ. ಹೀಗೆ ಮೌಖಿಕ ಮತ್ತು ಲಿಖಿತ ದಾಖಲೆಗಳನ್ನ ಆಧರಿಸಿ ಚರಿತ್ರೆಯ ರಚನೆಯ ಸಂದರ್ಭದಲ್ಲಿ ಹಲವು ಗುಣಾವಗುಣಗಳಿವೆ. ಹಾಗಾಗಿ ಎರಡೂ ಆಕರಗಳು ಚರಿತ್ರಗೆ ಮುಖ್ಯವೆ. ಆದರೆ ಕಲ್ಪಿತ ಮತ್ತು ಸತ್ಯಗಳ ಕುರಿತು ನಿಷ್ಪಕ್ಷಪಾತವಾದ ನಿಲುವಿನೊಂದಿಗೆ ತೀರ್ಮಾನ ತೆಗೆದುಕೊಂಡಾಗ ಚರಿತ್ರೆಯನ್ನು ಕಟ್ಟಬಹುದಾಗಿದೆ.

ಪುರಾಣ, ಐತಿಹ್ಯ ಹಾಗೂ ಶಾಸನಗಳು ಒಂದು ಜನಾಂಗದ, ದೇಶದ–ಒಟ್ಟಾರೆ ಮಾನವನ ಏಳಿಗೆಗೆ ಇತಿಹಾಸ ಅಧ್ಯಯನದ ಮಹತ್ವವನ್ನು ಸೂಚಿಸುತ್ತವೆ. ಕೇವಲ ಅವನ ನಿತ್ಯಜೀವನದ ಕ್ರಮ ರೀತಿ ನೀತಿಗಳನ್ನು ಹೇಳುವುದಲ್ಲದೆ, ಸಮಾಜದ ವಿವಿಧ ಕ್ಷೇತ್ರಗಳಲ್ಲಿ ಕಾಲಕಾಲಕ್ಕೆ ಮಾನವನು ತನ್ನ ಪೂರ್ವಜರ ಅನುಭವ ಪರಂಪರೆಯ ಹಿನ್ನೆಲೆಯಲ್ಲಿ ಹಾಗೂ ತಾನು ಜೀವಿಸಿರುವ ಪರಿಸರ ಮತ್ತು ಇತರರ ಸಂಪರ್ಕದ ಪ್ರಭಾವದಿಂದ ವಾಸ್ತವಿಕ ಜೀವನದ ಸುಧಾರಣೆಯನ್ನು, ನಿಗೂಢವಾದ ವಿಶ್ವದ ರಹಸ್ಯೆಯ ತತ್ವವನ್ನು ತಿಳಿದುಕೊಳ್ಳುವ ನಾನಾ ಬಗೆಯ  ಪ್ರಯತ್ನಗಳು; ಇಂಥ ಪ್ರಯತ್ನಗಳಲ್ಲಿ ಅವನ ಸೋಲು–ಗೆಲುವು, ಗುಣ–ದೋಷಗಳು ಮೊದಲಾದ ವಿಷಯಗಳ ಸಮಗ್ರ ಅಧ್ಯಯನದ ಫಲವೇ ಇತಿಹಾಸ.

ನಮ್ಮ ದೇಶದ ಇತಿಹಾಸ ದೀರ್ಘವಾದದ್ದು ಮತ್ತು ಸಮೃದ್ಧವಾದದ್ದು. ಆದರೆ ನಮ್ಮ ಪ್ರಾಚೀನರಿಗೆ ಇತಿಹಾಸ ಪ್ರಜ್ಞೆ ಕಡಿಮೆ ಎಂಬ ಮಾತಿದೆ. ನಮ್ಮ ಬಹುಪಾಲು ಇತಿಹಾಸ ಪುರಾಣ, ಐತಿಹ್ಯ ಮತ್ತು ಶಾಸನಗಳಲ್ಲಿ ಹುದುಗಿದೆ. ನಮ್ಮವರು ಇತಿಹಾಸ ಸೃಷ್ಟಿಸಬಲ್ಲರು ಆದರೆ ಚರಿತ್ರೆ ಬರೆಯಲಾರರು. ಐತಿಹಾಸಿಕ ವಸ್ತುಗಳನ್ನು ಸಂರಕ್ಷಿಸುವುದರಲ್ಲಿಯೂ ಬಹಳ ಹಿಂದುಳಿದವರು. ಇತಿಹಾಸವೆಂದರೆ ನಮ್ಮ ಪ್ರಾಚೀನರಿಗೆ ಅಲಕ್ಷ್ಯ. ಕಾರಣ ಅವುಗಳನ್ನು ಕಥೆಗಳ ರೂಪದಲ್ಲಿ ಮೌಖಿಕವಾಗಿ ನಿರೂಪಿಸಿದ್ದಾರೆ. ಆದ್ದರಿಂದ ಪ್ರಸ್ತುತ ಇತಿಹಾಸಕ್ಕೆ ಪುರಾಣ, ಐತಿಹ್ಯಗಳಂತಹ ಮೌಖಿಕ ಆಕರಗಳೇ ಇತಿಹಾಸ ರಚನೆಗೆ ಪೂರಕ ಆಕರ. ಇವುಗಳ ಹೊರತಾಗಿ ನಿರ್ದಿಷ್ಟವಾದ ಆಕರಗಳು ದೊರಕಿದಂತೆ ನಮ್ಮ ನೈಜ ಇತಿಹಾಸವನ್ನು ಬೆಳಕಿಗೆ ತರಲು ಸಾಧ್ಯ.

**ಅಡಿಟಿಪ್ಪಣಿಗಳು.**

೧. ಉದ್ಧೃತ: ಗೋ.ರು. ಚನ್ನಬಸಪ್ಪ., ಲೇಖನ, ಪುರಾಣ ಮತ್ತು ಐತಿಹ್ಯ (ಜಾನಪದ ದರ್ಶನ, ಸಂ: ಬೈರಮಂಗಲ ರಾಮೇಗೌಡ), ಪು.೯೭-೯೮.

೨. ಪುರುಷೋತ್ತಮ ಬಿಳಿಮಲೆ., ಕೂಡುಕಟ್ಟು, ಪು.೯೬.

೩. ಚಿದಾನಂದಮೂರ್ತಿ ಎಂ., ಜನ-ಜನಪದ-ಜಾನಪದ, ಪು.೬೮.

೪. ಪಡಶೆಟ್ಟಿ ಎಂ.ಎಂ., ಪುರಾಣದ ತಾತ್ವಿಕ ವಿವೇಚನೆ(ವೀರಶೈವಾಮೃತ ಪುರಾಣ, ಸಂ:ಗುರುಪಾದಪ್ಪ ಮರಿಗುದ್ದಿ) ಪು.೭೯.

೫. ಪುರುಷೋತ್ತಮ ಬಿಳಿಮಲೆ., ಕೂಡುಕಟ್ಟು, ಪು.೯೬.

೬. ರಾಮಚಂದ್ರಪ್ಪ ಬರಗೂರು., ಪುರಾಣ, ಇತಿಹಾಸ ಮತ್ತು ವರ್ತಮಾನ(ಸಾಹಿತ್ಯ ವಿಮರ್ಶೆ, ಸಂ: ಶಿವರಾಮ ಕಾಡನಕುಪ್ಪೆ), ಪು.೧.

೭. Malinowski B., Myth in Primitive Psycology, p.೭೯.

೮. ನಾಗಭೂಷಣಸ್ವಾಮಿ ಓ.ಎಲ್., ಪುರಾಣ, ಪು.೧೫.

೯. ನಾಗಭೂಷಣಸ್ವಾಮಿ ಓ.ಎಲ್., ಪುರಾಣ, ಪು.೧೫.

೧೦. ಉದ್ಧೃತ: ಶಂಕರನಾರಾಯಣ ತೀ.ನಂ., ಜನಪದ ಪುರಾಣಗಳು ಮತ್ತು ಆಚರಣೆಗಳು (ಜಾನಪದ ಅಧ್ಯಯನ ವಿಚಾರ ಸಂಕಿರಣ, ಸಂ: ಹಂಪ ನಾಗರಾಜಯ್ಯ), ಪು.೧೧೭.

೧೧. ಗೋ.ರು.ಚನ್ನಬಸಪ್ಪ., ಪುರಾಣ ಮತ್ತು ಐತಿಹ್ಯ(ಜಾನಪದ ದರ್ಶನ, ಸಂ:ಬೈರಮಂಗಲ, ರಾಮೇಗೌಡ), ಪು.೯೭-೯೮.

೧೨. ವಸಂತ ಕುಮಾರ ತಾಳ್ತಜೆ., ಪು.೧೨೧.

೧೩. ಬಿಳಿಮಲೆ ಪುರುಷೋತ್ತಮ., ಐತಿಹ್ಯ: ಸ್ವರೂಪ-ಲಕ್ಷಣ-ಪ್ರಕಾರಗಳು(ಜನಪದ ಸಾಹಿತ್ಯ ಪ್ರಕಾರಗಳು, ಸಂ: ಶಂಕರನಾರಾಯಣ ತೀ.ನಂ., ವೆಂಕಟೇಶ ಎಂ.ಎನ್)ಪು.೧೨೯.

೧೪. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ.೨೯.

೧೫. ಪರಮಶಿವಮೂರ್ತಿ ಡಿ.ವಿ., ಕನ್ನಡ ಶಾಸನ ಶಿಲ್ಪ, ಪುಟ.೧.

೧೬. ಪುರುಷೋತ್ತಮ ಬಿಳಿಮಲೆ., ಐತಿಹ್ಯಗಳು (ಸುವರ್ಣ ಜಾನಪದ ಲೇಖನಗಳು, ಸಂ: ವೀರಣ್ಣ ದಂಡೆ, ಶ್ರೀಪಾದಶೆಟ್ಟಿ) ಪು.೫೦.

ಅಧ್ಯಾಯ – ನಾಲ್ಕು

# ಶಾಸನಗಳಲ್ಲಿ ಪೌರಾಣಿಕ ಅಂಶಗಳು

---

೪.೧ ವಂಶ ಸಂಬಂಧಿ ಪೌರಾಣಿಕ ಅಂಶಗಳು

೪.೨ ವ್ಯಕ್ತಿ ಸಂಬಂಧಿ ಪೌರಾಣಿಕ ಅಂಶಗಳು

೪.೩ ಸ್ಥಳ ಸಂಬಂಧಿ ಪೌರಾಣಿಕ ಅಂಶಗಳು

## ಅಧ್ಯಾಯ–ನಾಲ್ಕು

## ಶಾಸನಗಳಲ್ಲಿ ಪೌರಾಣಿಕ ಅಂಶಗಳು

ಶಾಸನಗಳಲ್ಲಿ ವಿಷಯವನ್ನು ನಿರೂಪಿಸುವಾಗ ಶಾಸನಕಾರರು ವಿಭಿನ್ನ ಮಾರ್ಗಗಳನ್ನು ಅನುಸರಿಸಿರುವುದು ಕಂಡುಬಂದಿದೆ. ಇದ್ದ ವಿಷಯವನ್ನು ಇದ್ದಂತೆಯೆ ಹೇಳದೆ ಅದನ್ನು ಆಕರ್ಷಕವಾಗಿ, ಅತಿರಂಜಕವಾಗಿ ಹೇಳಿ ಜನರ ಮನಸ್ಸನ್ನು ಸೆಳೆಯುವ ಪ್ರಯತ್ನ ಮಾಡಿದ್ದಾರೆ. ಅಂತಹ ಸಂದರ್ಭದಲ್ಲಿ ಅವರು ಅನೇಕ ಬಾರಿ ಮೊರೆ ಹೋಗುವುದು ಪೌರಾಣಿಕ ಅಂಶಗಳತ್ತ ಎನ್ನುವುದು ಗಮನಾರ್ಹ ಸಂಗತಿ. ಬಹುಶಃ ಜನರ ಮನಃಸ್ಥಿಯನ್ನರಿತು ಅವರು ಇಂತಹ ವಿಷಯಗಳನ್ನು ಆಯ್ಕೆ ಮಾಡಿಕೊಂಡಿರಬಹುದೆನಿಸುತ್ತದೆ. ಹಾಗೆಯೇ ಪುರಾಣಗಳ ಬಗ್ಗೆ ಶಾಸನಕಾರರಿಗಿದ್ದ ಸೆಳೆತವೂ ಕೂಡ ಇದಕ್ಕೆ ಮತ್ತೊಂದು ಕಾರಣವಾಗಿರಬಹುದೇನೋ. ಭಾರತೀಯರ ಇತಿಹಾಸದ ಕುರಿತ ಕಲ್ಪನೆಯು ಗತಿಸಿ ಹೋದ ಘಟನೆಗಳನ್ನು, ಬದುಕಿ ಬಾಳಿದ ವ್ಯಕ್ತಿಗಳನ್ನು ಕೇವಲ ಘಟನೆ, ವ್ಯಕ್ತಿಗಳನ್ನಾಗಿ ನೋಡದೆ ಅವುಗಳ ಹಿಂದಿನ ಮೌಲ್ಯಗಳನ್ನಾಗಿ ಗುರುತಿಸಿ ಅವುಗಳನ್ನು, ಅವರುಗಳನ್ನು, ವಸ್ತು ಸ್ಥಿತಿಗಿಂತಲೂ ಭಿನ್ನವಾದ ಸ್ತರದಲ್ಲಿರಿಸಿ ಅದನ್ನು ಕಥಾರೂಪದಲ್ಲಿ; ಸಾಂಕೇತಿಕವಾದ ರೀತಿಯಲ್ಲಿ ಹೇಳುವ ಧೋರಣೆಯಿಂದ ಕೂಡಿದ್ದಾಗಿದೆ. ಈ ಪ್ರವೃತ್ತಿಯ ಪರಿಣಾಮದಿಂದಾಗಿಯೆ ಶಾಸನಗಳಲ್ಲಿ ಅನೇಕ ಪೌರಾಣಿಕ ಅಂಶಗಳು ನುಸುಳಲು ಸಹಾಯಕವಾಗಿರಬಹುದು.

ಪೌರಾಣಿಕ ಅಂಶಗಳು ಮನುಷ್ಯನ ಅರಿವಿನ ಪ್ರಜ್ಞೆಯನ್ನು ವಿಸ್ತರಿಸುವ ಘಟಕವಾಗಿವೆ. ಇದರ ಅಂತರಂಗವನ್ನು ಹೊಕ್ಕಾಗ ಅನೇಕ ಪವಾಡ ದೃಶ್ಯಗಳು, ದಂತಕತೆಗಳು, ಪುಣ್ಯಕತೆಗಳು, ಅಪೌರುಷೇಯ ಘಟನೆಗಳು ಕಂಡುಬರುತ್ತವೆ. ಇವು ಪೀಳಿಗೆಯಿಂದ ಪೀಳಿಗೆಗೆ ವಿಸ್ತಾರಗೊಳ್ಳುತ್ತಾ ಮುಂದಿನ ತಲೆಮಾರಿನವರೆಗೆ ಐತಿಹಾಸಿಕ ದಾಖಲೆಯ ರೂಪದಲ್ಲಿ ಚರಿತ್ರೆಯನ್ನು ಹೇಳುತ್ತವೆ.

ಇವುಗಳು ಮಾನವನ ಅರಿವಿನ ಪ್ರಜ್ಞೆಯನ್ನು ವಿಸ್ತರಿಸುವುದರ ಜೊತೆಗೆ ವಂಶ, ವ್ಯಕ್ತಿ, ಸ್ಥಳ, ಅಥವಾ ಪ್ರದೇಶಕ್ಕೆ ಸೈದ್ಧಾಂತಿಕ ಮೌಲ್ಯವನ್ನು ಒದಗಿಸುವ ಸೃಜನಶೀಲ ಕ್ರಿಯೆಯಾಗಿವೆ. ಈ ಅರಿವಿನ ಸುಳಿಯಲ್ಲಿ ಬಂದ ನಮ್ಮ ಪ್ರಜ್ಞೆಯು ರಾಜವಂಶಾವಳಿಗಳಿಗೂ ಹಾಗೂ ರಾಜನಿಗೂ ನೈತಿಕ ಮೌಲ್ಯ ಒದಗಿಸಲು ಪ್ರೇರಕ ಮತ್ತು ಸಹಾಯಕವಾಗುತ್ತವೆ. ಹಾಗೆಯೇ ನಾಡಿನ ಪ್ರಭುತ್ವವನ್ನು ಹಿಡಿದ ರಾಜನ ವಂಶ ಅಥವಾ ರಾಜನ ವಂಶವಾಳಿ ಯಾವುದೇ ಕೆಳಹಂತದ್ದಾಗಿದ್ದರೂ ಕೂಡ ಆ ವ್ಯಕ್ತಿಗೆ ಪೂಜ್ಯ ಅಥವಾ ಗೌರವವನ್ನು ತಂದುಕೊಡುವ ಉದ್ದೇಶದಿಂದ ಪುರೋಹಿತಶಾಹಿಗಳು ಅಥವಾ ಅಧಿಕಾರಸ್ಥರು ಆ ರಾಜನ ವಂಶಕ್ಕೆ ಹಾಗೂ ಆತನಿಗೆ ಪೌರಾಣಿಕ ಚೌಕಟ್ಟನ್ನು ಕಟ್ಟಿ, ಆ ವ್ಯಕ್ತಿಗೆ ಹಾಗೂ ಅವನ ವಂಶಕ್ಕೆ ಮೌಲ್ಯ ಒದಗಿಸಿ, ಜನರಲ್ಲಿ ಉನ್ನತ ಭಾವನೆ ಉಂಟುಮಾಡುವಂತೆ ಮಾಡುವುದಾಗಿತ್ತು. ಅಂದರೆ ವ್ಯಕ್ತಿ ಅಥವಾ ರಾಜ ಅಸಮರ್ಪಕ ಆಡಳಿತ ಅಥವಾ ದುರ್ಬಲ ಗುಣವನ್ನುಳ್ಳವನಾಗಿದ್ದರೂ ಅವನ ಮೇಲೆ ಪ್ರಜೆಗಳಲ್ಲಿ ಪೂಜ್ಯಭಾವನೆ ಅಥವಾ ಗೌರವ ಬರಲೆಂಬ ಕಾರಣದಿಂದ ಆತನನ್ನು ಪೌರಾಣೀಕರಿಸಿ, ಹೊಗಳಿ ರಾಜನನ್ನು ತಮ್ಮ ಹಿಡಿತಕ್ಕೆ ತೆಗೆದುಕೊಳ್ಳುವ ಒಂದು ಒಳಹುನ್ನಾರ ಪುರೋಹಿತಶಾಹಿಗಳಲ್ಲಿ ಇತ್ತು. ಈ ಕಾರಣದಿಂದಾಗಿ ರಾಜಮಹಾರಾಜರು, ಸಾಮಾಂತರು, ಪಾಳೆಗಾರರು ಹಾಕಿಸಿದಂತಹ ನೂರಾರು ಶಾಸನಗಳಲ್ಲಿ ಪೌರಾಣಿಕ ಅಂಶಗಳು ಕಂಡುಬರುತ್ತವೆ.

ರಾಜನು ಸಾಮಾನ್ಯ ಜನರಿಗಿಂತಲೂ ಶ್ರೇಷ್ಠನಾದವನು. ರಾಜತ್ವವು ಆತನಿಗೆ ದೈವದತ್ತವಾಗಿ ಲಭಿಸಿರುವಂಥದ್ದು. ಇಂತಹ ಅಂಶಗಳನ್ನು ಜನರಲ್ಲಿ ಬೇರೂರುವಂತೆ ಮಾಡುವಾಗಲೂ ಪೌರಾಣಿಕ ಅಂಶಗಳು ಶಾಸನಗಳಲ್ಲಿ ಕಾಣಿಸಿಕೊಂಡಿವೆ. ಅಂತಹ ಸಂದರ್ಭದಲ್ಲಿ ಅರಸನ ಮನೆತನದ ಮೂಲವನ್ನು ಸೂರ್ಯ, ಚಂದ್ರ, ಇಂದ್ರರಿಗೆ ಸಮೀಕರಿಸುವುದು ಸರ್ವವಿದಿತವಾದುದು. ಇದಕ್ಕೆ ಪೂರಕವಾಗಿ ಅನೇಕ ಪುರಾಣ ಸಂಬಂಧಿ ಕಥೆಗಳನ್ನು ಸೃಷ್ಟಿಸಿ, ಅವುಗಳನ್ನೆ ವಾಸ್ತವದ ನಿಜ ಸಂಗತಿಗಳೆಂದು ಚಿತ್ರಿಸಲಾಯಿತು. ಈ ಹಿನ್ನೆಲೆಯಲ್ಲಿಯೆ ಅನೇಕ ರಾಜರ ವಿಷಯಗಳು ಪೌರಾಣಿಕ ಅಂಶಗಳೊಂದಿಗೆ ಕನ್ನಡ ನಾಡಿನ ಅನೇಕ ಶಾಸನಗಳಲ್ಲಿ ಕಾಣಿಸಿಕೊಂಡಿರುವುದನ್ನು ಕಾಣಬಹುದಾಗಿದೆ.

ಶಾಸನಗಳಲ್ಲಿ ಅನೇಕ ಬಗೆಯ ಪೌರಾಣಿಕ ಅಂಶಗಳು ಲಭ್ಯವಿವೆ. ಆದರೆ ಪ್ರಸ್ತುತ ಅಧ್ಯಾಯದಲ್ಲಿ ಶಾಸನಗಳಲ್ಲಿ ಕಾಣಿಸಿಕೊಂಡಿರುವ ಪೌರಾಣಿಕ ಅಂಶಗಳನ್ನು ವಂಶ ಸಂಬಂಧಿ ಪೌರಾಣಿಕ ಅಂಶಗಳು, ವ್ಯಕ್ತಿಗಳಿಗೆ ಸಂಬಂಧಿಸಿದ ಪೌರಾಣಿಕ ಅಂಶಗಳು ಹಾಗೂ ಸ್ಥಳಗಳಿಗೆ ಸಂಬಂಧಿಸಿದಂತಹ ಪೌರಾಣಿಕ ಅಂಶಗಳೆಂದು ವಿಭಾಗಿಸಿಕೊಂಡು ಅಧ್ಯಯನಕ್ಕೊಳಪಡಿಸುವ ಪ್ರಯತ್ನ ಇಲ್ಲಿದೆ.

## ೪.೧ ವಂಶ ಸಂಬಂಧಿ ಪೌರಾಣಿಕ ಅಂಶಗಳು

ಅರಸ ಅಥವಾ ಸಾಮಂತ ಮನೆತನದವರು ತಮ್ಮ ಶ್ರೇಷ್ಠತೆಯನ್ನು ಸಾರುವ ಸಲುವಾಗಿ ವಂಶದ ಹಿನ್ನೆಲೆಯನ್ನು ಮೊದಲು ವೈಭವಯುತವಾಗಿ ಕಟ್ಟುವ ಪ್ರಯತ್ನ ಅನೇಕ ಶಾಸನಗಳಲ್ಲಿ ಕಂಡುಬಂದಿದೆ. ಅಂದರೆ ವಂಶ ಮತ್ತು ಮೂಲವನ್ನು ಕೀರ್ತಿಸುವಾಗ ಧಾರ್ಮಿಕ ಭಾವನೆಗಳನ್ನು ಹಾಗೂ ಪರಂಪರಾಗತವಾಗಿ ರೂಢಿಗೆ ಬಂದ ನಂಬಿಕೆಗಳನ್ನು ಬಳಸಿಕೊಂಡು ಅನೇಕ ಶಾಸನಕಾರರು ಪೌರಾಣಿಕ ಅಂಶಗಳನ್ನು ನಿರೂಪಿಸಿದ್ದಾರೆ. "ಪ್ರತಿಯೊಂದು ಅರಸೊತ್ತಿಗೆಯೂ ತಾನು 'ಸೂರ್ಯ' ಇಲ್ಲವೇ 'ಚಂದ್ರ' ವಂಶದವರೆಂಬುದಾಗಿ ಗುರುತಿಸಿಕೊಳ್ಳುವತ್ತ ಪೈಪೋಟಿ ನಡೆಸಿದವು. ವೃತ್ತಿಯಿಂದ ಕ್ಷತ್ರಿಯರಾಗಿರುವ ತಾವು ತಮ್ಮವರ ಮುಂದೆ ಸಾಮಾನ್ಯರಲ್ಲ, ಅಸಾಮಾನ್ಯರೆಂಬ ಹುಸಿ ಹೆಮ್ಮೆಯನ್ನು ಮೆರೆಯುವ ಸಲುವಾಗಿ ಈ ರೀತಿ ಮಾಡಿದರು. ತಮ್ಮ ವಂಶದ ಹುಟ್ಟಿನ ಬಗ್ಗೆ, ಹೆಸರಿನ ಬಗ್ಗೆ ಅಭೂತ ಕಲ್ಪನೆಗಳನ್ನು ಮಾಡುವುದರ ಮೂಲಕ ರಾಜನು ತಮ್ಮ ವಂಶ ಹಾಗೂ ಮೂಲಪುರುಷನನ್ನು ದೈವಾಂಶ ಸಂಭೂತನೆಂಬ ಭಾವನೆಯನ್ನು ಬಲಪಡಿಸಿದರು."[೧]

ವಿಜಯನಗರವನ್ನಾಳಿದ ಪ್ರಸಿದ್ಧ ರಾಜಮನೆತನವಾದ ಸಂಗಮ ವಂಶದವರ ಕುರಿತ ಶಾಸನೋಲ್ಲೇಖಗಳು ಪೌರಾಣಿಕ ಅಂಶಗಳಿಂದ ಕೂಡಿದ್ದು ಕಂಡು ಬರುತ್ತದೆ. ಕ್ರಿ.ಶ. ೧೪೧೦ರ ಶಾಸನದಲ್ಲಿ ದೇವರಾಯನ ವಂಶಾವಳಿಯನ್ನು ನೀಡುವ ಸಂದರ್ಭದಲ್ಲಿ ಸಂಗಮ ವಂಶದ ರಾಜರ ಮೂಲವನ್ನು ಚಂದ್ರನಿಂದ ಆರಂಭಿಸಿ ಯಯಾತಿಯ ವರೆಗೆ ಹೇಳಲಾಗಿದೆ. ಸಂಗಮನೆಂಬುವವನು ಯದುವಂಶದ ಸೋಮಾನ್ವಯದಲ್ಲಿ ಜನಿಸಿದನೆಂದು ಹೇಳಿದೆ.

"ಸರಸಿಜಭವಾತ್ರಿ ವಿಧು ಬುಧ ಪುರೂರವಾಯುಃಕ್ಷಿತೀಶ ನಹುಷ ಯಯಾತ್ಯಾದ್ಯರ ನುಕ್ರ[ಮ]ದಿಣಯದುಧರೆಗರಸೆನಿಸಿದನಾದುದಾತನಿಂ ಯದುವಂಶಂ॥ ಶ್ರೀಮತ್ಸೋಮಾ(ಂ) ನ್ವಯಕ್ಕುದ್ಭವಿಸಿದ ಯದುವಂಶಾವನೀಪಾಲರೊಳ್ನಿಸ್ಸೀಮ ಶ್ರೀಸಂಗಮಕ್ಷ್ಮಾಪತಿ ದೊರೆವಡದಂ ತತ್ತನೂಜಂ ಸಮಸ್ತೋರ್ವ್ವಿಮಾಣ್ಯಂ ರೂಢಿವೆತ್ತಂ ಹರಿಹರಣಧಟಿಂ ತಂನರೇಂದ್ರಾನುಜಂ ಸುತ್ರಾಮೋದ್ದಾಮ ಪ್ರತಾಪಂ ತಳೆದನಖಿಳಭೂಚಕ್ರಮಂ ಬುಕ್ಕರಾಯಂ।"[೨]ಎಂದು ಹೇಳುತ್ತಾ ಕೊನೆಗೆ ದೇವರಾಯನನ್ನು ಯಾದವ ವಂಶದ ಪ್ರದೀಪನೆಂದು ವರ್ಣಿಸಲಾಗಿದೆ.

ಚಾಲುಕ್ಯ ವಂಶದ ಕುರಿತ ಮಾಹಿತಿಯನ್ನು ನೀಡುವ ಶಾಸನವೊಂದರಲ್ಲಿ ವಿಷ್ಣುವಿನ ನಾಭಿ ಕಮಲದಿಂದ ಬ್ರಹ್ಮ ಜನಿಸಿದ. ಈ ಸ್ವಯಂಭುವಿಗೆ ಮನುಗಳು ಹುಟ್ಟಿ ಈ ಧರೆಯನ್ನು ಆಳಿದರು. ನಂತರ ಬುಧ ಜನಿಸಿದ. ಈತನ ಮಗ ಪುರೂರವ. ಹೀಗೆ ಸೋಮವಂಶದಲ್ಲಿ ಅನೇಕರು ಆಳ್ವಿಕೆ ಮಾಡಿದ ಮೇಲೆ ಚಾಲುಕ್ಯ ವಂಶೋದಯವಾಯಿತು ಎಂದು ಹೇಳಲಾಗಿದೆ. ಮುಂದೆ ತೈಲಪನಿಂದ ಹಿಡಿದು ಆರನೆಯ ವಿಕ್ರಮಾದಿತ್ಯನ ವರೆಗೆ ವಂಶಾವಳಿಯನ್ನು ನೀಡಲಾಗಿದೆ.

"ಕಮಳಾವಲ್ಲಭನಾಭಿ ಹೇಮಕಮಳಂ ಜನ್ಮೋತ್ಸವ ಸ್ಥಾನಮಾಗೆ ಮಹಾತ್ಮ ಪರಮಂ ಪವಿತ್ರನೊಗೆದಂ ಪದ್ಮಾಸನಂ ಭಾರತೀ ರಮಣಂ ವೇದಮಹಾಪ್ರಭನ್ದ ಕವಿರಾಜಂ ಭೂರ್ಭುವಸ್ಸ್ವಸ್ತ್ರಯೀಕ್ರಮ ನಿರ್ಮ್ಮಾಣ ಪರಾಯಣಂ ನಿಖಿಳಲೋಕಾರಾಧ್ಯಪಾದಾಂಬುಜ॥ ಎನಿಸಿರ್ದ್ದಂಬುರುಹ ಸ್ವಯಂಭುಗೆ ಸುತಂ ಸ್ವಾಯಂಭುವಂ ಪುಟ್ಟಿದಂ ಮನುವಾತಂಗೆ ಮಗಂ ಪ್ರಿಯಬ್ರತ ನ್ರಿಪಂ ತತ್ಪುತ್ರರಗ್ನೀಧ್ರ ಮುಖ್ಯನರೇನ್ದ್ರೋತ್ತಮರೆರ್ವ್ವರಂತವರ್ಗ್ಗೆ ಸಪ್ತದ್ವೀಪಮಂ ಪಚ್ಚುಕೊಟ್ಟನಿಳಾವಲ್ಲಬನಾ ಪ್ರಿಯಬ್ರತನುದಾತ್ತ ಕ್ಷಾತ್ರಗೋತ್ರೋತ್ತಮಂ॥".[೩]

ಪ್ರಾಚೀನ ಕರ್ನಾಟಕದ ರಾಜರು ತಾವು ಮೂಲತಃ ದೈವೀಪುರುಷನೊಬ್ಬನಿಂದ ಇಳಿದು ಬಂದವರೆಂದು ಹೇಳಿಕೊಂಡಿದ್ದಾರೆ. ರಾಜರು ದೈವದ ಅವತಾರವೆಂಬ ಭಾವನೆ ಬೆಳೆಯಲು ಇದು ಒಂದು ಕಾರಣವಾಯಿತು. ಕದಂಬರು, ಚಾಲುಕ್ಯರು, ಗಂಗರು–ಮುಂತಾದವರು ಪೌರಾಣಿಕ ಉಗಮಗಳನ್ನು ಹೇಳಿಕೊಂಡಿದ್ದಾರೆ. ಸಿಂದರು ಇದಕ್ಕೆ ಹೊರತಾಗಿಲ್ಲ. ಹೀಗೆ ಪೌರಾಣಿಕ ಉಗಮಗಳನ್ನು ಹೇಳಿಕೊಳ್ಳಲು ಆರಂಭಿಸಿದ್ದು ಒಂಭತ್ತನೆಯ ಶತಮಾನದಿಂದೀಚೆಗೆ ಎಂದು ಫ್ಲೀಟರು ಅಭಿಪ್ರಾಯಪಡುತ್ತಾರೆ.[೪]

ನಿಡುದೋಳ ಸಿಂದನ ಅವತಾರಗಳ ವಿವರ ಹೀಗಿದೆ: ಬಾಗಡೆಯ ಸಿಂದ ಶಾಖೆಯವರು ತಮ್ಮ ವಂಶದ ಮೂಲಪುರುಷನು ಧರಣೇಂದ್ರೇಶ್ವರ ಮತ್ತು ಆತನ ಪತ್ನಿಗೆ ಭೂಲೋಕದಲ್ಲಿ ಜನಿಸಿದ ನಿಡುದೊಳ ಸಿಂದನೆಂದು ಹೇಳಿದ್ದಾರೆ.

ಧರಣೇಂದ್ರೇಶ್ವರನು ಒಮ್ಮೆ ಭೂಲೋಕವನ್ನು ನೋಡಲು ತನ್ನ ಪತ್ನಿಯೊಡನೆ ಬಂದಾಗ ಆಕೆಗೆ ಗರ್ಭ ಚಿಹ್ನೆಗಳು ಕಾಣಿಸಿಕೊಂಡು, ಅಹಿಚ್ಛತ್ರದ ಸಿಂದೂನದಿ ಕರುವದಲ್ಲಿ ಕುಮಾರನೊಬ್ಬನಿಗೆ ಜನ್ಮನೀಡುತ್ತಾಳೆ. ಭಾಸುರ ತೇಜಸ್ಸಿನಿಂದ ಕೂಡಿದ ತನ್ನ ಮಗನನ್ನು ಪುಲಿಗಣೀಶ್ವರನು ಸುರಕ್ಷಿತವಾಗಿ ನೋಡಿಕೊಳ್ಳುವನೆಂದು ಬಗೆದು ಪನ್ನಗಾಧೀಪತಿಗೆ ಅಜ್ಞಾಪಿಸಿದನು. ಪನ್ನಗಾಧಿಪತಿಯೂ ಅವನನ್ನು ಮಹಾಮಹಿಮನನ್ನಾಗಿ ಮಾಡುವ ಭರವಸೆಯನ್ನು ನೀಡಿ, ಅದರಂತೆ ಬೆಳೆಸಿದನು. ಇಂತಹ ಕುಮಾರನು ಶೌರ್ಯದ ದೀರ್ಘ ಬಾಹುವನ್ನು ಪಡೆದಿದ್ದರಿಂದ ಅವನನ್ನು ನೀಡುದೋಳ ಸಿಂದನೆಂದು ಕರೆದರು.

ಬೆಳಗುತ್ತಿಯ ಸಿಂದ ಶಾಖೆಯವರ ಪ್ರಕಾರ ಶಿವ–ಸಿಂಧು ಪ್ರಿಯ ಸಂಗಮದಿಂದ ಜನಿಸಿದ ಕುಮಾರನೇ ನಿಡುದೋಳು ಸಿಂದನಾಗಿದ್ದಾನೆ.[೫]ತನ್ನಿಂದ ಜನಿಸಿದುದಕ್ಕಾಗಿ 'ಸೈನ್ಯವ' ಎಂಬ ಹೆಸರನ್ನು ಅನ್ವರ್ಥಕವಾಗುವಂತೆ ಅವನಿಗೆ ಇಟ್ಟನಂತೆ.[೬]ಉರಗಾದಿ ರಾಜನ ರಕ್ಷಣೆಯಲ್ಲಿ ಅವನನ್ನಿರಿಸಿ ಶಿವನು ಈ ಕುಮಾರನು ವೀರನು, ಧೀರನು ಆಗಬೇಕಾದರೆ, ಸಾಧಾರಣ ಮಾನವರಂತೆ ಬೆಳೆಯಬಾರದೆಂದು ಭಾವಿಸಿದನು.

ಪುಲಿವಾಲಂಕುಡಿದಲ್ಲದೆ
ಕಲಿಯಾಗಂಪುತ್ರನಿವನೆನ್ನು ಗೌರೀಪತಿ ತ
ನ್ನೊಲವಿಂ ಪುಲಿಯಂ ನಿರ್ಮಿಸೆ
ಪುಲಿವಾಲಂ ಕುಡಿದು ಬೆಳದನಾ ಶಿಶುಧರೆಯೊಳು

ಹೀಗೆ ಬೆಳೆದ ತನ್ನ ಮಗನಿಗೆ ಸಂಗ್ರಾಮದಲ್ಲಿ ಸಹಾಯವಾಗಲೆಂದು ಮೊಳಲೇದೇವಿಗೆ ಅಜ್ಞಾಪಿಸಿದನು. ಆದ್ದರಿಂದಲೇ ಅವರು ತಮ್ಮನ್ನು 'ಮಾಳಲೇದೇವಿಲಬ್ಧವರಪ್ರಸಾದ'ರೆಂದು ಕರೆದುಕೊಂಡಿದ್ದಾರೆ. ಮುಂದೆ ಶಿವನು ಅವನಿಗೆ ನಿಡುದೋಳು ಸಿಂದನೆಂಬ ಎರಡನೆ ಹೆಸರನ್ನು ಕೊಟ್ಟನು.[೭]

ರಂಜೋಳ ಸಿಂಧವಂಶದವರು ಧರಣೇಂದ್ರ ಮತ್ತು ಆತನ ಅಗ್ರಮಹಿಷಿ ಪದ್ಮಾವತಿ ದೇವಿಯರಿಗೆ ಜನಿಸಿದ ನಿಡದೋಳ ಸಿಂದನೇ ತಮ್ಮ ವಂಶದ ಮೂಲ ಪುರುಷನೆಂದು ಹೇಳಿಕೊಂಡಿದ್ದಾರೆ.[೮]ಇವರು ರಾಜಧಾನಿ ಭೋಗಾವತಿಪುರದಲ್ಲಿದ್ದಾಗ ಪದ್ಮಾವತಿಗೆ ಗರ್ಭ ಚಿಹ್ನೆಗಳು ಕಾಣಿಸಿಕೊಂಡವು. ಆಗ ಅವಳು ಸಿಂದೂ ನದಿಯಲ್ಲಿ ಓಕಳಿಯಾಡ ಬಯಸಿ ಪತಿಸಹಿತ ಅಲ್ಲಿಗೆ ಬರುತ್ತಾಳೆ. ಸಿಂಧು ಕ್ಷತಿಯಲ್ಲಿ ಹರಿಯುವ ಸಿಂಧುವಿನೊಳಾ ತರುಣಿ ಜಲಕ್ರೀಡೆಯಾಡಿದ ನಂತರದಲ್ಲಿ;

ಉದಯಂಗೆಯ್ವರ್ಕನಂ ಪಂನ್ನಗಾಧಿಪತಿ ಸತಿ ಕಂಡರ್ಗ್ವ್ಯಯಂ ಕೊಟ್ಟು ನಿಂನಂ
ದದ ಕಂದಾ ವಂಶತ್ನಂ ಜನಿಯಿಸುಗೆನಯಿನೆಂಬುದುಂ ಮಂತ್ರಸಾಮಾ
ರ್ಥ್ಯದೆ ಮಾರ್ತ್ತಂಡ ಪ್ರಸಾದಂದೊರಕೊಳೆ ತರುಣಾರ್ಕ್ಕ ಪ್ರಭುಂ ನಂದನಂಪು
ಟ್ಟಿದನಾ ಪದ್ಮಾವತಿಗೆ ಭುವನ ಜನಾಶ್ಚರ್ಯ್ಯ ಸೌರ್ಯ ಪ್ರಭಾವ

ಹೀಗೆ ಪದ್ಮಾವತಿಗೆ ಸೂರ್ಯನ ಅನುಗ್ರಹದಿಂದ ಅವನ ಸೌಂದರ್ಯ-ಸಾಮರ್ಥ್ಯಗಳನ್ನು ಪಡೆದು ಭೂಲೋಕದಲ್ಲಿ ಹುಟ್ಟಿದುದರಿಂದ ಅವನು ಇಲ್ಲಿಯೇ ಅರಸನಾಗಿದ್ದು ಬಾಳಲಿ ಎಂದು ಅವನನ್ನು ರಕ್ಷಿಸುವ ಹೊಣೆಯನ್ನು ವಸಸಾರ್ದ್ದೂಳಿ(ಹುಲಿ)ಗೇ ಬಿಟ್ಟು ಹೋದರು. ಇತ್ತ ಆ ಮಗು ಹುಲಿಯ ಮೊಲೆಯುಂಡು ಆ ಹುಲಿಯ ಮರಿಗಳೊಂದಿಗೆ ತಾನೂ ಬೆಳೆಯಿತು. ಈ ಮಗುವನ್ನು 'ಶೇಸೆ ಪೂವಮಾಲೆ ಕುಂಭಂ ಪುದಿದಿರ್ದ್ದುತ್ತುಂಗ ವೇದಧ್ವನಿಗಳಾಗಿಪಚದಂ ತೋರಣಂ ರಂಜಿಸಲು ಬಂದಿದಿರ್ಗ್ಗೊಂಡು" ಅಹಿಚ್ಛತ್ರಕ್ಕ ಕರೆದೊಯ್ದು ಜಾತಕರ್ಮ, ಅನ್ನಪ್ರಾಸನ ಚೌಲೋಪದಯಗಳನ್ನು ಮಾಡಿಸಿದರು. ಅಲ್ಲದೆ

ಸಿಂದುಗಿನ ನೆಳಲೊಳನುನಯ
ದಿಂದಮಿವಂ ಪುಲಿಯ ಮೊಲೆಯನುಣುತಿರ್ದ್ದದಜಿಂ

ಸಿಂದುಗಿ ಮನೆದೆಯ್ವಂ ಪೆಸ
ರಿಂದ ಮೀವಂ ಸಿಂಹನೆಂದು ನುಡಿದರ್ಟ್ವಿಷಮರು

ಮುಂದೆ ನಾನಾ ಶಾಸ್ತ್ರಗಳನ್ನು ಜೊತೆಗೆ ಅರಸನಿಗೆ ಅಗತ್ಯವಾದ ವಿದ್ಯೆಯನ್ನು ಕಲಿಸಿದರು.

ಕರಿತುರಗಸ್ಯಂದನರಣ
ಪರಿಣತಿಯೊಳು ಚಾಪಮಾದಿಯಾಗಿರೆ ಮೂವ
ತ್ತೆರಡವಿಮುಕ್ತ ಚತುಷ್ಪಯ
ಪರಿಣತಿಯೊಳು ತಾನೆ ಭುವನ ಭುಂಭುಕನಾದ

ರಂಜೋಲ ಸಿಂದರು ತಮ್ಮನ್ನು 'ಪದ್ಮಾವತಿಲಬ್ಧವರಪ್ರಸಾದ'ರೆಂದು ಕರೆದುಕೊಂಡಿದ್ದಾರೆ. ನಿಡುದೊಳ ಸಿಂಧನು ಪಾತಾಳದರಸಂ ಧರಣೇಂದ್ರಂಜನಕನಪ್ಪುದಱಿಂ ಪಾತಾಳ ಚಕ್ರವರ್ತ್ತಿಯುಂ ಪದ್ಮಾವತಿದೇವಿ ಪೆತ್ತಮೋಹದಿಂ ಬರಮಂ ಕೊಟ್ಟಳಪ್ಪುದಱಿಂ ಲಬ್ಧವರಪ್ರಸಾದನುಂ ಬೋಗಾವತಿಪಯರಮೆ ನಿಜಾನ್ವಯರಾಜಧಾನಿಯಪ್ಪುದರಿಂ ಭೋಗಾವತೀಪುರಾವರಾಧೀಶ್ವರನುಂ ಅಹಿಛತ್ರ ಮರಧರಾಮರಹ ರಕ್ಷಿಸಿದಪ್ಪುದಱಿಂದಣಿಛತ್ರ ಮರಧರಾಮರ ರಕ್ಷದಕ್ಷ ಕ್ಷಿಣ ಭುಜಾದಂಡನುಂ ನಿಂನ ನೊಸಲ ಕಣ್ಣಿನಿದ್ದಿರಿಯುಂ ನಿಮಿರ್ದ್ದ ಕರತಳಿಂದನಂ ವೊಯ್ದನಪ್ಪುದರಿಂದ ನಿಡುದೊಳ ಸಿಂದನುಮೆಂಬ ಹೆಸರನ್ನು ಪಡೆದನೆಂದು ಶಾಸನವು ವಿವರಣೆ ನೀಡಿದೆ.

ಹೊಯ್ಸಳ ವಂಶದ ಹುಟ್ಟಿನ ಕುರಿತು ಇರುವ ಕತೆಯನ್ನು ಹೋಲುವ ವಿವರಣೆ ಶಾಸನಗಳಲ್ಲಿ ಕಾಣಿಸಿಕೊಂಡಿದೆ. "ದ್ಯಂಷ್ಟ್ರಿಕಾ ಪೂರ್ವ್ವಪೌತ್ರಿಣಃ ಸಹಾಧ್ಯಾಯಾನುಬಂಧೇನ ಭುವನೋದ್ಧಾರಕರ್ಮ್ಮಣಿ॥ ಸಳನೆಂಬ ಯಾದವಂ ಹೊಯ್ಸಳನಾದಂ ಶಶಕಪುರದ ವಾಸಂತಿ ಕೆಯಪಳ್ಳುಳಿದು ಪುಲಿ ಪೊಯ್ವುದು ಪೊಯ್ಸಳಯೆನೆ ಮುನಿ ಬಳಿಕಮಾಯ್ತುಪೊಯ್ಸಳವಂಶಂ॥"[೧೯] ಎಂದು ಹೇಳಲಾಗಿದೆ. ಸಳನೊಮ್ಮೆ ಮುನಿಯನ್ನು ನೋಡಲು ಹೊರಟನು. ಮೃಗಗಳ ಕೋಲಾಹಲ ಮಾಡುತ್ತಿರಲು, ಅಲ್ಲಿಯೇ ಇದ್ದ ಹುಲಿಯೊಂದನ್ನು ನೋಡಿದನು. ಆಗ ಆ ಹುಲಿಯನ್ನು ಸಂಹರಿಸುವಂತೆ ಮುನಿಯು 'ಹೊಯ್ ಸಳ' ಎಂದು ಹೇಳಿ ಶಲಾಕೆಯನ್ನು ನೀಡಿದನಂತೆ. ಅದರಿಂದ ಸಳನು ಹುಲಿಯನ್ನು ಸಂಹರಿಸಿದನು. ಹೀಗಾಗಿ ವಂಶದ ಹೆಸರು ಹೊಯ್ಸಳ ಎಂದು ಪ್ರಸಿದ್ಧವಾಯಿತು. ಹಾಗೆಯೇ ಮೇಲ್ಮುಖವುಳ್ಳ ಯುದ್ಧಾಸಕ್ತವಾದ ಹುಲಿಯ ಬಾಯನ್ನು ಸೀಳುತ್ತಿರುವ ವ್ಯಕ್ತಿಯ ಚಿತ್ರವೇ ಈ ವಂಶದ ಅರಸರ ಧ್ವಜದಲ್ಲಿ ಸ್ಥಾನವನ್ನು ಪಡೆಯಿತು. ಈ ಬಗೆಯ ಉಲ್ಲೇಖವನ್ನು ಹೊಂದಿರುವ ಕನಕಗಿರಿ ಗೋಪುರದಲ್ಲಿನ ಪಶ್ಚಿಮಕ್ಕಿರುವ ಶಾಸನ[೨೦]ವು ಅವರ ಆಡಳಿತದ ಮೇಲೆಯೂ ಬೆಳಕು ಚೆಲ್ಲುತ್ತದೆ. ಈ ವಂಶದ ಅರಸರು ಮೇರು ಮಂದರದಂತೆ ಹಬ್ಬಿದ ಕೀರ್ತಿಯುಳ್ಳವರು, ಆನೆಯ ಕುಂಬಸ್ಥಲವನ್ನು ಭೇದಿಸುವವರು, ಶಿಷ್ಟ ರಕ್ಷಕರು, ದುಷ್ಟ ಶಿಕ್ಷಕರು, ಧರ್ಮಮಾರ್ಗವನ್ನು ಅನುಸರಿಸುವ ಕ್ಷಮೆಯುಳ್ಳವರು

ಆಗಿದ್ದರೆಂದು ಮತ್ತು ಅವರ ಆಡಳಿತಾವಧಿಯಲ್ಲಿ ದ್ವಾರಸಮುದ್ರವು ಸ್ವರ್ಗವನ್ನು ಮೀರಿಸುವ ನಗರವಾಗಿತ್ತೆಂದು ವರ್ಣಿಸಲಾಗಿದೆ.

ವಿಜಯನಗರವನ್ನಾಳಿದ ತುಳುವವಂಶದ ವಂಶಾವಳಿಯನ್ನು ಪೌರಾಣಿಕ ಹಿನ್ನೆಲೆಯಲ್ಲಿ ಕಟ್ಟಿಕೊಡುವ ಶಾಸನದಲ್ಲಿನ ವಿವರ ಹೀಗಿದೆ:

**"ತಸ್ಯಾಸೀತ್ತನಯಸ್ತಪೋಭಿತುಲೈರನ್ವರ್ಥನಾಮಾ ಬುಧಃ ಪುಣ್ಯೈರಸ್ಯ ಪೂರವಾ ಭುಜಬಲೈರಾಯುರ್ದ್ವಿಷಾನ್ನಿಘ್ನತಃ। ತಸ್ಯಾಯುರ್ನ್ನಹುಷೋಸ್ಯ ತಸ್ಯ ಪರುಷೋಯುಧೇ ಯಯಾತಿಃ ಕ್ಷಿತೌ ಖ್ಯಾತಸ್ತಸ್ಯ ತುಧುರ್ವ್ವಸುನಿಭಃ॥ ದೇವಯಾನೀಪತೇಃ ತದ್ವಂಶೇ ದೇವಕೀಜಾನಿರ್ದ್ದಿದೀಪೇ ತಿಮ್ಮಭೂಪತಿಃ।".**[೧೧]

ಈ ಶಾಸನದಲ್ಲಿ ತುಳುವಂಶದ ವಂಶಾವಳಿಯನ್ನು ಪೌರಾಣಿಕ ವ್ಯಕ್ತಿಗಳೆನಿಸಿದ ಚಂದ್ರನಿಂದ ಹಿಡಿದು ಅವನ ಮಗ ಬುಧ, ಆತನ ಮಗ ಪುರೂರವ, ಅವನ ಮಗ ವಾಯು, ಅವನ ಮಗ ನಹುಷ, ಆತನ ಮಗ ಯಯಾತಿ ಎಂದು ಹೇಳುತ್ತಾ, ಯಯಾತಿಯ ಮಡದಿ ದೇವಯಾನಿಯ ಉದರದಲ್ಲಿ ತುರ್ವಸು ಜನಿಸಿದ. ಈ ತುರ್ವಸುವಿನ ವಂಶದಲ್ಲಿ ತುಳುವಂಶದ ಪ್ರಸಿದ್ಧ ಅರಸ ತಿಮ್ಮನು ಜನಿಸಿದ ಎಂದು ಹೇಳಲಾಗಿದೆ. ತುಳುವಂಶದ ಹಿನ್ನೆಲೆಯನ್ನು ಕಟ್ಟಿಕೊಡುವ ಶಾಸನಕಾರರ ಪ್ರಯತ್ನವು ಎಷ್ಟು ಪೌರಾಣಿಕವಾಗಿದೆ ಎನ್ನುವುದಕ್ಕೆ ಈ ಶಾಸನವೇ ಸಾಕ್ಷಿ. ತುಳುವಂಶಕ್ಕೆ ಸಂಬಂಧಿಸಿದಂತೆ ಜನರ ಮನಸ್ಸಿನಲ್ಲಿ ಈ ವಂಶದ ರಾಜರುಗಳ ಬಗ್ಗೆ ಗೌರವಭಾವ ಹಾಗೂ ಅಭಿಮಾನವನ್ನು ಮೂಡಿಸುವ ಪ್ರಯತ್ನ ಇಲ್ಲಿ ನಡೆದಿದೆ.

ಇದೇ ಅಭಿಪ್ರಾಯವನ್ನು ವಿದ್ಯಾನಗರವನ್ನಾಳಿದ ತುಳುವಂಶದ ಪ್ರಥಮ ಪ್ರಭುವಾದ ವೀರನರಸಿಂಹರಾಯರ ಶಾಸನದಲ್ಲಿ ಈ ರೀತಿ ಬರೆಯಲಾಗಿದೆ. "ಚಂದ್ರನಿಗೆ ಬುಧನೂ, ಅವನಿಗೆ ಪುರೂರವಾದಿಗಳು ಜನಿಸಿದ ಮೇಲೆ, ಈಶ್ವರನಾಯಕರೂ, ನರಸಿಂಹನಾಯಕರೂ ಜನಿಸಿದರೆಂದೂ ಆತನಿಗೆ ತಿಪ್ಪಾಂಬೆಯಲ್ಲಿ ವೀರ ನರಸಿಂಹರಾಯನೂ, ನಾಗಲಾಂಬೆಯಲ್ಲಿ ಕೃಷ್ಣದೇವರಾಯರೂ ಜನಿಸಿದರೆಂದು ಬರೆಯಲಾಗಿದೆ".[೧೨]

ಕುಂಬಾರ ಕುಲ(ವಂಶ)ದ ಹುಟ್ಟಿನ ಬಗ್ಗೆ ಆನೆಗೊಂದಿಯಲ್ಲಿ ದೊರೆತ ತಾಮ್ರ ಶಾಸನವೊಂದು ಸುದೀರ್ಘವಾಗಿ ಪೌರಾಣಿಕ ಹಿನ್ನೆಲೆಯನ್ನು ಕಟ್ಟಿಕೊಟ್ಟಿದೆ. "ಕೃತಯುಗದಲ್ಲಿ ಸುಶಾಶ್ವತನಪ್ಪ ಪುರುಷ ಬೇಕೆಂದು ಗಿರಿಯನೇರಿ ತಪಸ್ಸು ಮಾಡಿದ ಗಿರಿರಾಜನ ಮಗಳನ್ನು ಬೇಟೆಯಾಡಲು ಬಂದ ಶಿವ ಮೆಚ್ಚಿ ವರಿಸಬಯಸುತ್ತಾನೆ. ವಿವಾಹ ಆರಂಭವಾದಾಗ ಮದುವೆ ಮಂಟಪದಲ್ಲಿ 'ಕೈ ಧಾರೆಯೆರೆಯಲು ಕಲಶ, ಜಗಲಿಗೆ ಶೋಭೆ ತರುವ ಹೂಜೆ, ಭೃಂಗಾರಿಗಳು ಆಗ ಬೇಕಲ್ಲ' ಎಂದು ಶಿವ ಕೇಳಿದಾಗ ಗಿರಿರಾಜ ತನ್ನ ದಿವ್ಯಧ್ಯಾನದಿಂದ ವಿಷ್ಣುವಿನ ಚಕ್ರವನ್ನು

ತಿಗರಿಯಾಗಿ, ಬ್ರಹ್ಮನ ವೇದಪುಸ್ತಕದ ಕಂಭಿಯನ್ನು ಕಂಭಿಯಾಗಿ, ಶಿವನ ಲಾಕುಳವನ್ನು ಕೋಲಮಾಡಿ, ಯಜ್ಞೋಪವೀತವನ್ನು ಕೊರೆದಾರ ಮಾಡಿ, ಯಮನ ಕೋಣನಿಂದ ಮಣ್ಣನ್ನು ತರಿದು ಹದಮಾಡಿ, ಮಿದಿದು ಹೂಜೆ, ಸೊನ್ನಲಿಗೆ ಕುಂಭಾದಿ ನಾನಾ ಭಾಂಡರಗಳನ್ನು ತಯಾರಿಸಿ, ಹದಗೊಳ್ಳುವವರೆಗೆ ಸುಟ್ಟು, ಹೂಜೆಗೆ ಅನೇಕ ಪ್ರಕಾರವಾಗಿ ಬಣ್ಣವಿಟ್ಟು ಶಿವನ ಅಪೇಕ್ಷೆಯನ್ನು ಪೂರೈಸುತ್ತಾನೆ. ವಿವಾಹ ನಡೆದು ಶಿವನು ಗಿರಿಜೆಯೊಂದಿಗೆ ಕೈಲಾಸಕ್ಕೆ ಹೊರಡಲು ಉದ್ಯುಕ್ತನಾದಾಗ ಗಿರಿರಾಜನನ್ನು ಕರೆದು 'ಹೂಜೆ, ಸೊಂನಲಿಗೆ ಭೃಂಗಾರಿಯನ್ನು ಮಾಡಿ ತಂದ ವೃತ್ತಿ ಕೆಡಲಾಗದು' ಎಂದು ಹೇಳಿ ಅವನ ಸಂತತಿಗೆ 'ಸಾಲೆ ಸಾಸಿರ್ವರೆಂಬ ಸಮಯ'ದ ಹೆಸರು ನೀಡಿ,ನಂತರ ಚಕ್ರ, ಗಳೆಯನ್ನು ಕೊಟ್ಟು 'ಅಯಿಸಾವಂತ'ರೆಂಬ ಹೆಸರು ಕೊಟ್ಟು ಸರ್ವ ಪ್ರಕಾರದ ಗ್ರಾಮಗಳಲ್ಲಿ ಹದಿನೆಂಟು ಪಟ್ಟಣ, ಹದಿನೆಂಟು ಯೋಗಪೀಠ, ಹದಿನೆಂಟು ಕಣಿಗಳನ್ನು ಋಷಿಸಮೂಹ ಕೊಂಡಾಡುವುದು. ಕುಂಭಕಾರರ ಹದಿನೆಂಟು ಕಣಿಗಳನ್ನು ಸಪ್ರಶಸ್ತಿ ಹೆಸರಿಸಿ, ಅವುಗಳಿಗೆ ಅಧೀಕ್ಷವೆನಿಸುವ 'ಮೂವತಿಛಾಸಿರಕೇಣಿ'ಯ ಪ್ರಶಸ್ತಿ ನೀಡಿದೆ. ಇಲ್ಲಿಗೆ ಒಂದು 'ಸಮಯ ಶಾಸನ ಪುರಾಣ' ಮುಕ್ತಾಯವಾಗಿ ಇನ್ನೊಂದು ಪುರಾಣ ಪ್ರಾರಂಭವಾಗುತ್ತದೆ.

ದೇವಾಸುರರು ಅಮೃತಮಂಥನ ಮಾಡುವುದೆಂದು ನಿರ್ಧರಿಸಿ ಹರಿಯನ್ನು ಅಮೃತ ತರಲು ಅಟ್ಟುತ್ತಾರೆ. ಆದರೆ ಅಮೃತವನ್ನು ಕಡೆಯಲು ಪಾತ್ರೆ ಬೇಕಲ್ಲ! ದೇವಾಸುರರು ಶಿವನೆಡೆಗೆ ಓಡುತ್ತಾರೆ. ಅವನಲ್ಲಿ ತಮ್ಮ ಅಳಲನ್ನು ತೋಡಿಕೊಳ್ಳುತ್ತಾರೆ. 'ಗಿರಿಜಾ ಕಲ್ಯಾಣ' ಸಂದರ್ಭದಲ್ಲಿ ಗಿರಿರಾಜ–ಕುಂಭಕಾರ ಕಲೆಯಲ್ಲಿ ನೈಪುಣ್ಯ ತೋರಿದ್ದಾನೆ. ಆದ್ದರಿಂದ ಶಿವ ದೊಡ್ಡ ಕುಂಭವನ್ನು ತಯಾರಿಸಿ ತರಲು ಗಿರಿರಾಜನಿಗೆ ಆದೇಶಿಸುತ್ತಾನೆ. ಆತ ಅಂತು ಮಾಡಿದ ಮೇಲೆ ಅಮೃತವನ್ನು ಕಡೆದಾಗ ಹಲವು ವಸ್ತು ವಿಶೇಷಗಳು ಹುಟ್ಟಿದವು. ಅವುಗಳಲ್ಲಿ ಹದಿನೆಂಟು ಪಟ್ಟಣ, ಹದಿನೆಂಟು ಜಾತಿಗಳು ಸೇರಿದ್ದವು. ದೇವತೆಗಳಿಗೆ ತಂತಮ್ಮ ಪಾಲನ್ನು ಶಿವ ಹಂಚಿದ. ಹದಿನೆಂಟು ಜಾತಿಗಳನ್ನು ಭೂಮಿಯ ಮೇಲೆ ನಿಲ್ಲಿಸಿದ. ಕುಂಭ ಮಾಡಿಕೊಟ್ಟುದಕ್ಕೆ ಪ್ರತಿಫಲವಾಗಿ ಗಿರಿರಾಜ ಭಲ್ಲುಕೆಗೋಲು, ಮಡಕೆ ಬೆಲ್ಲ ಕುಂಚುಳಿಕೆ, ಮೂವತ್ತಾರು ಭಾಂಡ, ಗುಡಿ(ಧ್ವಜ), ಹಾರೆಯಕೋಲು, ಪಂಚಲೋಹ ಇತ್ಯಾದಿಗಳನ್ನು ಅವುಗಳನ್ನು ಹೇರಲು ಕೋಣವನ್ನೂ ಶಿವನಿಂದ ಪಡೆದು ಗಿರಿಪುರಕ್ಕೆ ಮರಳಿ ಆಯ್ಸಾವಂತರ್ಗೆ ಕೊಟ್ಟ' ಈ ಶಾಸನವನ್ನು ಹೇಳಿದವನು ಶಿವ. ಅದನ್ನು ಬರೆದುಕೊಂಡ ಲಿಪಿಕಾರ ಬ್ರಹ್ಮ. ಶಿವನಿಂದ ಶಾಸನವನ್ನು ತೆಗೆದುಕೊಂಡು ವಿಶ್ವಾಮಿತ್ರನು ಕುಂಬಾರರಿಗೆ ಕೊಡುವಂತೆ ಹೇಳಿ ಗಿರಿರಾಜನಿಗೆ ಕೊಟ್ಟನು. ಹೀಗೆ ಕುಂಬಾರ ಕುಲವು ಸಾಕ್ಷಾತ್ ಸೃಷ್ಟಿಕರ್ತನಿಂದಲೇ ಉಗಮವಾದದ್ದು ಎಂದು ಈ ತಾಮ್ರ ಪಟದಲ್ಲಿ ಹೇಳಲಾಗಿದೆ.

ಈ ಶಾಸನವನ್ನು ಕುರಿತು ಚಿದಾನಂದಮೂರ್ತಿಯವರು ಹೀಗೆ ಹೇಳಿದ್ದಾರೆ. "ವಿವಾಹ ಪುರಾಣವು ಕುಂಬಾರರ ಕುಲವು ಆರಂಭವಾದುದರ ಕತೆಯನ್ನು ನಿರೂಪಿಸುತ್ತ ಅವರನ್ನು ಗಿರಿರಾಜನ ವಂಶದವರೆಂದೂ, ಅವರ ಅಕ್ಕ ಗೌರಿದೇವಿಯೆಂದೂ ಕಲ್ಪಿಸುತ್ತದೆ. ಆ ಮೂಲಕ ಶಿವ ತಮಗೆ ಭಾವನಾಗಬೇಕೆಂದು ಕುಂಬಾರರು ಹೇಳಿಕೊಂಡು ಅನುಭವಿಸುವ ಆತ್ಮವಿಶ್ವಾಸವನ್ನು ಕಲ್ಪಿಸಿಕೊಳ್ಳಬಹುದು. ಜನರಿಗೆ ತಾವು ಇಲ್ಲದೆ ಹೋಗಿದ್ದರೆ ಅವರ ಮದುವೆಗಳಾಗುವ ಮಾತಿರಲಿ, ಅವರಿಗೆ ಸ್ನಾನ ಊಟಗಳೂ ಇರುತ್ತಿರಲಿಲ್ಲವೆಂದು ಹೇಳುವುದರ ಮೂಲಕ ತಾವು ಸಮಾಜದ ಅತ್ಯಂತ ಮುಖ್ಯ ಭಾಗವೆಂದು ಕುಂಬಾರರು ತಮ್ಮನ್ನು ಪ್ರತಿಷ್ಠಾಪಿಸಿಕೊಳ್ಳುವುದರಲ್ಲಿ ಅರ್ಥವಿದೆ."[೧೩] ಎಂದು ಹೇಳುವುದರ ಮೂಲಕ ಪ್ರತಿಯೊಂದು ಕುಲವು ತಮ್ಮ ತಮ್ಮ ಹುಟ್ಟಿನ ಬಗ್ಗೆ ಅಭಿಮಾನದಿಂದ ಹೇಳಿಕೊಳ್ಳುವ ಇಂತಹ ಸಂಗತಿಗಳನ್ನು ಮಾನ್ಯಮಾಡಿದ್ದಾರೆ.

ಶಾಸನಗಳು ವ್ಯಕ್ತಿಯ ಆಡಳಿತವನ್ನು, ಆತನು ಮಾಡಿದ ದಾನ–ಧರ್ಮ ಕಾರ್ಯಗಳನ್ನು, ಆತನ ಶೌರ್ಯ ಸಾಹಸಗಳನ್ನು ತಿಳಿಸುವ ಉದ್ದೇಶದಿಂದಲೇ ಬರೆಯಿಸಿದಂತವುಗಳು. ಆದುದರಿಂದ ಆ ವ್ಯಕ್ತಿಯನ್ನು ಕುರಿತ ಅಥವಾ ಆತನ ವಂಶವನ್ನು ಕುರಿತ ಪ್ರಶಸ್ತಿಯೇ ಶಾಸನಕಾರನಿಗೆ ಮುಖ್ಯವಾಗುತ್ತದೆ. ಈ ಉದ್ದೇಶವನ್ನು ಈಡೇರಿಸಿಕೊಳ್ಳುವ ಸಲುವಾಗಿಯೇ ಶಾಸನಕಾರನು ಆ ವ್ಯಕ್ತಿಯನ್ನು ಅಥವಾ ಆತನ ವಂಶವನ್ನು ಗತಕಾಲದ ಪ್ರಸಿದ್ಧ ವ್ಯಕ್ತಿಗಳೊಂದಿಗೆ ಸಮೀಕರಿಸಿ, ಈ ವ್ಯಕ್ತಿಯ ಪ್ರತ್ಯೇಕತೆಯನ್ನು ವಿವರಿಸುತ್ತಾನೆ. ಅಂತಹ ಸಂದರ್ಭದಲ್ಲಿ ಸಹಜವಾಗಿಯೇ ಇತಿಹಾಸ ಪ್ರಸಿದ್ಧ ಅಥವಾ ಪುರಾಣ ಪ್ರಸಿದ್ಧ ವ್ಯಕ್ತಿಗಳೊಂದಿಗೆ ಇವರ ಸಮೀಕರಣ ಕ್ರಿಯೆ ನಡೆಯುತ್ತದೆ. ಅದರಲ್ಲೂ ಭಾರತದಂತಹ ದೇಶದಲ್ಲಿ ಪುರಾಣ ಪ್ರಸಿದ್ಧ ವ್ಯಕ್ತಿಗಳಿಗಿದ್ದಷ್ಟು ಮನ್ನಣೆ ಮತ್ತಾರಿಗೂ ಸಿಕ್ಕಿಲ್ಲ. ಇಂತಹ ಸ್ಥಿತಿಯನ್ನು ಮನಗಂಡಂತಹ ಶಾಸನಕಾರ ತನ್ನ ಕೆಲಸವನ್ನು ಬಹಳ ಅಚ್ಚುಕಟ್ಟಾಗಿ ನಿರ್ವಹಿಸಿಕೊಂಡು, ತನ್ನ ಉದ್ದೇಶಿತ ಕಾರ್ಯವನ್ನು ಸಾಫಲ್ಯಗೊಳಿಸಿಕೊಳ್ಳುತ್ತಾನೆ.

ಹಾಗೆಯೇ ತಾವು ಬರೆದಂತಹ ಶಾಸನಗಳು ಅಚಂದ್ರಾರ್ಕವಾಗಿ ಇರಬೇಕೆಂಬ ಹಂಬಲವನ್ನು ಹೊಂದಿರುವುದರಿಂದ ಇಂತಹ ಅಂಶಗಳಿಗೆ ಮತ್ತಷ್ಟು ಅಂಟಿಕೊಳ್ಳುವ ಪರಿಪಾಟ ಇರುವುದನ್ನು ಶಾಸನಗಳ ಅವಲೋಕನದಿಂದ ತಿಳಿದುಕೊಳ್ಳಬಹುದಾಗಿದೆ. ಶಾಸನಗಳಲ್ಲಿ ಈ ಬಗೆಯ ಪರಿಪಾಟ ಬೆಳೆಯುವುದಕ್ಕೆ ಕಾವ್ಯಗಳೂ ಕೂಡ ಒಂದು ಬಗೆಯಲ್ಲಿ ಪ್ರೇರಣೆಯನ್ನು ನೀಡಿವೆ ಎನಿಸುತ್ತದೆ. ಉದಾ:ಪಂಪಭಾರತದಲ್ಲಿ ಅರ್ಜುನನೊಂದಿಗೆ ಅರಿಕೇಸರಿಯ ಸಮೀಕರಣ, ಗದಾಯುದ್ಧದಲ್ಲಿ ಭೀಮನೊಂದಿಗೆ ತೈಲಪನ ಸಮೀಕರಣಗಳನ್ನು ಗಮನಿಸಿದರೆ ಕಾವ್ಯಗಳಲ್ಲಿ ಅರಸರ ಸಮೀಕರಣ ಮಾಡುವುದಕ್ಕೆ ರಾಜಾಶ್ರಯ ಕಾರಣವಾದಂತೆ, ಶಾಸನಗಳಲ್ಲಿನ ವ್ಯಕ್ತಿಗಳನ್ನು ಅಂದರೆ ಅರಸರನ್ನು ಪೌರಾಣಿಕ ವ್ಯಕ್ತಿಗಳೊಂದಿಗೆ ಸಮೀಕರಿಸಲಿಕ್ಕೆ ಆಡಳಿತಶಾಹಿ ವರ್ಗದ

ಹಿತಾಸಕ್ತಿಯನ್ನು ಕಾಪಾಡುವ ಮತ್ತು ಆ ವರ್ಗದ ನಿರ್ದೇಶನದಂತೆಯೇ ನಡೆಯುವ ಒಂದು ವರ್ಗದವರ ನಿಷ್ಠೆ ಕಾರಣವಾಗಿರಬಹುದು.

ಈ ಬಗೆಯ ಹಿತಾಕಸಕ್ತಿಯನ್ನು ಕಾಪಾಡುವ ಸಂದರ್ಭದಲ್ಲಿ ಹಲವಾರು ಪ್ರಮಾದಗಳಾಗುವ ಸಂಭವಗಳಿರುತ್ತವೆ ಎನ್ನುವ ಅಂಶ ಶಾಸನಕಾರರನ್ನು ಕಾಡದೇ ಬಿಟ್ಟಿಲ್ಲ. ಅದಕ್ಕಾಗಿಯೇ ಶಾಸನವೊಂದರಲ್ಲಿ ಈ ರೀತಿ ಹೇಳಿರಬಹುದೆನಿಸುತ್ತದೆ.

ಅರಸುಗಳೆಂಬರ್ ಬವರದೊಳ್ ಸೆರಗಿಂಪೆರಗಿರ್ಪ ಬುದ್ಧಿಯಿಂ
ದರ ನೆಲೆಯೆಂದು ಮಾಡಿ ಪೆರರಂ ಪೆರರಿಂದಮೆ ಗೆಲ್ವರಲ್ಲದಿಂ
ತಿರೆ ಪೆರಗಾಗೆ ತನ್ನ ಬಲಮನ್ಯಬಲಂ ಬೆರಗಾಗಲೊಂದೆ ಸಿಂ
ಧುರದೊಳೆ ಗೆಲ್ವರೇ ಪಗೆಯನಾರ್ ಸಮನಿಂತಸಹಾಯ ಶೂರನೊಳ್॥

ವ್ಯವಸ್ಥೆಯನ್ನು ನಿರ್ದೇಶನ ಮಾಡುವ ವರ್ಗದವರ ವಿರುದ್ಧ ನಿಲ್ಲುವುದು ಅಂದು ಸುಲಭದ್ದಾಗಿರಲಿಲ್ಲ. ಅನಿವಾರ್ಯವಾಗಿಯಾದರೂ ಅವರು ಈ ಕಾರ್ಯವನ್ನು ಮಾಡಲೇ ಬೇಕಾಗಿತ್ತು ಎನ್ನುವ ಅಂಶವನ್ನು ಮರೆಯುವಂತಿಲ್ಲ.

ಹಾಗೆಯೇ ಹಿಂದಿನಿಂದಲೂ ನಡೆದು ಬಂದ ಸಾಂಪ್ರದಾಯಿಕ ವಿಚಾರಗಳನ್ನು ನಮ್ಮ ಜನ ಅಷ್ಟಾಗಿ ಕೈ ಬಿಡುವವರಲ್ಲ. ನಡೆದು ಬಂದ ದಾರಿಯನ್ನು(ಗತವನ್ನು) ನೆನಪಿಸಿಕೊಳ್ಳುತ್ತ, ನಡೆಯುತ್ತಿರುವ(ವಾಸ್ತವದ) ದಾರಿಯನ್ನು ಕಂಡುಕೊಳ್ಳುವವರು. ಹಿಂದೆ ತಮ್ಮ ಮನತನಕ್ಕೆ ಅಪಾರ ಗೌರವವಿದ್ದು, ಪ್ರಸಕ್ತವಾಗಿ ಅಷ್ಟಾಗಿ ಗೌರವ ಸಿಕ್ಕದಿದ್ದರೆ ಹೇಗೆ ಅಂದುಕೊಳ್ಳುವ ಮನೋಭಾವದವರು. ಎಂಥ ಶ್ರೇಷ್ಠವಾದ ವಂಶದಲ್ಲಿ ಹುಟ್ಟಿ ಕನಿಷ್ಟ ಬಾಳನ್ನು ಬಾಳಿದನೆಂದರೆ ಹೇಗೆಂಬ ಸ್ವಾಭಿಮಾನ. ಅಂಥಹ ಗರ್ದಿ ಗಮ್ಮತ್ತನ್ನೇ ಕಾಪಾಡಿಕೊಳ್ಳಬೇಕೆಂಬ ಮನದಂಬಲ. ಈ ಬಗೆಯ ಕಾರಣಗಳೂ ಕೂಡ ಇಂತಹ ಸಮೀಕರಣ ಅಥವಾ ಹೋಲಿಕೆಯ ಕ್ರಿಯೆಗೆ ಮತ್ತಷ್ಟು ಬಲವನ್ನು ನೀಡಿವೆ ಎನಿಸುತ್ತದೆ.

**೪.೨ ವ್ಯಕ್ತಿ ಸಂಬಂಧಿ ಪೌರಾಣಿಕ ಅಂಶಗಳು :**

ಅರಸನನ್ನು, ದಂಡಾಧಿಪತಿಯನ್ನು, ದಾನ ನೀಡಿದ ವ್ಯಕ್ತಿಯನ್ನು ಅಥವಾ ಶೌರ್ಯ ಮೆರೆದ ವ್ಯಕ್ತಿಗಳನ್ನು ಕೀರ್ತಿಸುವುದರ ಸಲುವಾಗಿ ಅವರನ್ನು ಮಹಾಕಾವ್ಯಗಳ ಅಥವಾ ಪುರಾಣ ಶ್ರೇಷ್ಠ ವ್ಯಕ್ತಿಗಳೊಂದಿಗೆ ಹೋಲಿಸುವುದು ಇಲ್ಲವೆ ಅಭೇದ್ಯವಾಗಿ ವರ್ಣಿಸಿರುವುದು ಅನೇಕ ಶಾಸನಗಳಲ್ಲಿ ಕಂಡುಬರುತ್ತದೆ. ಅಂದರೆ ಒಬ್ಬ ವ್ಯಕ್ತಿಯ ದಾನ ಅಥವಾ ಇನ್ನಾವುದೋ ಸಂದರ್ಭವನ್ನು ಒಂದು ಸಾಹಸವನ್ನಾಗಿ ಗುರುತಿಸಿ ಚಿತ್ರಿಸಲಾಗಿದೆ. "ಶಾಸನಗಳ ನಿರ್ಮಾಣದಿಂದ ಹಿಡಿದು, ಶಾಸನ ನಿರೂಪಣೆ ಅದರ ವಸ್ತು, ವಿಷಯ, ಆಚರಣೆ, ನಂಬಿಕೆ ಮುಂತಾದ

ಹಲವಾರು ಕ್ರಿಯೆಗಳು ಜನರಿಗಿದ್ದ ಪೌರಾಣಿಕ ಪ್ರಜ್ಞೆಯಿಂದಲೇ ಕೂಡಿದುವಾಗಿವೆ. ದಾನ ಮಾಡುವುದು, ಯುದ್ಧದಲ್ಲಿ ಹೋರಾಡುವುದು, ಪಾಪ ಪುಣ್ಯಗಳ, ಸ್ವರ್ಗ ನರಕಗಳ ಕಲ್ಪನೆಗಳೆಲ್ಲ ಪುರಾಣತ್ತವಾದುವೇ."[೧೪]

ಹೀಗೆಂದ ಮಾತ್ರಕ್ಕೆ ಶಾಸನಕಾರರ ಉದ್ದೇಶ ಪುರಾಣಗಳನ್ನು ಹೇಳುವುದಲ್ಲ. ಪೌರಾಣಿಕ ವಿಷಯಗಳನ್ನು ಪ್ರಸ್ತಾಪಿಸುವ ಮೂಲಕ ಪೌರಾಣಿಕ ಮೌಲ್ಯಗಳನ್ನು ಸಾಮಾಜಿಕ ವ್ಯವಸ್ಥೆಯಲ್ಲಿ ಬೇರೂರಿಸುವುದಾಗಿದೆ. ಹಾಗೆಯೇ ಹಲವು ಸನ್ನಿವೇಶಗಳಲ್ಲಿ ಶಾಸನಕಾರರು ಪೌರಾಣಿಕ ಅಂಶಗಳನ್ನು ಅಲಂಕಾರವಾಗಿ ಬಳಸಿಕೊಂಡಿದ್ದಾರೆ. ಅಂದರೆ ರಾಜನನ್ನು, ರಾಜ್ಯವನ್ನು, ವ್ಯಕ್ತಿಯ ವಿಶೇಷ ಸಾಹಸವನ್ನು ವರ್ಣಿಸುವ ಸಂದರ್ಭದಲ್ಲಿ ತಾವು ನಿರೂಪಿಸುವ ಅಂಶವು ನೀರಸವಾಗಿರದಂತೆ ನೋಡಿಕೊಳ್ಳಲು ಮತ್ತು ತಮ್ಮ ಕವಿತಾ ಶಕ್ತಿಯನ್ನು ಪ್ರದರ್ಶಿಸಲು ಈ ರೀತಿಯ ಪ್ರಯತ್ನ ಮಾಡಿದ್ದಾರೆ.

ಶ್ರದ್ಧೆಯಿಂದ ಕೂಡಿದ ಭಕ್ತಿಗೆ ಶಿವನು ಒಲಿಯದೇ ಇರಲಾರನು ಎನ್ನುವಂತಹ ಪೌರಾಣಿಕ ನಂಬಿಕೆಗೆ ಅನುಗುಣವಾಗಿ ಶಾಸನವೊಂದರಲ್ಲಿ ಉಕ್ತವಾಗಿರುವ ಅಂಶವನ್ನು ನೋಡಬಹುದು.

"ಮಸಿಯ ತ್ರಿಪೂರಾರಿದವ್ವಯ
ಗ್ಗಾಳ ಕುಮಾರ ಆನಂದ ಸಿದ್ಧದೇವನ ಭಕ್ತಿಗೆ ಯಿಷ್ಟ
ಲಿಂಗ ಬಂದು ಪೂಜಗೊಂಬ ಸಿಮ(ವ)ನುಂ ಸುದ್ದಾ
ತ್ಮ ಮಂತ್ರ ಪುಷ್ಪದಿಸದೆಂ ಪೂಜಿಪ ಪ್ರಸಂನ ಸಿದ್ಧ
ನ ಅತಿಶಯದಿಂದಂ॥ ಕಲ್ಲಗುಸೆಯ ದಿಟೆಯೊಳು
ಬಲ್ಲರು ಭಕ್ತರಿಗೆ ಒಲಿದು ಗವಿಯೊಳು ನೆಲಸಿಹ ಸ
ಲ್ಲಲಿತ ಸಿದ್ಧನಾಥಗೆ ಯಿ...... ವರವಿತ್ತೂ ಸಲಹಿದಂ"[೧೫]

ತ್ರಿಪುರಾರಿದವ್ವೆಯ ಮಗನಾದ ಸಿದ್ಧದೇವನ ಭಕ್ತಿಗೆ ಶಿವನೇ ಲಿಂಗ ರೂಪದಲ್ಲಿ ಬಂದು ಪೂಜೆಗೊಂಡನು. ಸಿದ್ಧನಾಥನು ಕಲ್ಲಗುಸೆಯ ಬಳಿಯ ಗವಿಯಲ್ಲಿ ನೆಲೆಸಿ ಭಕ್ತರಿಗೆ ಒಲಿದು ಬರುತ್ತಾನೆಂದು ಹೇಳಲಾಗಿದೆ. ಈ ಶಾಸನದ ಕಾಲ ಸುಮಾರು ಹದಿನೈದನೆಯ ಶತಮಾನಕ್ಕೆ ಸಂಬಂಧಿಸಿದ್ದಾಗಿದೆ. ಕಾಲಘಟ್ಟದ ಹಿನ್ನೆಲೆಯಲ್ಲಿ ನೋಡಿದಾಗ ಈ ಸಂದರ್ಭದಲ್ಲಿ ಶೈವ ಧರ್ಮೀಯರು ಶಿವನೊಂದಿಗೆ ಸಮೀಕರಿಸಿಕೊಳ್ಳುತ್ತಾ, ಲಿಂಗವನ್ನು ಸಾಂಕೇತಿಕ ರೂಪದಲ್ಲಿಟ್ಟು ಆ ಮೂಲಕ ತಮ್ಮ ಶ್ರೇಷ್ಠತೆಯನ್ನು ಸಾರುವ ಪ್ರಯತ್ನ ಇಲ್ಲಿದೆ.

ಹಂಪೆಯ ಹೇಮಕೂಟದ ಪ್ರಸನ್ನ ಆಂಜನೇಯ ದೇವಸ್ಥಾನದ ಪುಷ್ಕರಣಿಯ ಹತ್ತಿರ ಬಂಡೆಯ ಮೇಲಿರುವ ಶಾಸನವು 'ಶ್ರೀ ವಿರೂಪಾಕ್ಷಸಿದ್ಧ ಶ್ರೀಪಾದ ವಲ್ಲಬದೇವರು ಹೇಮಕೂಟದಲ್ಲಿ

ಪ್ರತ್ಯಕ್ಷವಾಗಿದ್ದನ್ನು ಕಂಡು ಗಣಪತಿ ಪಂಡಿತನ ಮಕ್ಕಳಾದ ವಿರೂಪಾಕ್ಷಪಂಡಿತ ಮತ್ತು ವಿನಾಯಕಪಂಡಿತರು ಶುಕನಾಸುವನ್ನೊಳಗೊಂಡ ದೇವಾಲಯವನ್ನು ಕಟ್ಟಿಸಿ ಆ ದೇವಾಲಯಕ್ಕೆ ಕೆರೆಯನ್ನು ಕಟ್ಟಿಸಿ, ಗಿಡಗಳನ್ನು ನೆಡಿಸಿದರು' ಎಂದು ಉಲ್ಲೇಖಿಸುತ್ತದೆ. ಈ ಶಾಸನದಲ್ಲಿನ ವಿಷಯವನ್ನು ಗಮನಿಸಿದಾಗ ಕೆರೆಯನ್ನು ಕಟ್ಟಿಸುವುದು ಮತ್ತು ಗಿಡಗಳನ್ನು ನೆಡಿಸಿದುದು ಒಂದು ಲೋಕೋಪಯೋಗಿ ಕಾರ್ಯ ಎನ್ನುವುದು ಸ್ಪಷ್ಟವಾಗುತ್ತದೆ. ಆದರೆ ಇಂತಹ ಲೋಕೋಪಯೋಗಿ ಕಾರ್ಯಗಳನ್ನು ಮಾಡಲು ಸಾಕ್ಷಾತ್ ಸೃಷ್ಟಿಕರ್ತನೇ ತಮಗೆ ಪ್ರೇರಣೆಯಾಗಿದ್ದಾನೆ ಎಂದು ಹೇಳುವುದರ ಮೂಲಕ ಜನರ ಮತ್ತು ಪ್ರಭುತ್ವದ ಮನ್ನಣೆ ಪಡೆಯುವ ಸಲುವಾಗಿ ಮತ್ತು ತಮ್ಮ ಈ ಕಾರ್ಯವನ್ನು ಧರ್ಮ ಮಾರ್ಗಿಗಳಾಗಿ ಮಾಡಿದ್ದೇವೆ ಎನ್ನುವದನ್ನು ವ್ಯವಸ್ಥಿತವಾಗಿ ಜನರನ್ನು ನಂಬಿಸುವ ಉದ್ದೇಶ ಹೊಂದಿರುವುದು ಕಂಡುಬರುತ್ತದೆ.

"ಶ್ರೀಮತು ರಜತಗಿರಿ ಪರ್ವತದೇವಿ ಪಾ
ತಾಳ ಗಂಗಾ ಪರಮೇಶ್ವರಿ ಸಿದ್ಧೆದೆ ಮಾ
ದೆಯವರ ಸ್ವಪ್ನದಲಿ ಬಂದು ಪ್ರಸಂನಯಾ
ದಳು ಆ ಗಂಗಾ ಪರಮೇಶ್ವರಿಯನು ಆ ಸಿ
ದ್ಧೆದೆ ಮಾದೆಯರು ಪ್ರಸಿದ್ಧವ ಮಾಡಿದರಾ
ಗಿ ಆ ಪತ್ರಉ ಜಂಗಮಕ್ಕೆ ಸಲುಉದು"[೧೬]

ಮೇಲಿನ ಶಾಸನವನ್ನು ನೋಡಿದಾಗ ಕನಸಿನಲ್ಲಿ ಗಂಗಾಪರಮೇಶ್ವರಿಯು ಕಾಣಿಸಿಕೊಂಡದ್ದಳೆಂದು ಹೇಳಲಾಗಿದೆ. ಈ ರೀತಿ ಹೇಳುವಲ್ಲಿ ಆ ವ್ಯಕ್ತಿಯು ಗಂಗಾ ಪರಮೇಶ್ವರಿಯ ಜೊತೆಗೆ ತಾನೂ ಪ್ರಸಿದ್ಧಿಯನ್ನು ಪಡೆಯುವ ಪ್ರಯತ್ನ ಮಾಡಿರುವುದು ಕಂಡು ಬರುತ್ತದೆ. ಹಾಗೆಯೇ ಸಮಾಜದ ಉನ್ನತ ವರ್ಗದಲ್ಲಿದ್ದ ವ್ಯಕ್ತಿಯು ಧಾರ್ಮಿಕ ಕಾರ್ಯವನ್ನು ಮಾಡಿದರೆ ಅದಕ್ಕೆ ಕಾರಣ ಕೊಡುವ ಅಗತ್ಯವಿರುವುದಿಲ್ಲ. ಆದರೆ ಸಾಮಾನ್ಯನೊಬ್ಬ ಇಂತಹ ಕಾರ್ಯವನ್ನು ಮಾಡಿದರೆ ಅದರ ಹಿಂದಿನ ಉದ್ದೇಶವನ್ನು ಸ್ಪಷ್ಟಪಡಿಸಬೇಕಾಗಿತ್ತೆಂದು ಕಾಣುತ್ತದೆ. ಆ ಕಾರಣದಿಂದಲೇ ಈ ರೀತಿಯಾಗಿ ಹೇಳಿರಬಹುದೆನಿಸುತ್ತದೆ.

ಪೌರಾಣಿಕ ವ್ಯಕ್ತಿಗಳನ್ನು ಉಪಮಾನವಾಗಿಸಿಕೊಂಡು ನರಮಾನವ(ಅರಸ, ಸೇವಕ, ಜಾತಿ) ರೊಂದಿಗೆ ಬಳಸಿಕೊಂಡು, ಅವುಗಳನ್ನು ತಾದ್ಯಾತ್ಮಗೊಳಿಸಿ ಅಭೇದವಾಗಿ ವರ್ಣಿಸಲಾಗಿದೆ. ಇಂತಹ ವ್ಯಕ್ತಿಗಳಲ್ಲಿನ ಗುಣಗಳನ್ನು ವರ್ಣಿಸುವಾಗ ಅವರಲ್ಲಿನ ಸೇವಾಮನೋಭಾವನೆ, ಅವರ ದಯಾಪರತೆ, ಸೋದರಮನೋಭಾವ ಹೀಗೆ ಮುಂತಾದವುಗಳನ್ನು, ನಮ್ಮ ಪಾರಂಪರಿಕ ತಿಳುವಳಿಕೆಯಲ್ಲಿರುವ ಒಬ್ಬೊಬ್ಬ ಪೌರಾಣಿಕ ಪುರುಷರುಗಳಿಗೆ ಹೋಲಿಕೆ ಮಾಡಿರುವುದು

ಕಂಡು ಬರುತ್ತದೆ. ಆಂಜನೇಯನ ಉಪಮೆಯನ್ನು ಬಳಸಿಕೊಂಡಾಗ ಅಲ್ಲಿ ಹೋಲಿಕೆ ಮಾಡಲ್ಪಟ್ಟ ವ್ಯಕ್ತಿಯ ಸೇವೆಯನ್ನು ನೆನೆಯಲಾಗಿದೆ ಎಂದರ್ಥ. ಹಾಗೆಯೇ ಒಬ್ಬ ವ್ಯಕ್ತಿಯ ತ್ಯಾಗ, ಸಕಲ ಜೀವಿಗಳ ಮೇಲೆ ಇರುವ ಜೀವಪರ ಮಮಕಾರ, ಪರಸ್ತ್ರೀಯರನ್ನು ಸೋದರ ಭಾವನೆಯಿಂದ ನೋಡುವ ನಿಷ್ಕಲ್ಮಶ ಭಾವನೆ, ಸಕಲ ಧರ್ಮಗಳ ಬಗ್ಗೆ ಇರುವ ಪ್ರಾಂಜಲ ಪ್ರೀತಿ- ಹೀಗೆ ಮುಂತಾದ ಗುಣಗಳಿಗೆ ಅನುಗುಣವಾಗಿ ಹೋಲಿಕೆ ಮಾಡಲು ನಮ್ಮ ಪೌರಾಣಿಕ ಕಲ್ಪನೆಗಳಲ್ಲಿ ಅನೇಕರಿದ್ದಾರೆ. ಇಂತಹದೇ ಹೋಲಿಕೆಯನ್ನುಳ್ಳ ಶಾಸನವೊಂದು ಹಿರೇಹಡಗಲಿಯಲ್ಲಿ ದೊರತಿದೆ.

"ಅನತಾರಾತಿಗಜೇಯನಂ ಪತಿಹಿತ ಪ್ರಾರಂಭದೊಳ್ ವೈನತೇಯನನನ್ಯಾಂಗನೆ
ಗಂಜನೇಯನೇಯನನುದೊದ್ಯತ್ಶಕ್ತಿಯೋಳ್ಕಾರ್ತಿಕೇಯನಿಷ್ಪೀಪುವಿಧೇ
ಯನಂದ್ಯಡವಚೋಪಾಧ್ಯಾಯನಂವಿಗಧಿನ ರಾಧೆ
ಯನನಿಂದ್ರ ಕಾಯನಜನಂ ಬ್ಯಾವರ್ಣ್ಣಿಕುಂ ದೇ
ಮನ"[೧೭]

ಇಂತಹ ಹೋಲಿಕೆಗಳನ್ನು ಕುರಿತು ಆರ್.ಶೇಷಶಾಸ್ತ್ರಿ ಅವರು ಈ ರೀತಿ ಅಭಿಪ್ರಾಯ ಪಡುತ್ತಾರೆ. 'ಪುರಾಣಗಳ ಕೆಲವೊಂದು ಪಾತ್ರಗಳು ಒಂದೊಂದು ಮೌಲ್ಯಕ್ಕೆ ಪ್ರತೀಕಗಳಾಗಿವೆ. ಇದು ಎಲ್ಲಿಯವರೆಗೆ ಹೋಯಿತೆಂದರೆ ಆ ಪಾತ್ರ ಆ ಮೌಲ್ಯವನ್ನುಳಿದು ಅದಕ್ಕೆ ಇನ್ನೊಂದು ಮುಖವೇ ಇಲ್ಲವೆನ್ನುವವರೆಗೆ ಹೋಗಿದೆ. 'ಹನುಮ' ಸ್ವಾಮಿನಿಷ್ಠೆ, ಸಾಹಸಕ್ಕೂ ಪ್ರತೀಕ. ವ್ಯಕ್ತಿಯ ವೀರತನವನ್ನೇ ವರ್ಣಿಸುತ್ತಾ ಕವಿಗಳು ಈ ಹನುಮನ ಕತೆಯನ್ನು ಅನೇಕ ಕಡೆ ಸ್ವೀಕರಿಸಿದ್ದಾರೆ. ಈ ರೀತಿಯ ಹನುಮನನ್ನು ಕೇವಲ ಸೇವಕರನ್ನು ವರ್ಣಿಸುವಲ್ಲಿ ಉಪಮಾನವನ್ನಾಗಿ ಉಪಯೋಗಿಸಿಕೊಂಡಿರುವರೇ ಹೊರತು; ಸಾಹಸ; ಶೌಚಿ ಮುಂತಾದ ಮೌಲ್ಯಗಳಿಗೂ ಪ್ರತೀಕವಾಗಬಲ್ಲ ಹನುಮನನ್ನು ಅರಸರನ್ನು ಕುರಿತು ಹೇಳುವಾಗ ಬಳಸಿರುವುದು ತೀರಾ ಕಡಿಮೆ.' ಈ ಮೇಲಿನ ಶಾಸನದಲ್ಲಿ ಹೋಲಿಕೆಯಾಗಿರುವ ದೇಮನ ಒಬ್ಬ ಅಧಿಕಾರಿಯಾದ್ದರಿಂದ ಶೇಷಶಾಸ್ತ್ರಿಯವರು ಅಭಿಪ್ರಾಯ ಪಡುವಂತೆ ಹನುಮನಿಗೆ ಹೋಲಿಕೆ ಮಾಡಲಾಗಿದೆ. ಅಂದರೆ ಪುರೋಹಿತಶಾಹಿ ಆ ಕಾಲದ ಪುರೋಹಿತ ಶಾಹಿ ವ್ಯವಸ್ಥೆಯು ಒಬ್ಬ ವ್ಯಕ್ತಿಗೆ ಹೋಲಿಕೆಯನ್ನು ಮಾಡಬೇಕಾದಾಗ ಆತನ ಸಾಮಾಜಿಕ ಸ್ಥಾನಮಾನಗಳನ್ನು ಲಕ್ಷ್ಯದಲ್ಲಿಟ್ಟುಕೊಂಡಿರುತ್ತಿತ್ತು ಎನ್ನುವುದು ಸ್ಪಷ್ಟವಾಗುತ್ತದೆ. ಹನುಮನು ಎಷ್ಟೇ ಸಾಹಸಿಯಾಗಿದ್ದರೂ ಅವನು ರಾಮನಿಗೆ ಸೇವಕನೇ. ಅದರಂತೆ ರಾಜ್ಯಾಡಳಿದಲ್ಲಿ ಸೇವೆಯಲ್ಲಿರುವ ವರ್ಗದ ವ್ಯಕ್ತಿಯು ಎಷ್ಟೇ ಶೌರ್ಯವಂತನಾಗಿದ್ದರೂ ಅವನದು ಒಂದು ಬಗೆಯಲ್ಲಿ ಸೇವೆಯ ಕೆಲಸವೇ ಎನ್ನುವುದನ್ನು ಇಲ್ಲಿ ನೆನಪಿನಲ್ಲಿಟ್ಟುಕೊಳ್ಳಬೇಕು ಎನ್ನುವ ಸಂದೇಶವನ್ನು ವೈದಿಕಶಾಹಿ ವ್ಯವಸ್ಥೆಯು ಅತ್ಯಂತ ಅಚ್ಚುಕಟ್ಟಾಗಿ ನಿರ್ವಹಿಸಿದೆ.

ಇದೇ ದೇಮರಸನು ತಾನು ದೇಮೇಶ್ವರ ದೇವಾಲಯವನ್ನು ಕಟ್ಟಿಸಿ, ದೇವರ ಸೇವಾ ಕಾರ್ಯಗಳಿಗಾಗಿ ಭೂದಾನವನ್ನು ಮಾಡಿದಾಗ ಶಾಸನವೊಂದನ್ನು ಬರೆಯಿಸಿದ್ದಾನೆ. ಆ ಶಾಸನದಲ್ಲಿ ಈತನನ್ನು ಸಮೀಕರಿಸದ ಬಗೆ ಹೀಗಿದೆ:

"ಸಾಹಸದಿಂ ಕಾರ್ತ್ತಿಕೆಯನಂ ಶೌರ್ಯ್ಯದಿಂ
ವೈನತೇಯನಂಶೌಚದಿಂಗಾಂಗೇಯನಂ ಸತ್ಯದಿಂ ರಾಧೇಯನಂ ದಾನದಿಂ
ವರಸುರಭೂಜಮಂ
ಚಲದಿಂ ಕುರುರಾಜನಂ ಧರ್ಮದಿಂ ಯುಧಿಷ್ಠಿರನಂ ಧೈರ್ಯ್ಯದಿಂ
ಮೇರುವಂ ಗಾಂಭೀರ್ಯ್ಯದಿಂ ರತ್ನಾಕರಮಂ ಕ್ಷಮೆಯಿಂ ಧರಿತ್ರಿಯಂ।"[೧೮]

ಆದರೆ ದಾನ ದತ್ತಿಗಳನ್ನು ನೀಡಿದವರನ್ನು, ದೇವಾಲಯಗಳ ನಿರ್ಮಾಣ ಮಾಡಿದವರನ್ನು ಅವರ ಸಾಮಾಜಿಕ ಸ್ಥಾನಮಾನವನ್ನು ಪರಿಗಣಿಸದೆ ವರ್ಣಿಸಿರುವುದು ಕಂಡು ಬರುತ್ತದೆ. ಕ್ರಿ.ಶ.೧೧೫೪ರ ಮುಧೋಳ ಶಾಸನದಲ್ಲಿ ವ್ಯಾಪಾರಿಗಳು ದೇವಸ್ಥಾನ ನಿರ್ಮಿಸಿದ್ದಕ್ಕಾಗಿ ಅವರನ್ನು ಪೌರಾಣಿಕ ವ್ಯಕ್ತಿಗಳೊಂದಿಗೆ ಅಭೇದ್ಯವಾಗಿ ಈ ರೀತಿ ವರ್ಣಿಸಲಾಗಿದೆ;

"ಶ್ರೀಮದಯ್ಯೂರ್ವ್ವರ
ಪರಾಕ್ರಮಮೆನ್ತಂದಡೆ ಬಲ
ದೊಳು ಬಾಲಿಯಂ ಚಲದೊಳು ದುರ್ಯ್ಯೋಧನನಂ ಸತ್ಯದೊಳು ಧರ್ಮ್ಮಪುತ್ರನಂ
ಸಾಹಸದೊಳು ಭೀಮನಂ। ಪರಾಕ್ರಮ
ದೊಳರ್ಜುನನಂ।ಅಜಿತದೊಳು ಸಹದೇವನಂ। ಸೌಚದೊಳು ಗಾಂಗೇಯನಂ।
ತೇಜದೊಳಾದಿತ್ಯನಂ। ಭೋಗದೊಳಿಂದ್ರನಂ। ತ್ಯಾಗದೊಳು ಕ
ರ್ಣ್ನನಂ। ಕೋಪದೊಳಗ್ನಿಯಂ। ಬಲ್ಲಾಳ್ತನದೊಳು ಜವನಂ। ಪೆಂಪಿದಾಕಾಶಮಂ।
ಬಿಣ್ಪಿಂ ಧರಣಿಯಂ। ಗುಣ್ಪಿಂ ಮಹಾಸಮುದ್ರಮಂ।"[೧೯]

ಈ ರೀತಿಯಾಗಿ ವ್ಯಾಪಾರಿ ವರ್ಗವನ್ನು ವರ್ಣಿಸಿರುವುದಕ್ಕೆ ಬಹುಶಃ ಇದಕ್ಕೆ ಆ ಕಾಲದ ಒತ್ತಾಸೆಗಳು ಕಾರಣವಾಗಿರಬಹುದು. ಏಕೆಂದರೆ ಈ ಶಾಸನವನ್ನು ಹಾಕಿಸುವ ವೇಳೆಗಾಗಲೇ ಶರಣ ಚಳುವಳಿಯು ಹುಟ್ಟಿಕೊಂಡು ಅದು ದೇವಾಲಯ ಸಂಸ್ಕೃತಿಯನ್ನು ತಿರಸ್ಕರಿಸಿ, ದೇಗುಲ ಸಂಸ್ಕೃತಿಗೆ ಮನ್ನಣೆಯನ್ನು ನೀಡುತ್ತಿತ್ತು. ಆದರೆ ಪ್ರಭುತ್ವವು ಅದನ್ನು ಒಪ್ಪಿಕೊಳ್ಳದೇ ದೇವಾಲಯ ನಿರ್ಮಾಣ ಸಂಸ್ಕೃತಿಗೆ ಪ್ರೇರಣೆಯನ್ನು ನೀಡುತ್ತಿತ್ತು. ಆ ಕಾರಣದಿಂದಾಗಿಯೇ ದೇವಾಲಯವನ್ನು ನಿರ್ಮಿಸುವವರನ್ನು ವಿಶೇಷವಾಗಿ ನೋಡಲಾಗುತ್ತಿತ್ತು. ಹೀಗಾಗಿಯೇ ವ್ಯಾಪಾರಿಗಳನ್ನೂ ಸಹ ಮಹಾಭಾರತದಲ್ಲಿನ ವಿಶಿಷ್ಟ ಪಾತ್ರಗಳೊಂದಿಗೆ ಹೋಲಿಕೆಯೊಂದಿಗೆ ವರ್ಣಿಸಲಾಗಿದೆ.

ಹಂಪಿಯ ಕಡಲೆಕಾಳು ಗಣಪತಿ ದೇವಸ್ಥಾನದ ಮುಂಭಾಗದಲ್ಲಿರುವ ಶಾಸನವು ಸಿಂಗಾಂಬಿಕ ತನ್ನ ಮಗನಿಗೆ ಹಾಲುಣಿಸುತ್ತಾ ಮುಂದೆ ತನ್ನ ಮಗ ಹೇಗಾಗಬೇಕು ಎನ್ನುವದನ್ನು ಕಲ್ಪಿಸಿಕೊಳ್ಳುತ್ತಾಳೆ:

"ಕೆಱೆಯಂ ಕಟ್ಟಿಸು ಭಾವಿಯಂ ಸವಿಸು ದೇವಾಗಾರಮಂ ಮಾಡಿ
ಸಜ್ಜೆಱೆಯೊಳ್ಸಿಲ್ಕಿದನಾಥರಂ ಬಿಡಿಸು ಮಿತ್ರರ್ಗ್ಗಿಂಬುಕೆಯಿ ನಂಬಿ
ದರ್ಗ್ಗೆಱೆವೆಟ್ಟಾಗಿರು ಶಿಷ್ಟರಂ ಪೊರೆಯೆನುತ್ತಿಂತೆಲ್ಲವಂ ಪಿಂದೆ ತಾಂ
ಯೆಱದಳ್ಪಾಲೆಱೆವಂದು ತೊಟ್ಟು ಕಿವಿಯೊಳ್ ಲಕ್ಷ್ಮೀಧರಾಮಾತ್ಯನಾ॥"[೨೦]

ಹಿಂದೆ ತಾಯಿಯು ಈ ರೀತಿಯಾಗಿ ಕಲ್ಪಿಸಿಕೊಂಡಿದ್ದು ಮುಂದೊಂದು ದಿನ ಮಗ ಲಕ್ಷ್ಮೀಧರಾಮಾತ್ಯನಿಗೆ ಸ್ವಪ್ನದಲ್ಲಿ ಕಾಣಿಸಿಕೊಂಡ ವಿನಾಯಕನು ಹೀಗೆ ಹೇಳುತ್ತಾನೆ: 'ಲವಣ ಸಮುದ್ರದಿಂದ ಸುತ್ತುವರಿದಿರುವ ಜಂಬೂದ್ವೀಪದ ಮಧ್ಯೆ ಇರುವ ಮೇರುಪರ್ವತ ದಕ್ಷಿಣದಲ್ಲಿ ಭರತಖಂಡವಿದೆ. ಅದರಲ್ಲಿ ವಿರೂಪಾಕ್ಷ ಸ್ಥಾನವಿದ್ದು ಅವನ ಎಡಬದಿಗೆ ತುಂಗಭದ್ರಾ ನದಿ ಹರಿಯುತ್ತಿದೆ. ಆ ಪಂಪಾಕ್ಷೇತ್ರದ ಪೂರ್ವಕ್ಕೆ ಮಾಲ್ಯವಂತ ಪರ್ವತವಿದ್ದು, ಅದರ ದಕ್ಷಿಣ ದಿಕ್ಕಿನಲ್ಲಿ ಸಹಜ ಗುಹೆಯೊಂದಿದೆ. ಅದರಲ್ಲಿ ತನ್ನನ್ನು ಪ್ರತಿಷ್ಠಾಪಿಸಬೇಕೆಂದು' ತಿಳಿಸುತ್ತಾನೆ. ಅಂತೆಯೇ ಆ ಸಹಜ ಗುಹೆಯಲ್ಲಿ ದೇವರಾಜನ ಮಂತ್ರಿಯಾದ ಲಕ್ಷ್ಮೀಧರನು ಮಹಾಶಕ್ತಿ ಹೇರಂಬನನ್ನು ಪ್ರತಿಷ್ಠಾಪಿಸುತ್ತಾನೆ. ಇಲ್ಲಿ ಲೋಕೋಪಯೋಗಿ ಕಾರ್ಯಗಳನ್ನು ಮಾಡುವುದರ ಮೂಲಕ ಜನಮಾನಸದಲ್ಲಿ ತನ್ನ ಮಗನ ಹೆಸರು ಉಳಿಯಲಿ ಎಂಬ ಬಯಕೆ ತಾಯಿಯದಾಗಿತ್ತು. ಕೇವಲ ಲೋಕೋಪಯೋಗಿ ಕಾರ್ಯದ ಮೂಲಕವಷ್ಟೇ ತನ್ನ ಹೆಸರು ಚಿರಾಯುವಾಗಿರುವುದಿಲ್ಲ, ಧಾರ್ಮಿಕವಾಗಿ ಗುರುತಿಸಿಕೊಳ್ಳುವುದರ ಮೂಲಕ ತನ್ನ ಅನನ್ಯತೆಯನ್ನು ಉಳಿಸಿಕೊಳ್ಳಬೇಕೆಂಬುದು ಮಗನ ಆಸೆ ಎನ್ನುವಂತಿದೆ. ಒಟ್ಟಾರೆಯಾಗಿ ಆ ಕಾಲದ ಮೌಲ್ಯಗಳು ಸಾಂಸ್ಕೃತಿಕ ಬದುಕಿನ ಒತ್ತಾಸೆಗಳಾಗಿರುವುದರಿಂದ ಇಂತಹ ಕಾರ್ಯಕೈಗೊಳ್ಳಲು ಕಾರಣವಾಗಿರಬಹುದು.

ಹರಿಹರನನ್ನು ಕುರಿತು ಕನಕಗಿರಿಯ ಶಾಸನವೊಂದರಲ್ಲಿ ಪೌರಾಣಿಕವಾಗಿ ವರ್ಣಿಸಲಾಗಿದೆ. 'ಹರಿಹರನು ಭೂಮಿಯನ್ನು ರಕ್ಷಿಸಲೆಂದೇ ಹುಟ್ಟಿದವನು. ಶತ್ರುಗಳನ್ನು ನಾಶಮಾಡಿ ಭೂಮಿಯನ್ನು ಪಾಲಿಸುತ್ತಿದ್ದನು. ಇವನು ಹೇಳುವುದರಿಂದಲೇ ಭೂಮಂಡಲದಲ್ಲಿನ ರಾಜರ ಶಿರಸ್ಸುಗಳು ಬಾಗುತ್ತಿದ್ದವು. ಇವನು ಇಂದ್ರನಂತೆ ಇದ್ದನು. ಯುದುವಂಶದಲ್ಲಿ ಬುಕ್ಕರಾಜನು ಸತ್ಯವಂತನಾಗಿ, ಶತ್ರುಗಳನ್ನು ನಾಶಮಾಡುವವನಾಗಿಯೂ ಸಜ್ಜನರನ್ನು ರಕ್ಷಿಸುವವನಾಗಿಯೂ ಬಲಭದ್ರನು ಹೇಗೆ ಕೃಷ್ಣನಿಗೆ ಸಲಹೆಗಾರನಾಗಿದ್ದನೋ ಹಾಗೆ ಹರಿಹರನಿಗೆ ಬುಕ್ಕನಿದ್ದ ಹಾಗೂ ಹಾಲ್ಗಡಲಿನ

ಚಂದ್ರನಂತೆ ಪ್ರಕಾಶಿಸಿದ. ಆ ನಗರಮಧ್ಯದಲ್ಲಿದ್ದ ರಾಜನಾದ ಹರಿಹರನು ಹಿಂದೆ ಅಯೋಧ್ಯೆಯಲ್ಲಿದ್ದ ರಾಘವನು ಪ್ರಜೆಗಳಿಗೆ ತಂದೆಯಾಗಿದ್ದಂತೆ ಪ್ರಜೆಗಳನ್ನು ತಾನೂ ಸಹ ಪಾಲಿಸಿದ.'[೨೧] ಅತಿಶಯವಾದ ವರ್ಣನೆಯಿಂದ ಐತಿಹಾಸಿಕ ವ್ಯಕ್ತಿಯಾಗಿದ್ದ ಹರಿಹರನನ್ನು ಪೌರಾಣಿಕ ಸ್ತರಕ್ಕೇರಿಸುವ ಪ್ರಯತ್ನ ಇಲ್ಲಿ ನಡೆದಿದೆ. ರಾಜನಾಗಿದ್ದ ಅಣ್ಣನಿಗೆ ಬಲಗೈಯಂತಿದ್ದ ಹರಿಹರನು ಅವನ ಎಲ್ಲಾ ಕಾರ್ಯಗಳಿಗೂ ಸಹಾಯ ಮಾಡುತ್ತಿದ್ದವನು. ಅವನ ಆ ಒಳ್ಳೆಯತನ ಹಾಗೂ ಸಾಮ್ರಾಜ್ಯದ ಮೇಲೆ ಅವನಿಗಿದ್ದ ಕಳಕಳಿ, ತನ್ನ ದೇಶವಾಸಿಗಳ ಮೇಲಿನ ಮಮಕಾರ ಮಾನವ ಸಹಜಗಳಾದರೂ, ಜನರ ದೃಷ್ಟಿಯಲ್ಲಿ ಆತನನ್ನು ಅಸಾಮಾನ್ಯ ವ್ಯಕ್ತಿತ್ವವುಳ್ಳವನು ಎಂದು ಚಿತ್ರಿಸಿದಂತಿದೆ.

ಸಿಂದರ ಅರಸ ರಾಚಮಲ್ಲನು ತೀರಿಕೊಂಡ ನಂತರ ಭೂಮಿಯ ಮೇಲೆ ಲಿಂಗದ ರೂಪದಲ್ಲಿ ಉದ್ಭವವಾಗಿ ಕುರುಗೋಡಿನ ಸ್ವಯಂಭು(ಶಿವ) ದೇವಸ್ಥಾನದ ಪಶ್ಚಿಮ ಭಾಗದಲ್ಲಿ ಕಾಣಿಸಿಕೊಂಡನಂತೆ. ಹೀಗೆ ಕಾಣಿಸಿಕೊಂಡದ್ದರ ನೆನಪಿಗಾಗಿ ಆ ಸ್ಥಳದಲ್ಲಿ ದೇವಸ್ಥಾನ ಕಟ್ಟಿಸಿ ಉದ್ಭವರಾಚಮಲ್ಲೇಶ್ವರ ಎಂಬ ಹೆಸರಿನಲ್ಲಿ ಪೂಜೆ ಮಾಡಿದ್ದನ್ನು ಶಾಸನವೊಂದು ತಿಳಿಸುತ್ತದೆ.

"ದೇವರೊಂದುದಿವಸಂ ಪ್ರತ್ಯಕ್ಷದಿಂ ಬೆ(ಬ)ರ್ಪ್ಪುಧು(ದು)ಂ॥ವ॥ ಆಗಳ್‌ನಂದಿನಾಥ ನಂದಿ ಮಹಾಕಾಟ(ಳ) ವೀರಭದ್ರ ಪ್ರಮುಖಪ್ರಮಥಯೂಥ ಸಮೇತನುಂಹರಿವಿಂಚಿ ಸುರಾಸುರೋರಗಾದಿ ಪ್ರಸಿದ್ಧಾಮರ ಗಣ ಸೇವಿತನುಮೆನಿಸಿ ಪಾರ್ವ್ವತೀಪತಿಬಂದವತರಿಸಿ ನಿಂದಿರಲ್ ರಾಚಮಲ್ಲರಸಂ ಭೋಂಕನೆ ಕಂಡುವೊಡವಟ್ಟಾನಂದದಿಂ ಕರಕಮಳಮುಕುಳಿತನಾಗಿರಲ್ ಹರ(ಂ)ದರಹಸಿತವದನಾರವಿಂದಂ ಕೈಲಾಸಾವ ಳೋಕನಾರ್ಥವಭಯ ಹಸ್ತಾವಳಂಬಕನಾಗೆ ಮಹಾಪ್ರಸಾದಮೆಂದು ಮಹಾವಿಭೂತಿಯಿಂ ಗಣಾಡಂಬರವಂ ಮಾಡಿ ಶಿವಾರ್ಚನೆಯಾಡಿ॥ವೃ॥ ಧರೆಗಿಂತತತ್ಯಂತಚೋದ್ಯಾವಹಮೆನೆ ಶಿವಲಿಂಗಾರ್ಚನಂ ಮಾಡಿ ಪೃಥ್ವೀಭರ ರಾಜ್ಯಶ್ರೀಯುಮಂ ಸಂತತಿಗೆ ನಿಲಿಸಿದಂ ರಾಚಮಲ್ಲಂ ಶರೀರಂ ಬೆರೆಸುತ್ತುಂಗಾಶ್ವ ಚಂಚಚ್ಚಾಮರರುಹೆ(ಹ) ಶಿ(ಸಿ)ತ ಛತ್ರಚಿಹ್ನಾನ್ವಿತಂ ಶಂಕರನೊಳ್ ಸಾಲೋಕ್ಯಮಂ ಪೊರ್ದ್ದಿಯುಮವಂಗೆ ಸಾಯುಜ್ಯದಿಂ ಲಿಂಗವಾಡೆ॥ ಅಂತು ಕುಱುಗೋಡು ಪಟ್ಟಣದ ಶ್ರೀಸ್ವಯಂಭುದೇವರ ಪಶ್ಚಿಮಾಭಿಮುಖದೊಳು ಬಂದು ನಿಂದು ಸಕಳ ಲೋಕಕ್ಕೆ ಕೌತುಕವಾಗಿ ಲಿಂಗಮೂರ್ತಿಯಿಂದುದ್ಭವಿಸಲು ಶ್ರೀಮದುದ್ಭವರಾಚ ಮಲ್ಲೇಶ್ವರದೇವರೆಂಬ ಪೆಸರಂ ತಾಳ್ದಿ ಸುಪ್ರಸಿದ್ಧಮಾಗಿರೆ॥"[೨೨]

ಈ ಅಂಶವನ್ನು ಗಮನಿಸಿದಾಗ ರಾಜನೊಬ್ಬನು ತೀರಿಕೊಂಡ ಮೇಲೆ ಅವನ ಹೆಸರು ಚಿರಕಾಲ ಭೂಮಿಯ ಮೇಲೆ ಇರಬೇಕಾದರೆ, ಅವನ ಹೆಸರಿನಲ್ಲೊಂದು ಸ್ಮಾರಕವಿದ್ದರೆ ತಮ್ಮ ಉದ್ದೇಶ ಸಾಫಲ್ಯವಾಗುವುದು ಎನ್ನುವ ಕಾರಣದಿಂದ ಈ ಬಗೆಯ ಪೌರಾಣಿಕ ಕಲ್ಪನೆಯೊಂದಿಗೆ

ದೇವಸ್ಥಾನ ನಿರ್ಮಾಣ ಮಾಡಿದಂತಿದೆ. ಅಥವಾ ನಮ್ಮ ಸಮಾಜದಲ್ಲಿ ಪರಂಪರಾಗತವಾಗಿ ನಂಬಿಕೊಂಡು ಬಂದಿರುವಂತೆ ತಂದೆ ತಾಯಿಗಳನ್ನು ದೇವರೆಂದು ಪರಿಭಾವಿಸಿ ಅವರ ಹೆಸರಲ್ಲಿ ಸ್ಮಾರಕಗಳನ್ನು ನಿರ್ಮಿಸಲಾಗಿದೆ. ಆ ಮೂಲಕ ಪೂರ್ವಜರನ್ನು ಶಿವನ ಸ್ವರೂಪದಲ್ಲಿ ನೋಡಲಾಗುತ್ತದೆ. ಇಂತಹ ಸಂಗತಿಗಳು ರಾಜರನ್ನು ಮತ್ತು ವಂಶಜರನ್ನು ಪೂಜ್ಯಭಾವನೆಯಿಂದ, ಸೇವಾಮನೋಭಾವನೆಯಿಂದ ನೋಡಲು ಒತ್ತಾಯಿಸುತ್ತವೆ.

ಹೋಮ-ಹವನಗಳನ್ನು, ಯಾಗ-ಯಜ್ಞಾದಿಗಳನ್ನು ಮಾಡುವುದರಿಂದ ದೇವನ ಕೃಪೆಗೆ ಪಾತ್ರರಾದರೆ, ಅಂಥವರಿಗೆ ಸಕಲ ದೇವತೆಗಳ ಆಶೀರ್ವಾದವಿರುತ್ತದೆ. ಆಗ ಸಾಮ್ರಾಜ್ಯದ ಆಡಳಿತವನ್ನು ಸುಗಮವಾಗಿ ನಡೆಯಿಸಿಕೊಂಡು ಹೋಗಬಹುದು ಎನ್ನುವ ಸಾಂಪ್ರದಾಯಿಕ ನಂಬಿಕೆ ಇರುವುದು ಶಾಸನಗಳಿಂದ ತಿಳಿದು ಬರುತ್ತದೆ. "ಪುರಾಣಗಳು ಹುಟ್ಟಿಕೊಂಡದ್ದೇ ಆಯಾ ದೈವಗಳ ಬಗ್ಗೆ. ಅವುಗಳ ಆರಾಧನೆಯಿಂದ, ಆರಾಧನೆ ಮಾಡಿದವನಿಗೆ ಒದಗುವ ಪುಣ್ಯ, ಸುಸ್ಥಿತಿ, ಕಷ್ಟ ಪರಿಹಾರಗಳನ್ನು ರಂಜನೀಯವಾಗಿ ತಿಳಿಸುವುದಕ್ಕೆ. ಈ ಪ್ರವೃತ್ತಿ ಎಲ್ಲಿಯವರೆಗೆ ಮುಂದುವರಿಯಿತೆಂದರೆ, ಅವನು ಎಂಥ ಅಧರ್ಮೀಯನೇ ಆಗಿರಲಿ, ಎಂಥ ಘೋರ ಕೃತ್ಯಗಳನ್ನು ಎಸಗಿದವನೇ ಆಗಿರಲಿ, ಬುದ್ಧಿ ಪೂರ್ವಕವಾಗಿಯಾಗಲೀ, ಆಕಸ್ಮಿಕವಾಗಿಯಾಗಲಿ ದೈವಕ್ಕೆ ಶರಣಾದರೆ, ಆ ದೈವದ ನಾಮಸ್ಮರಣೆಯಿಂದಲೇ ಮುಕ್ತಿ ಪಡೆಯುತ್ತಾನೆ ಎಂಬುದಾಗಿ ಹಲವಾರು ಸುಲಭೋಪಾಯಗಳನ್ನು ಒಡ್ಡುವುದರ ಮೂಲಕ, ತನ್ನತ್ತ ಸೆಳೆಯುವ ಹಂತಕ್ಕೆ ಹೋದುವು. ಈ ತೆರನ ಪ್ರಯತ್ನಗಳಲ್ಲಿ ಶಾಸನಗಳೇನೂ ಹಿಂದೆ ಬಿದ್ದಿಲ್ಲ".[೨೩] ಇಂಥಹದೇ ವಿಷಯವನ್ನು ಒಳಗೊಂಡ ಕ್ರಿ.ಶ.೧೧೩೨ರ ಶಾಸನವೊಂದು ಹೀಗಿದೆ.

"ಬರವೀವ ದೇವ ಚಂಡಿಕಹೋಮದಾಟ್ಚ್ದಿ ಸಾವಿದೇವ
ದಂಡಾದೀಶಂ ಧರೆಯೊಳಗಂದಡೆ ಮಹೇಶ್ವರನ ಪೆಂಪನಿನ್ನೇ ವರ್ಣ್ಣಿಪೆನೋ॥ ಕುದುರೆ
ಕೂಡಿ ಹೋಗು ಬಾಯಂದೆಡೆಯೋಡಿಪರನ್ಯಹ್ವಾಡೆಯಮಿಟ್ಟಿದು ಭಣ್ಡಕ್ಕು
ಡುವರೆ ಮಹೇಶ್ವರಂ ತಾಂ ಪಿಡೆದವಿನಂವಿರ್ಪ್ಪದಿನಕಾಪತ್ತು ಧನ . ಕಳಸ
ಜ ವಿಷ್ಣು ರುದ್ರ ದಿನಪಂ ಸಸಿ ಕಾರ್ತಿಕನೇಕದನ್ತಪಂಜಯನಲಂ
ಸುರಾಧಿಪ ಕುಮಾರಿ ಸರಸ್ವತಿ ಬನದ ಚಣ್ಡಿ ನಿರ್ಮ್ಮ(೦)ಳಲಕ್ಷ್ಮೀಕರಂ
ಗೆ ಪರಮೋತ್ಸವದೊದಿತ್ತು ಸೇಸೆಯಿಂದಳೆಯ ಮಹೇಸ್ವರಂ
ಪಡೆದ ಶ್ರೀಪತಿಭೂಪತಿಯಕ್ಕು ನಿಚ್ಚಯಂ॥"[೨೪]

ಹೋಮಗಳನ್ನು ಮಾಡುವುದರಿಂದ ಸಕಲ ದೇವತೆಗಳೂ ಸಂತೃಪ್ತರಾಗಿ ಎಲ್ಲಾ ಕಾರ್ಯಗಳು ಸುಲಲಿತವಾಗಿ ನಡೆದುಕೊಂಡು ಹೋಗುತ್ತವೆ, ರಾಜ್ಯಕ್ಕೆ ಯಾವುದೇ ಕಂಟಕಗಳು

ಅಂಟಿಕೊಳ್ಳುವುದಿಲ್ಲ, ಸಕಲ ಕಷ್ಟ ಕಾರ್ಪಣ್ಯಗಳು ದೂರಾಗುತ್ತವೆ, ಆ ರಾಜ್ಯ ಧರ್ಮರಾಜ್ಯವಾಗಿ ಮುಂದುವರೆಯುತ್ತದೆ ಎನ್ನುವಂತಹ ಅಭಿಪ್ರಾಯಗಳು ಪುರೋಹಿತಶಾಹಿ ವರ್ಗದಿಂದ ಹುಟ್ಟಿಕೊಂಡತವುಗಳಾಗಿವೆ. ಅವುಗಳನ್ನು ಸಾರ್ವತ್ರೀಕರಿಸಲು ಮತ್ತು ಅವುಗಳನ್ನು ಮುಂದಿನ ಪೀಳಿಗೆಗೆ ಕೊಂಡೊಯ್ಯಲು ಶಾಸನಗಳನ್ನು ಮಾಧ್ಯಮವಾಗಿ ಬಳಸಿಕೊಳ್ಳಲಾಗಿದೆ.

ಒಬ್ಬ ವ್ಯಕ್ತಿಯನ್ನು ಪೌರಾಣಿಕವಾಗಿ ಅಭೇದ್ಯವಾಗಿಸುವುದು ಕೇವಲ ಹಿಂದೂ ಧರ್ಮದಲ್ಲಿಯಷ್ಟೇ ಅಲ್ಲ, ಇತರ ಧರ್ಮೀಯರೂ ಸಹ ಇಂತಹ ಹೋಲಿಕೆಗೆ ಮುಂದಾಗಿವುದು ಶಾಸನಗಳಲ್ಲಿ ದಾಖಲಾಗಿದೆ. ಕೊಪ್ಪಳದಲ್ಲಿ ದೊರೆತ ಶಾಸನ[೨೫]ವೊಂದರಲ್ಲಿ 'ಬೆಳೆದಪುದಿನ್ನುಮುರ್ವ್ವಿ ಪದದಪ್ಪದೆ ಪೆರ್ಮ್ಮಳೆ ಕೊಳ್ವುದಿನ್ನುಮಗ್ಗಳದ ಗುಣಂಗಳಂ ಮೆಱೆವರಿನ್ನುಮಿಳೇಶ್ವರರಿನ್ನುಮಿ ಲ್ಲಣಂ ಕಳಮಳಿಪಾಯಿಲಂ ಪಸವುಬಚ್ಚಬಱಂ ಪೆಱವುಂ ಭಯಂಗಳಾಕುಲತೆಯುಮಿ ನ್ನುಮಿಲ್ಲಜಿತಸೇನಮುನೀನ್ದ್ರ ತಪಟ್ಟಿಭಾವದಿಂ' ಅಜಿತಸೇನಾಚಾರ್ಯರು ಭೂಮಿಯ ಮೇಲೆ ಪೆರ್ಮಳೆಗಳನ್ನು ಸುರಿಸಿದಂತೆ ಅವರ ಶ್ರೇಷ್ಟ ಗುಣಗಳಿದ್ದವು. ಮತ್ತು ಅವರಿಗೆ ಹಸಿವು ನೀರಡಿಕೆಗಳಿರಲಿಲ್ಲ ಎಂದು ಅವರನ್ನು ಪೌರಾಣಿಕರಿಸಿರುವುದನ್ನು ಹೇಳಲಾಗಿದೆ.

ಕೇವಲ ದಾನ ಶಾಸನಗಳಲ್ಲಿ ಅಷ್ಟೇ ಅಲ್ಲದೆ ಕೆಲ ಸಂದರ್ಭದಲ್ಲಿ ಅರಸನ ಋಣಕ್ಕಾಗಿ, ದೇಶ ರಕ್ಷಣೆಗಾಗಿ ಹೋರಾಡಿ ಮಡಿದವರ ನೆನಪಿಗಾಗಿ ನಿಲ್ಲಿಸುತ್ತಿದ್ದ ವೀರಗಲ್ಲುಗಳಲ್ಲಿಯೂ ವೀರರ ಶೌರ್ಯವನ್ನು ವರ್ಣಿಸಿರುವುದು ಕಂಡು ಬರುತ್ತದೆ. ಯುದ್ಧದಲ್ಲಿ ಹೋರಾಟ ಮಾಡುವ ಯೋಧನ ಮನಸ್ಸಿನಲ್ಲಿನ ಭಾವನೆ ಹೇಗಿರುತ್ತಿತ್ತೆಂದರೆ; "ಯುದ್ಧದಲ್ಲಿ ಮಡಿದರೆ ಲಕ್ಷ್ಮೀ ದೊರಕುವಳು, ಸತ್ತರೆ(ಸ್ವರ್ಗದಲ್ಲಿ) ಸುರಾಂಗನೆಯರು ದೊರಕುವರು, ದೇಹವು ಕ್ಷಣದಲ್ಲಿ ಧ್ವಂಸವಾಗುವ ವಸ್ತುವಾದ್ದರಿಂದ ಉತ್ತೇಜನಗೊಂಡ ಅವರು ಧೈರ್ಯದಿಂದ ರಣರಂಗದಲ್ಲಿ ಮುನ್ನುಗ್ಗಿ ದೇಹವನ್ನು ಹುಲ್ಲಿಗಿಂತ ಕಡೆಯಾಗಿ ಎಣಿಸಿ ಹೋರಾಡಿ, ಗೆದ್ದು ಹಿಂದಕ್ಕೆ ಬರುತ್ತಿದ್ದರು. ಅಥವಾ ಸೋತು ಯುದ್ಧದಲ್ಲಿ ಒರಗುತ್ತಿದ್ದರು."[೨೬]

"ಕರ್ನಾಟಕದಲ್ಲಿ ದೊರೆಯುವ ಅಸಂಖ್ಯಾತವಾದ ವೀರಗಲ್ಲುಗಳು ವೀರರ ಪರಾಕ್ರಮವನ್ನು ತಿಳಿಸುವ ಸ್ಮಾರಕಗಳೇ ಆದರೂ ಅವು ಮೂಲಭೂತವಾಗಿ ಸಾವಿನನಂತರ ಜೀವನದ ಬಗ್ಗೆ ಪುರಾಣಗಳು ರೂಪಿಸಿದ ಪರಿಕಲ್ಪನೆಯಿಂದಲೇ ರೂಪುಗೊಂಡಂಥವು. ವೀರಗಲ್ಲುಗಳ ಪಾಠ ಮತ್ತು ಶಿಲ್ಪಗಳು ಈ ಪುರಾಣ ಪ್ರಜ್ಞೆಯಿಂದ ರೂಪುಗೊಂಡು, ಪುರಾಣ ಮೌಲ್ಯಗಳನ್ನೆ ವೈಭವೀಕರಿಸಿ, ಆ ಮೂಲಕ ಆಳುವ ವ್ಯವಸ್ಥೆ ಜನರನ್ನು ತಮ್ಮ ಪರವಾಗಿ ಹೋರಾಡುವಂತೆ ಆಕರ್ಷಿಸಿತು ಎಂಬುದು ವಾಸ್ತವ ಸಂಗತಿ."[೨೭]

ವೀರರಾಗಿ ಮಡಿದವರ ನೆನೆಪಿನಲ್ಲಿ ನಿಲ್ಲಿಸುವ ವೀರಗಲ್ಲುಗಳನ 'ವೀರ' ಎನ್ನುವ ಪದಕ್ಕೆ ವಿಶೇಷ ಅರ್ಥವಿರುವುದನ್ನು ಮರೆಯುವಂತಿಲ್ಲ. ಸಾಮಾನ್ಯವಾಗಿ ಕನ್ನಡದ 'ವೀರ'

ಎನ್ನುವುದು ಆಂಗ್ಲ ಭಾಷೆಯ 'Hero' ಎನ್ನುವ ಶಬ್ದದಿಂದ ಬಂದಿರುವಂತಹದ್ದು. ಈ 'Hero' ಎನ್ನುವುದು ಮೂಲತಃ ಗ್ರೀಕ್ ಭಾಷೆಯ ಪದ. ಹೋಮರ್ ಮಹಾಕವಿಯು ತನ್ನ 'ಇಲಿಯಡ್' ಮಹಾಕಾವ್ಯದಲ್ಲಿ 'ವೀರ' ಎನ್ನುವ ಪದವನ್ನು ದೈವಿಕ ಶಕ್ತಿಯುಳ್ಳ ಮನುಷ್ಯ, ದೇವತೆಗಳಿಂದ ದತ್ತವಾದ ಶೌರ್ಯ ಸಾಹಸ ಮತ್ತು ದಕ್ಷತೆ ಮುಂತಾದ ಗುಣವುಳ್ಳವನು ಎನ್ನುವ ಅರ್ಥದಲ್ಲಿ ಗುಣವಾಚಕ ಶಬ್ದವನ್ನಾಗಿ ಬಳಸಿದ್ದಾನೆ. ಬಹುಶಃ ಶೌರ್ಯ ಸಾಹಸವೆಂಬುದು ಎಲ್ಲರಲ್ಲಿಯೂ ಇರುವಂತಹದಲ್ಲ. ಇಂತಹ ವಿಶೇಷ ಗುಣವನ್ನು ಹೊಂದಿದವರಿಗೆ ಮಾತ್ರ ಈ ಗುಣವಾಚಕ ವಿಶೇಷಣವನ್ನು ಸೇರಿಸಿ ಈ ಪದ ಬಳಸಲಾಗಿದೆ ಎನಿಸುತ್ತದೆ. ಇದು ಕೇವಲ ಗ್ರೀಕ್ ದೇಶದ ಸಾಂಸ್ಕೃತಿಕ ಪರಿಸರಕ್ಕೆ ಸಂಬಂಧಿಸಿದ ಪದವಲ್ಲ. ಬಹುಶಃ ಪ್ರಪಂಚದ ಯಾವುದೇ ದೇಶದ ವ್ಯಕ್ತಿಯಿರಲಿ ಅವನ ಗುಣ ಸಾಹಸಕ್ಕೆ ಈ ಪದ ಹೊಂದಾಣಿಕೆಯಾಗುತ್ತದೆ.

ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ವರ್ಣಾಶ್ರಮ ಧರ್ಮದ ಪ್ರಕಾರ ಕ್ಷತ್ರಿಯರಷ್ಟೇ ವೀರರು ಎನ್ನುವ ನಂಬಿಕೆಯಿದೆ. ಕ್ಷತ್ರಿಯರದು ರಾಜ್ಯರಕ್ಷಿಸುವ ಜವಾಬ್ದಾರಿಯನ್ನು ಕ್ಷತ್ರಿಯರಿಗೆ ಸೃಷ್ಟಿಕರ್ತನೇ ವಹಿಸಿದ್ದಾನೆಂದು ಹೇಳಿ ಈ ನಂಬಿಕೆಗೆ ಗಟ್ಟಿತನವನ್ನು ಒದಗಿಸುವ ಪ್ರಯತ್ನ ಮಾಡಲಾಗಿದೆ. ಹೀಗೆಂದ ಮಾತ್ರಕ್ಕೆ ಯುದ್ಧದಲ್ಲಿ ಭಾಗಿಗಳಾಗಿ ಜೀವದ ಹಂಗನ್ನು ತೊರೆದು ಹೋರಾಡಿದವರೆಲ್ಲರೂ ಕ್ಷತ್ರಿಯರಲ್ಲ ಎನ್ನುವುದನ್ನು ಮರೆಯುವಂತಿಲ್ಲ. ಕ್ಷತ್ರಿಯರಿಗೆ ಸಹಾಯಕರಾಗಿ ನಿಂತು ಹೋರಾಡುತ್ತಿದ್ದವರು ಹೆಚ್ಚಾಗಿ ಶೂದ್ರ ವರ್ಣದವರು. ಇಲ್ಲಿ ಜಾತಿ ಯಾವುದೇ ಇರಲಿ, ಅವರ ವೀರತ್ವ ಮುಖ್ಯ. ಪಂಪನ 'ಛಲಂ ಕುಲಂ ಬಲಂ ಕುಲಂ' ಎನ್ನುವ ಉಕ್ತಿಯು ಸಾಮಾಜಿಕ ವ್ಯವಸ್ಥೆ ರೂಪಿಸಿದ ಜಾತಿಗಿಂತ ವ್ಯಕ್ತಿಯ ಸಾಮರ್ಥ್ಯದ ಮೇಲೆ ಅವನ ಸ್ಥಾನವನ್ನು ನಿರ್ಧರಿಸಬೇಕೆಂಬುದನ್ನು ಸೂಚಿಸುತ್ತದೆ. ಹೀಗಾಗಿ ಜಾತಿಯನ್ನು ಲೆಕ್ಕಿಸದೇ ವೀರನ ಸಾಹಸವನ್ನು ಮೆಚ್ಚಿ ಅನೇಕ ವೀರಗಲ್ಲುಗಳನ್ನು ಹಾಕಿಸಲಾಗಿದೆ. "ಇತಿಹಾಸ ಕಾಲದ ವೀರರನ್ನೂ, ಅರಸರನ್ನೂ ಗಮನಿಸಿದಾಗ ವೀರತ್ವ ಯಾವುದೇ ಒಂದು ಜಾತಿಯವರಲ್ಲಿ ಮಾತ್ರ ಪ್ರಕಟವಾಗದೆ, ವ್ಯಕ್ತಿಯ ಸ್ವಾಭಿಮಾನ, ಮಹಾತ್ವಾಕಾಂಕ್ಷೆ, ಶೌರ್ಯ, ಪರಾಕ್ರಮವನ್ನು ಅವಲಂಬಿಸಿ ತನ್ನದೇ ರೀತಿಯಲ್ಲಿ ಎಲ್ಲ ಜಾತಿಯ ವ್ಯಕ್ತಿಗಳಲ್ಲಿಯೂ ಪ್ರಕಟವಾಗಿದೆ ಎನ್ನುವುದು ಅರಿವಾಗುತ್ತದೆ."[೨೮] ಆದಾಗ್ಯೂ ಶೂದ್ರರ ಜೊತೆ ಹೋರಾಡಲು ಕ್ಷತ್ರಿಯರು ಹಿಂಜರಿಯುತ್ತಿದ್ದರು ಎನ್ನುವ ಅಂಶವು ಗಮನಿಸತಕ್ಕದ್ದಾಗಿದೆ. ಇದಕ್ಕೆ ಕರ್ಣನ ಪ್ರಸಂಗವೇ ನಿದರ್ಶನ.

ವೀರರ ವ್ಯಕ್ತಿ ಚಿತ್ರವನ್ನು ಹೇಳುವಾಗ ಸಾಮಾನ್ಯವಾಗಿ ಸಾವಿನ ಕುರಿತು ಯೋಚಿಸಲೇ ಬೇಕಾಗುತ್ತದೆ. ಸಾವು ಎನ್ನುವುದು ಯಾರನ್ನು ಬಿಟ್ಟಿದೆ ಹೇಳಿ? ಹುಟ್ಟಿದವನು ಒಂದಲ್ಲ ಒಂದು ದಿನ ಸಾಯಲೇ ಬೇಕು. ಸಾಯುವಾಗ ಅಪಕೀರ್ತಿಯಿಂದ, ಹೇಡಿತನದಿಂದ ಸಾಯುವುದು ವೀರನ ಲಕ್ಷಣವಲ್ಲ. ಅದಕ್ಕಾಗಿಯೇ ಬಾದಾಮಿಯ ಕಪ್ಪೆ ಅರಭಟ್ಟನ ಶಾಸನದಲ್ಲಿ ಹೀಗೆ ಹೇಳಲಾಗಿದೆ.

"ಮರನ್ತೇಜಸ್ವಿನೋ ಮೃತ್ಯುರ್ನತು ಮಾನಾವಖಣ್ಡನಮ್

ಮೃತ್ಯುಸ್ತತ್ ಕ್ಷಣಿಕೋ ದುಃಖಮ್ಮಾನಭಂಗಂ ದಿನೇ ದಿನೇ"

ವೀರತನದಿಂದ ಹೋರಾಡಿ ಸತ್ತರೆ ಅಂತಹ ಸಾವಿನಲ್ಲಿ ಸಾರ್ಥಕತೆ ಇದೆ ಎನ್ನುವ ಧ್ವನಿಯು ಇಲ್ಲಿದೆ.

ಎಷ್ಟೇ ವೀರತ್ವ ಅಥವಾ ಶೌರ್ಯ ಜನರಲ್ಲಿ ಇದ್ದರೂ ಸಹಿತ ಸದಾ ಕಾಲ ಅವರು ಯುದ್ಧ ಮಾಡುತ್ತಲೇ ಇರಬೇಕು ಎಂದು ಬಯಸುವವರಲ್ಲ. ಅವರಿಗೂ ಬದುಕುವ ಆಸೆ ಇದ್ದೇ ಇರುತ್ತದೆ. ಕೆಲ ಸಂದರ್ಭಗಳಲ್ಲಿ ಅವರು ಯುದ್ಧವನ್ನು ಸಹಜವಾಗಿಯೇ ನಿರಾಕರಿಸುತ್ತಾರೆ. ಆದರೆ ಪ್ರಭುತ್ವವು ಯುದ್ಧವನ್ನು ನಿರಾಕರಿಸುವಂತಿಲ್ಲ. ರಾಜ್ಯ ರಾಜ್ಯಗಳ ನಡುವೆ ನಿರಂತರ ಯುದ್ಧ ನಡೆಯುವುದು ಸಹಜ. ಆಗ ಪ್ರಭುತ್ವವು ಯುದ್ಧವನ್ನು ನಿರಾಕರಿಸುವ ಜನರನ್ನು ಧರ್ಮದ ಹೆಸರಿನಲ್ಲಿ ಪ್ರಚೋದಿಸುತ್ತಿದ್ದರು ಎನ್ನುವಂತಹ ಅಂಶವನ್ನು ಚೀನಾ ದೇಶದ ಪ್ರವಾಸಿ ಹ್ಯುಯೆನ್‌ತ್ಸಾಂಗ್ ತನ್ನ ಪ್ರವಾಸಿ ಕೃತಿಯಲ್ಲಿ ತಿಳಿಸಿದ್ದಾನೆ. ಈ ಕೃತಿಯಲ್ಲಿ ಪ್ರಸ್ತಾಪಿಸಿರುವ ಪ್ರಚೋದಕ ಅಂಶವೊಂದು ಹೀಗಿದೆ; "ಜನನ ಮರಣವೆಂಬ ಉಬ್ಬರವಿಳಿತಗಳುಳ್ಳ ಅನಂತ ಸಾಗರ. ಅದರ ಸುಳಿಗೆ ಸಿಕ್ಕಿದರೆ ಬುದ್ಧಿವಂತರೂ ಅವುಗಳಿಂದ ತಪ್ಪಿಸಿಕೊಳ್ಳಲಾರರು. ಅವರನ್ನು ಕಷ್ಟದಿಂದ ಪಾರು ಮಾಡುವುದಕ್ಕೆ ಒಂದು ಉಪಾಯವಿದೆ. ಯಾರು ಯುದ್ಧಕ್ಕೆ ಹೋಗಿ ಹೋರಾಡಿ ಸಾಯುತ್ತಾರೋ ಅವರಿಗೆ ಪುನಃ ಮನುಷ್ಯ ಜನ್ಮ ಪ್ರಾಪ್ತವಾಗುತ್ತದೆ. ಇದರಿಂದ ದೇವರು ತೃಪ್ತಗೊಂಡು ಆಶೀರ್ವಾದ ಮಾಡುತ್ತಾನೆ. ಸ್ವಲ್ಪ ಕೆಲಸದಿಂದ ಅನುಕೂಲ ಪಡೆಯಬಹುದಾದ ಅಂಥ ಅವಕಾಶವನ್ನು ಏಕೆ ಕಳೆದುಕೊಳ್ಳಬೇಕು? ಈ ಮನುಷ್ಯ ಶರೀರದ ಮೇಲೆ ಮರವೆಯ ಅಂಧಕಾರ ಪ್ರಾಪ್ತವಾಗುತ್ತದೆ. ಆದುದರಿಂದ ಒಳ್ಳೆಯ ಕರ್ಮ ಮಾಡುವುದರಲ್ಲಿ ಪ್ರತಿಯೊಬ್ಬನೂ ನಿರತನಾಗಬೇಕು. ರಣರಂಗದಲ್ಲಿ ಸತ್ತರೆ ಮನೆಗೆ ಹಿಂತಿರುಗಿ ಬಂದಂತೆ-" ಹೀಗೆ ಮನುಷ್ಯನ ಜನ್ಮ, ಸಾವಿನ ಬಗ್ಗೆ ಹೇಳಿ ಜನರನ್ನು ಯುದ್ಧಕ್ಕೆ ಪ್ರೋತ್ಸಾಹಿಸಿದ್ದಾರೆ.

ವೀರತ್ವದಿಂದ ಹೋರಾಡಿ ಮಡಿದ ಎನ್ನುವ ಮಾತ್ರಕ್ಕೆ ಆ ವ್ಯಕ್ತಿಗೆ ಶ್ರೇಷ್ಠ ಪಟ್ಟ ಕೊಡಬೇಕಾಗಿಲ್ಲ. ಅವನು ಹೋರಾಡಿರುವುದು ಯಾವ ಉದ್ದೇಶಕ್ಕೆ ಎನ್ನುವುದನ್ನು ಕೂಡ ಲೆಕ್ಕಿಸಬೇಕು ಎನ್ನುವ ಭಾವನೆ ಜನರಲ್ಲಿತ್ತು. ಇದಕ್ಕೆ ಕುಮಾರರಾಮನ ಸಾಂಗತ್ಯದಲ್ಲಿಯ ಒಂದು ಪದ್ಯವನ್ನು ನೋಡಬಹುದು.

ಸಾಯಬಹುದು ಕರ್ಣ ಕಳಶಸಂಭವ ಗಾಂ
ಗೇಯರಂತಾಜಿರಂಗದೊಳು।
ಸಾಯಬಾರದು ರಾವಣ ಕೀಚಕ ಕುರು
ರಾಯರಂತಪಕೀರ್ತಿಯಿಂದ॥[೨೯]

ಹಾಗೆಯೇ ಅಭಿಮನ್ಯುವು ವೀರಾವೇಶದ ಹೋರಾಟದಲ್ಲಿ ಮಡಿದಾಗ, ಅವನನ್ನು ಮೋಸದಿಂದ ಕೊಂದ ವಿಷಯ ತಿಳಿದ ದುರ್ಯೋಧನನು ತಮ್ಮ ಪಕ್ಷದವರು ಮಾಡಿದ ತಪ್ಪಿನ ಅರಿವಾಗಿ ಮಮ್ಮಲ ಮರುಗುವುದು, ಕಿರಿಯನಾದರೂ, ತನ್ನ ಮಗನ ವಯಸ್ಸಿನವನಾದರೂ ಅಭಿಮನ್ಯವಿನ ಆಗ ಕುರುರಾಯನು ಕೈ ಮುಗಿಯುವುದು ನಿಜವಾದ ವೀರತ್ವಕ್ಕೆ ನೀಡಿದ ಗೌರವವನ್ನು ತಿಳಿಸುತ್ತದೆ.

ಏನೇ ಇದ್ದರೂ ವೀರತ್ವ ಎನ್ನುವುದು ಸಹಜವಾಗಿಯೇ ಹೊರಹೊಮ್ಮಿದಾಗ ಅದಕ್ಕೆ ವಿಶೇಷ ಗೌರವವಿರುತ್ತದೆ. ಹೀಗೆ ವೀರತ್ವವು ಸಹಜವಾಗಿ ಹೊರಹೊಮ್ಮುವುದಕ್ಕೆ ಸ್ವಾಭಿಮಾನವು ಕಾರಣವಾಗುತ್ತದೆ. ಮಾತೃಭೂಮಿಯ ಬಗೆಗೆ ಹೊಂದಿರುವ ಅಭಿಮಾನವೂ ಕೂಡ ಇಂತಹ ಸ್ವಾಭಿಮಾನಕ್ಕೆ ಪ್ರೇರಕವಾಗಿ ಕೆಲಸ ಮಾಡುತ್ತದೆ. ತಮ್ಮದೆನ್ನುವ ಪ್ರದೇಶದ ಮೇಲೆ ಅನ್ಯರಾದವರು ಆಕ್ರಮಣ ಮಾಡಿದಾಗ ಸ್ವಾಭಿಮಾನವು ಕೆರಳಿ ಶೌರ್ಯದ ರೂಪವನ್ನು ಪಡೆದುಕೊಳ್ಳುತ್ತದೆ.

ಹೀಗೆ ವೀರತ್ವದಿಂದ ಹೋರಾಡಿ ಮಡಿದವರ ನೆನಪಿಗಾಗಿ ಸ್ಮಾರಕ ರೂಪದಲ್ಲಿ ನಿಲ್ಲಿಸುವ ಶಿಲೆಗಳೇ ವೀರಗಲ್ಲುಗಳು. ಇಂತಹ ವೀರಗಲ್ಲುಗಳನ್ನು ಹಾಕಿಸುವ ಉದ್ದೇಶ ಹೀಗಿರುತ್ತದೆ. "ವೀರಗಲ್ಲುಗಳನ್ನು ನಿಲ್ಲಿಸುವಲ್ಲಿ ಲೌಕಿಕ ಮತ್ತು ಪಾರಮಾರ್ಥಿಕ ದೃಷ್ಟಿಗಳೆರಡೂ ಇತ್ತೆಂದು ತೋರುತ್ತದೆ. ವೀರನ ಪರಾಕ್ರಮವನ್ನು ಮೆಚ್ಚಿ ವೀರಗಲ್ಲನ್ನು ನೆಡುವದು; ಅವನ ಪರಾಕ್ರಮ ಲೋಕಕ್ಕೂ ತಿಳಿಯಲೆಂದು ನೆಡುವುದು. ಇವು ಲೌಕಿಕ ಉದ್ದೇಶಗಳು. ಮಡಿದ ವೀರನಿಗೆ ವೀರಗಲ್ಲನ್ನು ನಿಲ್ಲಿಸುವುದು ನಮ್ಮ ಕರ್ತವ್ಯ ಎಂದು ಭಾವಿಸಿ, ಹಾಗೆ ವೀರಗಲ್ಲು ನಿಲ್ಲಿಸುವುದರ ಮೂಲಕ ಅವನಿಗೆ ಸ್ವರ್ಗವೋ, ಕೈಲಾಸವೋ, ವೈಕುಂಠವೋ ಪ್ರಾಪ್ತವಾಗುತ್ತದೆಯೆಂದು ನಂಬಿ ವೀರಗಲ್ಲುಗಳನ್ನು ನೆಡುವುದು. ಇವು ಪಾರಮಾರ್ಥಿಕ ಉದ್ದೇಶಗಳು."[೨೦] ವೀರಗಲ್ಲುಗಳನ್ನು ನಿಲ್ಲಿಸುವುದರ ಹಿಂದೆ ಲೌಕಿಕತೆಯ ಜೊತೆಗೆ ಆ ವ್ಯಕ್ತಿಯನ್ನು ಪೌರಾಣಿಕಕ್ಕೆ ತಂದು ನಿಲ್ಲಿಸುವ ಉದ್ದೇಶವೂ ಇದೆ. ಹಾಗೆಯೇ ಆತನ ವೀರತ್ವವನ್ನು, ಮಾತೃಭೂಮಿಗಾಗಿ ಆತನು ಮಾಡಿದ ಸೇವೆಯನ್ನು ಲೋಕವರಿಯುವಂತೆ ಮಾಡುವ ಉದ್ದೇಶವಿದ್ದು, ಅಂತವರ ಪ್ರೇರಣೆಯು ನಂತರ ಕಾಲದ ಜನರಿಗಾಗಿ ಅವರೂ ಸಹಿತ ಸ್ವಯಂಪ್ರೇರಿತರಾಗಿ ಹೋರಾಟಕ್ಕೆ ಅಣಿಯಾಗಲೆನ್ನುವ ಪ್ರಭುತ್ವ ವ್ಯವಸ್ಥೆಯ ಹುನ್ನಾರವೂ ಇದರಲ್ಲಿದೆ ಎನ್ನುವುದನ್ನು ಮರೆಯುವಂತಿಲ್ಲ.

ಗಮನಿಸಬೇಕಾದ ಮುಖ್ಯ ಅಂಶವೆಂದರೆ ವೀರಗಲ್ಲುಗಳನ್ನು ನಿಲ್ಲಿಸುವ ಸ್ಥಳ. ಕರ್ನಾಟಕದಲ್ಲಿ ವೀರಗಲ್ಲುಗಳು ಅಧಿಕ ಪ್ರಮಾಣದಲ್ಲಿ ಕಾಣಸಿಗುವುದು ದೇವಾಲಯಗಳ ಬಳಿಯೇ. ದೇವಾಲಯಗಳು ಸಾರ್ವಜನಿಕರು ಭೇಟಿ ಮಾಡುವ ಪ್ರಮುಖ

ಸ್ಥಳವಾಗಿದ್ದರಿಂದಾಗಿಯೇ ಹೆಚ್ಚಿನ ಪ್ರಮಾಣದ ವೀರಗಳಲ್ಲುಗಳನ್ನು ಇಲ್ಲಿ ನೆಡಲಾಗಿದೆ. "ವೀರಗಲ್ಲುಗಳನ್ನು ದೇವಾಲಯಗಳ ಮುಂದೆ ನಿಲ್ಲಿಸುವಲ್ಲಿ ಅವರ ಮುಖ್ಯ ಉದ್ದೇಶ ವೀರನು ದೇವರ ಸನ್ನಿಧಿಯಲ್ಲಿರುತ್ತಾನೆ ಎಂಬ ನಂಬಿಕೆ. ವೀರಗಲ್ಲಿನ ಆರಾಧನೆ ಒಂದು ನಿಯತಕಾಲದಲ್ಲಿ ನಡೆಯಬೇಕಾದ ಆಚರಣೆಯೆಂದು ಭಾವಿಸಿದ್ದ ಕಾಲದಲ್ಲಿ ದೇವಾಲಯ ಮತ್ತು ವೀರನ ಸ್ಮಾರಕ ಒಂದೆಡೆಗೆ ಇರುವುದರ ಅನುಕೂಲತೆಯೂ ಅವರಿಗೆ ಕಂಡಿಬೇಕು. ದೇವಾಲಯಗಳಿಗೆ ಸಹಜವಾಗಿ ಜನರು ಹೋಗುತ್ತಿದ್ದ ಕಾರಣದಿಂದಾಗಿ ಅವರಿಗೆ ಅನಾಯಾಸವಾಗಿ ವೀರನ ಪರಾಕ್ರಮದ ಪರಿಚಯವೂ ಆಗುತ್ತದೆ ಎಂಬುದಾಗಿ ಅವರು ಭಾವಿಸಿದ್ದಿರಬೇಕು.ಆದರೆ ವೀರಗಲ್ಲುಗಳನ್ನು ದೇವಾಲಯಗಳ ಮುಂದೆ ನಿಲ್ಲಿಸುವಲ್ಲಿ ಮುಖ್ಯವಾಗಿ ಧಾರ್ಮಿಕತೆಯೇ ಪ್ರಧಾನ ಅಂಶವಾಗಿತ್ತೆಂದು ತೋರುತ್ತದೆ."[೧೧]ಕೆಲವೊಂದು ಸಂದರ್ಭದಲ್ಲಿ ಎಲ್ಲಿಯೋ ಬಿದ್ದ ವೀರಗಲ್ಲುಗಳನ್ನು ದೇವಸ್ಥಾನಗಳ ಮುಂದೆ ತಂದು ನಿಲ್ಲಿಸಿರುವ ಸಾಧ್ಯತೆಗಳು ಇರುತ್ತವೆ.

ವೀರಗಲ್ಲುಗಳನ್ನು ಎಲ್ಲಿಯೇ ನಿಲ್ಲಿಸಲಿ, ವೀರನ ಆತ್ಮವನ್ನು ಅದರಲ್ಲಿ ಆವಾಹನೆ ಮಾಡಿ ಅವುಗಳನ್ನು ಪ್ರತಿಷ್ಠಾಪಿಸುವ ಪದ್ಧತಿ ರೂಢಿಯಲ್ಲಿದ್ದಂತೆ ತಿಳಿದು ಬರುತ್ತದೆ. ಅಂದರೆ ಸ್ಮಾರಕ ಶಿಲೆಯಲ್ಲಿ ವೀರನ ಆತ್ಮ ನೆಲೆಸುವಂತೆ ಮಾಡುವುದು. ಯುದ್ಧದಲ್ಲಿ ಸತ್ತರೆ ಪರಲೋಕದಲ್ಲಿ ಸುಖಿಸಬಹುದೆನ್ನುವ ನಂಬಿಕೆ ಇತ್ತು. ರಣರಂಗದಲ್ಲಿ ಸತ್ತ ವೀರನಿಗಾಗಿ ದೇವಲೋಕದಲ್ಲಿ ಕನ್ನೆಯರು ಕಾದುಕೊಂಡಿರುತ್ತಾರಂತೆ. ಅಷ್ಟೇ ಅಲ್ಲ ಅವನನ್ನು ಪಡೆಯಲು ಅವರಲ್ಲಿ ಪೈಪೋಟಿಯೂ ನಡೆಯುತ್ತಿದ್ದಂತೆ ಹೇಳಲಾಗುತ್ತದೆ. ಬ್ರಹ್ಮಲೋಕಕ್ಕೆ ಪ್ರವೇಶ ಮಾಡುವ ಮೊದಲು ಸೂರ್ಯ ಮಂಡಲವನ್ನು ದಾಟಬೇಕು ಎನ್ನುವ ಪೌರಾಣಿಕ ನಂಬಿಕೆಯಿದೆ. ಆದರೆ ಈ ಸೂರ್ಯ ಮಂಡಲವನ್ನು ಭೇದಿಸುವ ಶಕ್ತಿ ಇರುವುದು ಇಬ್ಬರಿಗೆ ಮಾತ್ರ ಒಬ್ಬ ಯೋಗಿ, ಮತ್ತೊಬ್ಬ ಹೋರಾಡುತ್ತ ಸತ್ತ ವೀರ. ಅಂದರೆ ವೀರನನ್ನು ಯೋಗಿಗೆ ಸಮನಾದವನು ಎಂದು ಚಿತ್ರಿಸುವ ಮೂಲಕ ಜನರಲ್ಲಿ ಆತನ ಬಗ್ಗೆ ಮತ್ತಷ್ಟು ಗೌರವ ಹಾಗೂ ಭಕ್ತಿ ಮೂಡುವಂತೆ ಮಾಡಲಾಗಿದೆ. ಈ ಹಿನ್ನೆಲೆಯಲ್ಲಿ ಹಲವು ವೀರಗಲ್ಲುಗಳು ಕಾಣಸಿಗುತ್ತವೆ. ನಿದರ್ಶನಕ್ಕಾಗಿ ಈ ಕೆಳಗಿನವುಗಳನ್ನು ನೋಡಬಹುದು.

ಹರಪನಹಳ್ಳಿ ತಾಲೂಕು ಕಡಬಗೆರೆಯಲ್ಲಿ ದೊರೆತ ೧೦ನೆಯ ಶತಮಾನಕ್ಕೆ ಸೇರಿದ ಲಿಪಿಸಹಿತ ವೀರಗಲ್ಲಿನಲ್ಲಿ ಮಾಳಯ್ಯನು ಮಹಾಸಾಮಂತನಾದ ಬಿಜ್ಜನ ಪರ ಹೋರಾಡಿ ಮಡಿದ ವಿವರವನ್ನು ಉಲ್ಲೇಖಿಸಲಾಗಿದೆ.

'ನನ್ನಿಮಾರ್ತಂಡ ಕದಂಬವಂಶೋದ್ಭವಂ ಶ್ರೀಮತ್ ಕಣ್ಣವಾರ...ನಾಕಲೊಕ್ಕನ ಮಗನುಂಗ ...ನಟಿಂಬವಾಡಿಯಯ್ಯಪದೇವನ ಮಗನಪ್ಪಣ್ಣಿಗನ್ ಪರಿಬನ್ನು ಪಡುಗಲ್ಲ ಮುತ್ತಿದೊಡೆ

[ಕೋ]ಲಂಬು ಪಾಟಿದೊಡೆ ಮಣ್ಣಿನ

ನೊಟಿಂಬವಾಡಿಯಯ್ಯಪದೇವನ ಮಗನಣ್ಣಿಗಂ ಸ್ರಾವಣ ಸುದ್ಧ ಭಾದ್ರಪದ ಮಾಸದ ಬಹಳ

(?) ಪುಣ್ಣಿಮೆಯುಮಜ್ಗರವಾರದಂದು

ಕಾಲಾಳ್ಕಾದುತ್ತಿರೆ ಸುಜ್ಗಲಂಬು ಪಾಱಿದೊಡೆ ಮಾಣೆನೆನ್ದು ಬರ್ಕ್ಕಂಬಿ...ಳಿಲ್ದು ಬನ್ದು

ಪರಿಯ ಕಾದಿ ಗೆಲ್ದು ಸುರಗಿಱಿದು ಸ್ವರ್ಗ್ಗತ'[೨]

ಹರಪನಹಳ್ಳಿ ತಾಲೂಕಿನ ಬಾಗುಳಿ ಗ್ರಾಮದಲ್ಲಿನ ದೊರೆತ ವೀರಗಲ್ಲಿನಲ್ಲಿ ಮಹಾಬಲಿವಂಶದ ಏಚರಸನ ಮಗ ಗೂಳಿದೇವನು ಚೋಳರ ಕುದುರೆಯನ್ನು ಎದುರಿಸಿ ಸತ್ತಂತೆ ಉಲ್ಲೇಖಿಸಿದೆ.

"ಪೆಂಪೆಸೋ ನೀಗ್ಗುಂದ ಗ್ರಾಮಂ ಸೊಲಗಂಗನಚಕ್ರ ಅಯವೊನ್ದ

ಕೊಲವಿದಕೆ ಭ್ರಿತ್ಯ ಪಾರಾಯಣ ಆರನಂತಬಿರುದಕೊಣ್ಡ

ಪ್ರವೊತ ತಕ್ಕೋಜಂ ನೀತಿಸೋಂ ಗಂಗನಚಕ್ರಂ ಅಯ್ಯವೊನ್ತ

ಬಂಟರಭಾವಂ ನುದಿಸನ್ತೆಗಣ್ಡಂ ತೊಲಗಣ್ಡಂ ಛಲವಾದಿಗಣ್ಡಂ

ಪ್ರಜೆಮೆಚ್ಚಿಗಣ್ಡಂ ಕೆವಾರೆಸಿಂಘಂ ಅಣ್ಣನವದ್ರಿ

ಅಯ್ವದಿಂಬಱ ದೆಸೆದವಳಂ ಸಮಯ ಆಸನ್ನಾ

ಹದ್ವಿಱಟ ಮುರಾರಿ ಏಚರಸನ ಪುತ್ರಂ ಧಟಿಮು

ಟ್ಟೆಗಣ್ಡಂ ರಥದ ಪಾಳೆಯಲ್ಲಿ ಚೋಳವಾಳಿಯ ಕುದುರೆಯ

ಮೇಲಾಳ ಪೆಣದಿಱಿದು ಸುರಲೋಕಪ್ರಾಪ್ತನಾದ ಗೂಳಿದೇವ"[೩೩] ( ಈ ಶಾಸನದಲ್ಲಿ ಏಚರಸನನ್ನು ಕೊಂಡಾಡಿ ಅಂಥವನ ಮಗನಾದ ಗೂಳಿದೇವನು ಸತ್ತಾಗ ಆತನ ನೆನಪಿಗಾಗಿ ಈ ವೀರಗಲ್ಲನ್ನು ನಿಲ್ಲಿಸಿದಂತೆ ಹೇಳಲಾಗಿದೆ.

ಒಬ್ಬ ವ್ಯಕ್ತಿಯ ಸಾಧನೆಯನ್ನು ಉನ್ನತ ಪಟ್ಟಕ್ಕೇರಿಸಿ ಅದನ್ನು ಪೌರಾಣಿಕ ಅಂಶಗಳೊಂದಿಗೆ ಜನರ ಮನಸ್ಸನ್ನು ಸೆಳೆಯುವಲ್ಲಿ ವೀರಗಲ್ಲು ಪ್ರಮುಖವಾದವುಳು. ಆ ಕಲ್ಲುಗಳ ಮೇಲೆ ಮಡಿದ ವ್ಯಕ್ತಿಯ ಬಗೆಗೆ ನೇರವಾದ ಹೊಗಳಿಕೆ ಇಲ್ಲದಿದ್ದರೂ ಸಹಿತ ಅಲ್ಲಿ ಚಿತ್ರಿಸಲ್ಪಟ್ಟ ಶಿಲ್ಪಗಳಿಂದ ಈ ಅಂಶವನ್ನು ಅರ್ಥಮಾಡಿಕೊಳ್ಳಬಹುದು. ಮಡಿದ ವೀರನು ಸ್ವರ್ಗಕ್ಕೆ ಹೋಗುವುದು, ಅಲ್ಲಿ ಆತನಿಗೆ ಯೋಗಿಗೆ ಸಮನಾದ ಸ್ಥಾನಮಾನ ದೊರೆಯುವುದೆಂದರೆ ಸಾಮಾನ್ಯ ಮಾತಲ್ಲ. ಅದೆಷ್ಟೋ ವರ್ಷಗಳ ಕಾಲ ಶ್ರದ್ಧೆಯಿಂದ ತಪಸ್ಸು ಮಾಡಿ ಶಿವನನ್ನು ಒಲಿಸಿಕೊಂಡವರಿಗೆ ಸಮಾನವಾಗಿ ಧರ್ಮಯುಕ್ತವಾದ ಹೋರಾಟ ನಿಲ್ಲುತ್ತದೆ. ಧರ್ಮಯುಕ್ತವಾದ ಅಥವಾ ಲೋಕೋಪಕಾರವಾದ ಯಾವುದೇ ಒಂದು ಕೆಲಸ ಎಳ್ಳುಕಾಳಷ್ಟಿದ್ದರೂ ಸಾಗದಷ್ಟು ಪುಣ್ಯ ಲಭಿಸುತ್ತದೆ ಎಂಬ ಭಾವನೆಯನ್ನು ಇಂತಹ ವೀರಗಲ್ಲುಗಳ ಮೂಲಕ ಜನರಿಗೆ

ತಲುಪಿಸುವ ಕಾರ್ಯ ನಡೆದಿದೆ ಎನಿಸುತ್ತದೆ. ಸಣ್ಣಕಾರ್ಯವೊಂದು ಪುಣ್ಯ ಲಭಿಸಲಿಕ್ಕೆ ಕಾರಣವಾಗುತ್ತದೆ ಎನ್ನುವದಕ್ಕೆ ಶಾಸನವೊಂದರಲ್ಲಿ ಉಕ್ತವಾಗಿರುವ ವಾಯು ಪುರಾಣದ ಶ್ಲೋಕವನ್ನು ನೋಡಬಹುದು.

ಲಾವಕಶ್ಚ ವರಾಹಶ್ಚ ಮಹಿಷೀ ಕುಂಜರ ಸ್ತಥಾ
ಉಪದೇಶಾಚ ಕರ್ತಾಚ ಷಡ್ಯೆತೇ ಸ್ವರ್ಗಗಾಮಿನಃ॥

ಕೆಲ ಶಾಸನಗಳು ಪೌರಾಣಿಕ ವ್ಯಕ್ತಿಯು ಅನುಸರಿಸಿದ್ದ ಮೌಲ್ಯಗಳನ್ನು ತಮ್ಮ ಕಾಲದ ವ್ಯಕ್ತಿ ತನ್ನ ಜೀವನದಲ್ಲಿ ಅಳವಡಿಸಿಕೊಂಡಿದ್ದರಿಂದ ಅಂತಹವರನ್ನು ಪೌರಾಣಿಕ ವ್ಯಕ್ತಿಗಳೊಂದಿಗೆ ಹೋಲಿಸುವ ಪರಿಪಾಟ ಅನುಸರಿಸಿವೆ. ಇನ್ನೂ ಮುಂದುವರೆದು ಇಂತಹ ಶಾಸನಗಳು ವ್ಯಕ್ತಿಗಳ ನಡವಳಿಕೆಗಳನ್ನು ನೇರವಾಗಿ ಹೇಳುತ್ತಾ ಆ ವ್ಯಕ್ತಿಯ ಗುಣಗಳು ಯಾವ ಪೌರಾಣಿಕ ವ್ಯಕ್ತಿಯ ಗುಣಗಳಿಗೂ ಕಡಿಮೆಯೇನಲ್ಲ ಎಂಬುದನ್ನು ಒತ್ತಿ ಹೇಳುತ್ತವೆ. ಆ ಮೂಲಕ ಪುರಾಣ ಸಂಗತಿಯನ್ನು ವಾಸ್ತವದ ನೈಜ ಘಟನೆಯನ್ನಾಗಿ ಕಾಣುವಂತೆ ಮಾಡುತ್ತವೆ.

**೪.೩ ಸ್ಥಳ ಸಂಬಂಧಿ ಪೌರಾಣಿಕ ಅಂಶಗಳು :**

ಸ್ಥಳನಾಮಗಳು ಹೆಚ್ಚಾಗಿ ಅಲ್ಲಿನ ನೈಸರ್ಗಿಕತೆ ಮತ್ತು ಧಾರ್ಮಿಕತೆಯ ಆಧಾರದ ಮೇಲೆ ಹುಟ್ಟಿಕೊಂಡಿರುತ್ತವೆ. "ಒಂದು ಕ್ಷೇತ್ರದ ಮಹಾತ್ಮೆ ವ್ಯಕ್ತವಾಗುವುದು ಅಲ್ಲಿಯ ಅನನ್ಯ ಸದೃಶ್ಯವಾದ ಪರಿಸರದ ಪವಾಡ ಶಕ್ತಿಯಿಂದಲೇ ಎಂದು ಇಂದಿಗೂ ನಮ್ಮಲ್ಲಿ ನಂಬಿಕೆಯಿದೆ. ವಾಸ್ತವ ಪ್ರಪಂಚದ ನಡವಳಿಕೆಗಿಂತಲೂ ಅಲ್ಲಿ ವಿಭಿನ್ನವಾದ ನಡವಳಿಕೆಯಿರುತ್ತದೆ. ಅದೇ ಸ್ಥಳ ಮಹಾತ್ಮೆ. ಎಂಥ ಕ್ರೂರನೂ ಅಲ್ಲಿ ದಯಾರ್ದ್ರ ಹೃದಯಿ. ಎಂಥ ಪಾಪಿಯೂ ಅಲ್ಲಿ ಪುಣ್ಯಾತ್ಮನೂ ಆಗುತ್ತಾನೆ ಎಂಬುದು ನಂಬಿಕೆ."[೩೪] ಇಂತಹ ನಂಬಿಕೆಯಿಂದಲೇ ಅನೇಕ ಬಗೆಯ ಸ್ಥಳ ಸಂಬಂಧಿ ಪೌರಾಣಿಕ ವಿಷಯಗಳು ಹುಟ್ಟಿಕೊಂಡಿವೆ. ಅಂದರೆ ಸ್ಥಳಪುರಾಣಗಳು ಒಂದು ಪ್ರದೇಶದ ಧಾರ್ಮಿಕ ಮಹತ್ವವನ್ನು ಹಾಗೂ ಆ ಪ್ರದೇಶದೊಂದಿಗೆ ದೇವತೆಗಳು ಹೊಂದಿರುವ ಸಂಬಂಧವನ್ನು ತಿಳಿಸುತ್ತವೆ.

'ಸ್ಥಳ ನಾಮಗಳಂತಹ ಸಾಮಾನ್ಯ ವಿಷಯದಲ್ಲಿ ಅಪೂರ್ವವಾದ ಸಂಗತಿಗಳು ಹುದುಗಿಕೊಂಡಿವೆ. ಅದೆಷ್ಟು ಅಜ್ಞಾತ ವಿಷಯಗಳು ಬೆಳಕಿಗೆ ಬರಲಿವೆ. ಸೂಕ್ಷ್ಮವಾಗಿ ವಿಮರ್ಶಿಸಿದಷ್ಟೂ ಹಿಂದೆ ಆಗಿಹೋದ ಅನೇಕ ಪ್ರಾಚೀನ ಐತಿಹಾಸಿಕ ಘಟನೆಗಳಿಗೆ ಶಾಸನಾದಿಗಳಲ್ಲಿ ದೊರೆಯದ ಆಧಾರಗಳು ಎಡೆಗಳ ಹೆಸರಿನಲ್ಲಿ ಸಿಕ್ಕುತ್ತವೆ. ಇತಿಹಾಸವು ಯಾರ ಹೆಸರನ್ನು ಕಡೆಗಣಿಸಿ ತೀರಾ ಸಾಮಾನ್ಯರೆಂದು ಅವರನ್ನು ಉಲ್ಲೇಖಿಸುವುದಿಲ್ಲವೋ ಅಂತಹ ಅನೇಕಾನೇಕ ಅರಸರು, ನಾಯಕರು, ಗೌಡರು, ಗೌಡತಿಯರು, ಪ್ರಾದೇಶಿಕ ವೀರರು,

ಕುರುಬರು, ಗೊಲ್ಲರು ಮೊದಲಾದವರು ತಮ್ಮ ಹೆಸರಿನ ಹಟ್ಟಿಯನ್ನು ಕಟ್ಟಿಕೊಂಡು ತಮ್ಮ ಮಟ್ಟಿಗೆ ಅಜರಾಮರರಾಗಿದ್ದಾರೆ. ಪುರಾಣಗಳಿಗೆ ಪೋಷಕವಾದ ಅನೇಕ ಯಾತ್ರಾಸ್ಥಳಗಳ ವಿವರಗಳು ಧರ್ಮಸಂಸ್ಕೃತಿಗಳ ಮಹಾಪ್ರವಾಹದ ಕುರುಹುಗಳನ್ನು ಎಡೆಗಳಿಂದ ತಿಳಿದುಕೊಳ್ಳಬಹುದು'.[೨೫]

ಶಾಸನಗಳಲ್ಲಿ ಊರು ಮತ್ತು ಸುತ್ತಮುತ್ತಲಿನ ಪ್ರದೇಶದ ವರ್ಣನೆ ಸಾಮಾನ್ಯವಾಗಿರುತ್ತದೆ. ಒಂದು ಸ್ಥಳದ ಹೆಸರನ್ನು ಪರಿಶೀಲಿಸಿದರೆ ಸುತ್ತಮುತ್ತಲಿನ ನಿಸರ್ಗ, ಸೌಂದರ್ಯ ಪ್ರಮುಖ ದೇವತೆಗಳ ವರ್ಣನೆಯನ್ನು ಪೌರಾಣಿಕ ಹಿನ್ನೆಲೆಯಲ್ಲಿ ಆ ಸ್ಥಳಕ್ಕೆ ವರ್ಣಿಸಿರುವುದನ್ನು ಕಾಣುತ್ತೇವೆ. ಇವೇ ಕಾರಣಗಳು ಮುಂದೆ ಸ್ಥಳಪುರಾಣವಾಗಿ ಮಾರ್ಪಾಡಾಗುತ್ತವೆ. ಈ ಬಗೆಯ ಸ್ಥಳಪುರಾಣಗಳು ಹುಟ್ಟಿಕೊಳ್ಳಲು ಹಲವಾರು ಕಾರಣಗಳಿರಬಹುದು. ಅವುಗಳಲ್ಲಿ ಮುಖ್ಯವಾದವುಗಳೆಂದರೆ ಯಾವುದೋ ಒಂದು ಉನ್ನತವರ್ಗ ಸಮಾಜದಲ್ಲಿ ತನ್ನ ಸ್ಥಾನವನ್ನು ಭದ್ರಪಡಿಸಿಕೊಳ್ಳಲೋ ಅಥವಾ ಸಮಾಜದಲ್ಲಿರುವಂತಹ ಕೆಲವೊಂದು ದುರ್ಬಲವರ್ಗದವರನ್ನು ತಮ್ಮ ಒಂದು ಕಪಿಮುಷ್ಟಿಯಲ್ಲಿ ಹಿಡಿದಿಟ್ಟುಕೊಳ್ಳುವ ಪ್ರಯತ್ನದ ಸಲುವಾಗಿ ಇತರ ಸ್ಥಳಪುರಾಣಗಳ ಹುಟ್ಟಿಗೆ ಕಾರಣವಾಗಿರಬಹುದು.

ಸ್ಥಳಪುರಾಣಲ್ಲಿನ ಕಥೆಗಳು ವಾಸ್ತವವಾಗಿ ನಿಜವಿರಬಹುದು, ಇಲ್ಲದೆಯೂ ಇರಬಹುದು. ಅದು ಬಹು ಹಿಂದೆ ನಡೆದ ಘಟನೆಯ ಸುತ್ತ ಕಲ್ಪಿತ ಅಂಶಗಳನ್ನು ಕಲೆಹಾಕಿಕೊಂಡು ಬೆಳೆದು ಬಂದಿರಲೂಬಹುದು. ಅಂದರೆ ಒಂದು ಸ್ಥಳದ ಹುಟ್ಟಿನ ಹಿಂದಿರುವ ಕಾರಣಗಳನ್ನು ಇದ್ದ ಹಾಗೆಯೇ ನಿರೂಪಿಸುವುದು ಐತಿಹ್ಯದ ರೂಪದಲ್ಲಿರುತ್ತದೆ. ಈ ಐತಿಹ್ಯಕ್ಕೆ ಮಹಿಮೆಯನ್ನು ಅಥವಾ ಪವಾಡ ರೀತಿಯ ಅಂಶವನ್ನು ಸೇರಿಸಿದಾಗ ಅದು ಸ್ಥಳ ಪುರಾಣವಾಗುತ್ತದೆ. ಒಟ್ಟಿನಲ್ಲಿ ಯಾವುದೇ ಒಂದು ಸ್ಥಳದ ಬಗ್ಗೆ ಹುಟ್ಟಿಕೊಂಡಿರುವ ದೈವಿ ಕಲ್ಪನೆಯೇ ಸ್ಥಳಪುರಾಣ ಎಂದು ಹೇಳಬಹುದು.

ಹಂಪಿಯ ಶಾಸನವೊಂದರಲ್ಲಿ ಸ್ಥಳದ ಮಹಿಮೆಯನ್ನು ಕುರಿತು ಈ ರೀತಿ ಹೇಳಲಾಗಿದೆ:
"ಪಾತಾಳಗಂಗೆ ಗಲುರಿಯ ಗಂಡ ಸಿರಿಸೆಳಲಿಂಗ ರಾತ್ರಿಯಲ್ಲಿ

ಗಂಟೆಯ ಬೇಂಟೆನಾಯಕ ಬಂದು ನಳಲಹುಣಿಸೆಯ ಗಿರಿಯ ಪಡೆಯ ಕೆ
ಳಗರೆಯಲ್ಲಿ . ಡದು ಮೂಡಿ ಗುಡ್ಡದ ಮಾಇವೆ ಪಯಸುತ ಯೋಗದಂಡ
ದನವ ಗಂಟೆಯ ಜಂಗಮ ಬೈಇರವಮೂತ್ತಿ(ರ್ತಿ) ಅಯ್ಯನ ಸಪನಕ್ಕೆ
ಹೋಗಿ ಹೇಳಿಡದೆ ಕ್ಷೇತ್ರವ ವಿರಚಿಸಿದ ಹೂವಿಗನು ಶ್ರೀ ಶ್ರೀ ಶ್ರೀ॥"[೨೬]

ನೆಳಲಹುಣಸೆಯ ಗಿರಿಯ ಗವಿಯಲ್ಲಿನ ಕಲ್ಲಿನಲ್ಲಿ ಚೆಂಚರ ಮಲ್ಲಿಕಾರ್ಜುನನು

ಉದ್ಭವಮೂರ್ತಿಯಾಗಿ ಕಾಣಿಸಿಕೊಂಡನಂತೆ. ಪಾತಾಳಗಂಗೆ ಮತ್ತು ಗೌರಿಯ ಗಂಡನಾದ ಮಲ್ಲಿಕಾರ್ಜುನನು ಅದೇ ಗುಹೆಯಲ್ಲಿನ ಕಲ್ಲಿನಲ್ಲಿ ಪ್ರತ್ಯಕ್ಷನಾದ. ಈತನು ಭೈರವಮೂರ್ತಿ ಅಯ್ಯನ ಕನಸಿನಲ್ಲಿ ಬಂದು ಘಟನೆಯನ್ನು ವಿವರಿಸಿದನು. ಇದನ್ನು ಕೇಳಿದ ಹೂವಿಗನು ಈ ಸ್ಥಳವನ್ನು ಪುಣ್ಯಕ್ಷೇತ್ರವನ್ನಾಗಿ ಮಾಡಿದನೆಂದು ತಿಳಿಸಿದೆ. ಅಂದರೆ ಮಲ್ಲಿಕಾರ್ಜುನ ದೇವರು ಆ ಸ್ಥಳದಲ್ಲಿ ಉದ್ಭವಮೂರ್ತಿಯಾಗಿದೆ ಎನ್ನುವ ಕಾರಣದಿಂದಾಗಿಯೇ ಈ ಸ್ಥಾನವು ಪುಣ್ಯಕ್ಷೇತ್ರವಾಗಿ ರೂಪುಗೊಂಡಿದೆ.

ವಿಪ್ರದಲ್ಲಿ ದೊರೆತ ಶಾಸನದಲ್ಲಿ ಈ ಸ್ಥಳವನ್ನು ಜಗತ್ತಿನ ಪಾಪನಾಶಿನಿ ಎಂದು ಹೇಳಲಾಗಿದೆ.

"ಇದಸೇವ್ಯಂ ತುಂಗಭದ್ರಾ ತಟದ ಬಡಗ ಕಿಃಕಿನ್ದಮಿ ಪರ್ವ
ನಾಮಿದರ ವ್ಯತಿಗಳೊಳ್ ಮಂತ್ರಮನೊರೆದು ಸಮಾಳೋಚನಂಗೆಯ್ವ
ಮೆನ್ವಾಸ್ಪದದಿಂ ತತ್ರಿಂಶ ದೇವಾರ್ಣ್ಣಾ ಆಗಲಿದುವೀ ಪುಣ್ಯಾತ್ಯತೀರ್ಥಂ ಜಗಕಿ
ನ್ನಿದು ವಂದ್ಯಂ ಪಾಪನಾಶಿಂ ಶುಭಕರಮೆನಿಕುಂ ಸ್ಥಾನಮತ್ಯಂನ್ತದಿಂದ॥"[೩೭]

ಈ ಸ್ಥಳವು ಮೂವತ್ತು ದೇವತೆಗಳ ವಾಸ ಸ್ಥಾನವಾಗಿದ್ದು ಮೂವತ್ತು ತೀರ್ಥಗಳನ್ನು ಹೊಂದಿದ್ದರಿಂದಾಗಿ ಜಗತ್ತಿನ ಪಾಪವನ್ನು ನಾಶ ಮಾಡುವಂತಹ ಸ್ಥಳವಾಗಿತ್ತೆಂದು ಹೇಳಲಾಗಿದೆ. ದೇವತೆಗಳ ವಾಸಸ್ಥಾನವಾಗಿದ್ದರಿಂದ ಅದೊಂದು ಪವಿತ್ರ ಸ್ಥಳವೆಂದು ಹೇಳಿ ಆ ಸ್ಥಳದ ಮಹಿಮೆಯನ್ನು ಈ ಶಾಸನ ಸಾರುತ್ತದೆ. ಅಂದರೆ ಆ ಪ್ರದೇಶದ ಒಟ್ಟು ವಾತಾವರಣವನ್ನೇ ಪೌರಾಣಿಕ ಕಾಲ್ಪನಿಕ ಲೋಕಕ್ಕೆ ಕೊಂಡೊಯ್ಯುವುದರ ಮೂಲಕ ಆ ಸ್ಥಳದ ಧಾರ್ಮಿಕ ಮಹತ್ವವನ್ನು ಎತ್ತಿತೋರಿಸುವ ಪ್ರಯತ್ನವಾಗಿ ಇಂತಹ ಶಾಸನಗಳು ಕಂಡುಬರುತ್ತವೆ.

ಕೆಲವೊಂದು ಸಂದರ್ಭದಲ್ಲಿ ಒಬ್ಬ ಪುರಾಣ ವ್ಯಕ್ತಿಯ ಮಹಿಮೆಯಿಂದ ಆ ಸ್ಥಳಕ್ಕೆ ತನ್ನದೇ ಆದ ಅನನ್ಯತೆ ಉಂಟಾಗುತ್ತದೆ. ಇದಕ್ಕೆ ನಿದರ್ಶನವಾಗಿ ಕನಕಗಿರಿಯಲ್ಲಿ ದೊರೆತ ಶಾಸನವನ್ನು ನೋಡಬಹುದು. ಇಲ್ಲಿ ನೆಲೆಸಿದ್ದಾನೆ ಎಂದು ಹೇಳಲಾಗುವ ಲಕ್ಷ್ಮೀಪತಿಯು ಸೃಷ್ಠಿ, ಸ್ಥಿತಿ, ಲಯದ ಮೂರು ಗುಣಗಳನ್ನು ಹೊಂದಿದ್ದಾನೆಂದು ಶಾಸನದಲ್ಲಿ ಉಲ್ಲೇಖಿಸಲಾಗಿದೆ. ಈತನು ಬ್ರಹ್ಮ, ವಿಷ್ಣು ಮಹೇಶ್ವರರ ನಂತರ ರೂಪ ಎಂದು ಪರಿಭಾವಿಸಿ, ಈತನನ್ನು ಸೃಷ್ಠಿಯ ಕರ್ತೃವೆಂದು ಉಲ್ಲೇಖಿಸಲಾಗಿದೆ. ಈ ಹಿನ್ನೆಲೆಯಲ್ಲಿ ಈ ಸ್ಥಳಕ್ಕೆ ಪೌರಾಣಿಕ ಮಹತ್ವ ಬಂದಿರುವುದು ಗೋಚರಿಸುತ್ತದೆ. ಈತನನ್ನು ದೃಢವಾಗಿ ನಂಬಿ ಭಕ್ತಿಯಿಂದ ಸ್ಮರಿಸಿದವರಿಗೆ ಸದ್ಗತಿಯುಂಟೆಂದು, ಈತನನ್ನು ವಿರೋಧಿಸಿದವರು ನರಕಕ್ಕೆ ಹೋಗುತ್ತಾರೆಂದು ಒತ್ತಿ ಹೇಳಲಾಗಿದೆ.

ತಮ್ಮ ನಾಡು, ನಗರ ಅಥವಾ ಗ್ರಾಮಗಳನ್ನು ಪೌರಾಣಿಕ ಹಿನ್ನೆಲೆಯಲ್ಲಿಯೇ ವ್ಯಾಖ್ಯಾನಿಸುವ ಪ್ರವೃತ್ತಿ ಅನೇಕ ಶಾಸನಗಳಲ್ಲಿ ಕಂಡುಬರುತ್ತದೆ. ಇದಕ್ಕೆ ಸ್ಥಳೀಯ ಐತಿಹ್ಯಗಳ ಸಹಾಯವೂ

ಇರುತ್ತದೆ. ಇಂತಹ ಒಂದು ಸ್ಥಳ ಉಚ್ಚಂಗಿದುರ್ಗ. ಉಚ್ಚಂಗಿದುರ್ಗ ಇತಿಹಾಸ ಹಾಗೂ ಪುರಾಣ ಪ್ರಸಿದ್ಧ ಸ್ಥಳ. ಧಾರ್ಮಿಕ ಕ್ಷೇತ್ರವಾದ ಉಚ್ಚಂಗಿದುರ್ಗಕ್ಕೆ ಉಚ್ಚೈ ಶ್ರುಂಗೆದುರ್ಗ ಎಂದು ಕೂಡ ಕರೆಯಲಾಗುತ್ತದೆ. ಉಚ್ಚಂಗಿ ಪಾಂಡ್ಯರಿಂದ ಉಚ್ಚಂಗೀಪುರ, ಉಚ್ಚಂಗಿಬೆಟ್ಟ ಎನ್ನುವ ಹೆಸರು ಬಂದಿವೆ. ಇಲ್ಲಿನ ಬೆಟ್ಟದಲ್ಲಿ ಉಚ್ಚಂಗೆಮ್ಮದೇವಿ ನೆಲೆಸಿರುವುದರಿಂದ ಉಚ್ಚಂಗಿದುರ್ಗ ಎಂಬ ಹೆಸರು ಬಂದಂತಿದೆ. ಈ ಕುರಿತು ಕಥೆಯೊಂದು ಹೀಗಿದೆ: 'ದೇವಿ ಯಲ್ಲಮ್ಮ ಬೆಟ್ಟದಲ್ಲಿ ನೆಲಸಿದ್ದಳು. ಕಾಡುಸಿದ್ಧರು ತಮ್ಮ ಸುಖಸಂತೋಷಕ್ಕೆಂದು ಗಾಂಜ–ಬಂದಿ ಮುಂತಾದ ನಿಷೇಪಾನಾದಿ ಸೊಪ್ಪನ್ನು ಅರೆದು ಸೇವಿಸಿದ್ದರು. ಒಂದು ದಿನ ಗಾಂಜದಂತಹ ನಿಷೆಪಾನ ಸೇವಿಸಿ ದೇವಿ ಯಲ್ಲಮ್ಮನನ್ನು ಮೋಹಿಸಲು ಪ್ರಯತ್ನಿಸಿದರಂತೆ. ಇದನ್ನು ಅರಿತ ದೇವಿಯು ನಿಶೆಯಲ್ಲಿದ್ದ ಕಾಡುಸಿದ್ಧರನ್ನು ಆನೆಹೊಂಡಕ್ಕೆ ಬೀಳುವಂತೆ ಉಚ್ಚೆ ಒಯ್ದು ಅವರನ್ನು ಸರ್ವನಾಶ ಮಾಡಿದಳಂತೆ. ಆದ್ದರಿಂದ ದೇವಿಗೆ ಉಚ್ಚಂಗೆಮ್ಮ ಉಚ್ಚಂಗಿ ಎಂದು ಆಕೆ ನೆಲೆಸಿರುವ ಗುಡ್ಡಕ್ಕೆ ಉಚ್ಚಂಗಿಗುಡ್ಡ, ಆ ಗುಡ್ಡದ ಮೇಲೆ ದುರ್ಗ ಕಟ್ಟಿದ್ದರಿಂದ ಉಚ್ಚಂಗಿದುರ್ಗ ಆಯಿತು' ಎಂದು ಶಾಸನವೊಂದು ತಿಳಿಸುತ್ತದೆ. ಇದರಿಂದ ಉಚ್ಚಂಗಿ ದುರ್ಗಕ್ಕೆ ಪುರಾತನ ಕಾಲದ ಚರಿತ್ರೆಯೇ ಇದೆ ಎಂಬುದಾಗಿ ತಿಳಿದುಬರುತ್ತದೆ.  ಉಚ್ಚಂಗಿ ದುರ್ಗಕ್ಕೆ ಪುರಾತನ ಕಾಲದ ಚರಿತ್ರೆಯೇ ಇದೆ ಎಂದು ಶಾಸನವೊಂದು ತಿಳಿಸುತ್ತದೆ.

> "ಕದಂಬಾವಾಡಿನಾಡ ಮಧ್ಯದೊಳ್ಮೆರುವಿಪ್ಪಂತಿಟ್ಟುದುಚ್ಚಂಗಿಯ ಪರ್ವ್ವತಂ ಅದಕ್ಕೆ
> ನಾಲ್ಕುನಾಮೆವದೆಂ
> ತೆಂದೊಡೆ ಕೃತಯುಗದೊಳು ಮೇ[ಘನಾ]ದನೆಂಬ ರಾಕ್ಷಸನಿವಾಸಮಪ್ಪುದಱಿಂ ಮೇಘನಾ
> ದವೆಂಬುದು ತ್ರೇತೆಯೊಳ್ ಹಿರಣ್ಯಕ ನಿವಾಸಮಾತನ ನಾರಾಯಣಂ ವಧೆಗೆಯ್ದಂದಿನೊಸ
> ಗೆಯೊಳ್ ಸ್ವರ್ಣ್ನವ್ರಿಷ್ಟಿ ಕಱೆದುದಱಿಂ ವೀರಕನಕಗಿರಿಯೆಂಬುದು ದ್ವಾಪಾರದೊಳುತ್ತಂಗಮ
> ಹರಿಷಿ ಆಶ್ರಮಮಪ್ಪುಱೆದಂ ಉತ್ತುಂಗಪರ್ವ್ವತಮೆಂಬುದು ಕಲಿಯುಗದೊಳ್
> ಉಚ್ಚಂಗಿಯ
> ಬ್ಬೆಯೆಂಬಳು ಮೊದಲಾಗಿ ಮೂವರು ಬ್ರಾಹ್ಮಣಕನ್ನಿಕೆಯರು ತಪಂಗೆಯ್ದೀಶ್ವರ ವರ
> ಪ್ರಸಾದದಿಂ ದೇವತ್ವಮಂ ಪಡೆದರದಱಿಂದುಚ್ಚುಂಗಿಯಾ ಪರ್ವ್ವತಮೆಂಬುದು".[೩೮]

ಈ ಉಚ್ಚಂಗಿದುರ್ಗವನ್ನು ಕೃತಯುಗದಲ್ಲಿ ಮೇಘನಾಥನೆಂಬ ರಾಕ್ಷಸನು ಆಳುತ್ತಿದ್ದನಂತೆ ಆದ್ದರಿಂದ ಆಗ ಈ ಪರ್ವತವನ್ನು ಮೇಗನಾಥ ಪರ್ವತ ಎಂದು ಕರೆಯಲಾಗಿದೆ. ತ್ರೇತಾಯುಗದಲ್ಲಿ ಶ್ರೀಮನ್ ನಾರಾಯಣನು ಹಿರಣ್ಯ ಕಷ್ಯಪನನ್ನು ಸಂಹರಿಸಿದಾಗ ಈ ಸ್ಥಳದಲ್ಲಿಯೂ ಸುವರ್ಣವೃಷ್ಟಿಯಾಯಿತಂತೆ ಆದ್ದರಿಂದ ಇದನ್ನು ಕನಕಗಿರಿ ಎಂದು ಕರೆಯಲಾಗಿದೆ. ದ್ವಾಪರಯುಗದಲ್ಲಿ ಉತ್ತುಂಗ ಋಷಿಯು ಈ ದುರ್ಗದಲ್ಲಿ ವಾಸವಾಗಿದ್ದನು ಎನ್ನುವ ಕಾರಣಕ್ಕಾಗಿ

ಉಚ್ಚಂಗಿದುರ್ಗ ಎಂದು ಕರೆದಿದೆ. ಕಲಿಯುಗದಲ್ಲಿ ಉಚ್ಚಂಗಿಯಬ್ಬೆ ಎಂಬುವರು ಮೊದಲಾಗಿ ಮೂರು ಕನ್ನಿಕೆಯರು ಈ ಬೆಟ್ಟದಲ್ಲಿ ತಪಸ್ಸು ಮಾಡಿ ದೈವತ್ವ ಪಡೆದರು. ಇದರಿಂದಾಗಿ ಉಚ್ಚಂತಿಪರ್ವತ ಎನ್ನುವ ಹೆಸರು ಬಂದಿದೆ ಎಂದು ಹೇಳಲಾಗಿದೆ. ಒಟ್ಟಿನಲ್ಲಿ ಈ ಸ್ಥಳವು ಮಾನವನ ಪ್ರಾಗೈತಿಹಾಸಿಕ ಕಾಲದಿಂದಲೂ ಒಂದಿಲ್ಲೊಂದು ಕಾರಣದಿಂದ ಸುದ್ದಿಯಲ್ಲಿತ್ತೆಂಬುದನ್ನು ಪೌರಾಣಿಕ ವಿಷಯಗಳ ಸಮೀಕರಣದೊಂದಿಗೆ ಹೇಳಿರುವುದು ಕಂಡುಬರುತ್ತದೆ.

ಹಂಪೆಯಲ್ಲಿನ 'ಮನ್ಮುಖತೀರ್ಥ'ದ ಬಗ್ಗೆ ಶಾಸನ[೩೯]ವೊಂದರಲ್ಲಿ ಉಲ್ಲೇಖವಿದೆ. ಕೇವಲ ಈ ಹೆಸರೊಂದನ್ನೇ ಆ ಶಾಸನದಲ್ಲಿ ಉಲ್ಲೇಖಿಸಿದ್ದು, ಅದರ ಪೌರಾಣಿಕ ಮಹತ್ವದ ಕುರಿತು ಅಲ್ಲಿ ಹೇಳಿಲ್ಲ. ಆದಾಗ್ಯೂ ಈ ಸ್ಥಳನಾಮದ ಕುರಿತ ಚರ್ಚೆ ಗಮನ ಸೆಳೆಯುತ್ತದೆ. ಏಕೆಂದರೆ ರೂಢಿಯಲ್ಲಿ ಈ ಸ್ಥಳಕ್ಕೆ 'ಮನ್ಮುಖತೀರ್ಥ' ಎಂದು ಕರೆಯದೇ, 'ಮನ್ಮಥತೀರ್ಥ' ಎಂದು ಕರೆಯುತ್ತಿದ್ದರು. ಹರಿಹರನ 'ಗಿರಿಜಾ ಕಲ್ಯಾಣ'ದಲ್ಲಿಯೂ ಈ ಸ್ಥಳಕ್ಕೆ ಮನ್ಮಥತೀರ್ಥ ಎಂದೇ ಕರೆಯಲಾಗಿದೆ. ಈ ಕೃತಿಯ ಪ್ರಕಾರ ಈ ಸ್ಥಳದಲ್ಲಿ ಮನ್ಮಥ ದಹನವು ನಡೆದುದರಿಂದ ಈ ಹೆಸರು ಬಂದಿದೆ ಎನ್ನಲಾಗಿದೆ. ಆದರೆ ಶಾಸನ ಹಾಗೂ ಈ ಸ್ಥಳದ ಕುರಿತು ಇರುವ ಮೌಖಿಕ ಪರಂಪರೆಗಳು ಈ ಸ್ಥಳದ ಹೆಸರು ಮನ್ಮುಖ ತೀರ್ಥ ಎಂದೇ ಹೇಳುತ್ತವೆ.

ಹಂಪಿಯನ್ನು ಪಂಪಾಕ್ಷೇತ್ರ, ಪಂಪಾತೀರ್ಥ, ಪಂಪಾಪುರ, ಪಂಪಾಪಟ್ಟಣ ಎಂದು ಮುಂತಾದ ಹೆಸರುಗಳಿಂದ ಕರೆದಿರುವದು ಶಾಸನ, ಮೌಖಿಕ ಪರಂಪರೆ ಹಾಗೂ ಪುರಾಣಗಳಿಂದ ತಿಳಿದು ಬರುತ್ತದೆ. ಕುರುಗೋಡಿನ ಸಿಂದು ವಂಶದ ಅರಸ ಇಮ್ಮಡಿ ರಾಚಮಲ್ಲನ ಮಗನಾದ ಕಲಿದೇವನ ಸಾಮಂತ ಅರಸನಾದ ಮೈದುನ ಚೌಡನೆಂಬುವವನು ವಿರೂಪಾಕ್ಷ ಮತ್ತು ಪಂಪಾಬಿಕೆಯ ನೈವೇದ್ಯಕ್ಕಾಗಿ ದಾನ ನೀಡಿದ್ದನ್ನು ಕ್ರಿ.ಶ.೧೧೯೯ರ ವಿರೂಪಾಕ್ಷ ದೇವಾಲಯದ ಆವರಣದ ಉತ್ತರಕ್ಕಿರುವ ದುರ್ಗಾ ದೇವಾಲಯದಲ್ಲಿರುವ ಶಾಸನ[೪೦]ದಲ್ಲಿ ಉಲ್ಲೇಖಿಸಿದೆ. ಈ ಶಾಸನದಲ್ಲಿ ಈ ಸ್ಥಳವನ್ನು ಪಂಪಾತೀರ್ಥವೆಂದು ದಾಖಲಿಸಲಾಗಿದೆ. ಕ್ರಿ.ಶ.೧೩೩೬ರ ನಂತರ ಇದರ ಸಮೀಪದಲ್ಲಿ ವಿಜಯನಗರ ಪಟ್ಟಣ ನಿರ್ಮಾಣವಾದ ಮೇಲೆ ಈ ಪಂಪಾಕ್ಷೇತ್ರ ಎರಡು ಭಾಗಗಳಾಗಿ ವಿಂಗಡಿತವಾಯಿತು. ೧೫೬೫ರಲ್ಲಿ ರಕ್ಕಸ ತಂಗಡಗಿ ಯುದ್ಧದಲ್ಲಿ ಆದಿಲ್‌ಶಾಹಿಗಳಿಂದ ಸೋಲುಂಡ ವಿಜಯನಗರದ ಅರಸರು ಈ ಸ್ಥಳವನ್ನು ಬಿಟ್ಟು ಉಳಿದುಳಿದ ಸಂಪತ್ತನ್ನು ತೆಗೆದುಕೊಂಡು ಪೆನುಗೊಂಡಕ್ಕೆ ಹೊರಟು ಹೋದರು. ಮುಸ್ಲಿಮರ ದಾಳಿಗೊಳಗಾಗಿ ಈ ಸ್ಥಳ ನಾಶವಾದ ಮೇಲೆ ಜನವಸತಿ ಇಲ್ಲದ ಈ ಪ್ರದೇಶದಲ್ಲಿನ ಅನೇಕ ಸ್ಥಳಗಳ ವಿಷಯ ಜನರ ನೆನಪಿನಲ್ಲಿ ಉಳಿದಿಲ್ಲ. ಹೀಗಾಗಿ ಇದು ಊಹಾತ್ಮಕ ಕಥೆಗಳಿಂದ ತುಂಬಿಹೋಗಿರುವುದರಿಂದ ಪಂಪಾತೀರ್ಥ, ಪಂಪಾಸರೋವರ, ಪಂಪಾಕ್ಷೇತ್ರವೆಂದರೆ ಈಗಿನ ವಿರೂಪಾಕ್ಷ ದೇವಾಲಯದ ಸುತ್ತಲ ಪ್ರದೇಶಗಳಾಗಿವೆ.

"ಪಂಪಾಮಹಾತ್ಮೆ" ಎನ್ನುವ ೧೬ನೆಯ ಶತಮಾನದ ಕೃತಿಯಲ್ಲಿ ಪಂಪಾಸರೋವರದ ಉಲ್ಲೇಖವಿದೆ. ಕುಮಾರವ್ಯಾಸ ಭಾರತದ ಸಭಾಪರ್ವದಲ್ಲಿ ತುಂಗಭದ್ರೆಯ ದಕ್ಷಿಣ ದಡದ ವಿರೂಪಾಕ್ಷ ಸೀಮೆಯಲ್ಲಿ ಬೀಡುಬಿಟ್ಟಿದ್ದನೆಂಬ ಉಲ್ಲೇಖ ಬರುತ್ತದೆ. ವಾಲ್ಮೀಕಿ ರಾಮಾಯಣ ಪಂಪಾಪುಷ್ಕರಣಿಯನ್ನು ಉಲ್ಲೇಖಿಸುತ್ತದೆ. ಬಾದಾಮಿ ಚಾಲುಕ್ಯರ ಕ್ರಿ.ಶ.೬೯೧ರ ಶಾಸನದಲ್ಲಿ, ಕ್ರಿ.ಶ.೧೦೧೮ರ ನೊಳಂಬ ಉದಯಾದಿತ್ಯನ ಬಾಗಳಿ ಶಾಸನದಲ್ಲಿ ಪಂಪಾತೀರ್ಥದ ಉಲ್ಲೇಖಗಳಿವೆ. ಕ್ರಿ.ಶ.೧೦೫೩ರ ಶಾಸನದಲ್ಲಿ ಪಂಪೆಯತೀರ್ಥದ ಉಲ್ಲೇಖ ಬಂದಿದೆ. ಕ್ರಿ.ಶ.೧೯೯೯ರ ಶಾಸನ ಈ ಪ್ರದೇಶವನ್ನು 'ವಿರೂಪಾಕ್ಷ ಸೀಮೆ'ಯೆಂದು ಕರೆದಿದೆ. ಕ್ರಿ.ಶ.೧೩೭೮ರ ಎರಡು ವೈಷ್ಣವ ಶಾಸನಗಳಲ್ಲಿ 'ಪಂಪಾತೀರ ನಿಲಯ' ಎಂಬ ಉಲ್ಲೇಖವಿದೆ."[೧]

ಈ ಮೇಲೆ ಉಲ್ಲೇಖಿಸಿದ ಶಾಸನ ಹಾಗೂ ಇನ್ನು ಕೆಲವು ಶಾಸನಗಳಲ್ಲಿ ಪಂಪಾತೀರ್ಥವೆಂದು ಕರೆದಿರುವುದು ಪಂಪಾಕ್ಷೇತ್ರವನ್ನು. ಕೆಲವೊಮ್ಮೆ ಸರೋವರವೆಂದೂ, ಪಂಪಾಪುರವೆಂದೂ, ಹಂಪಾತೀರ್ಥವೆಂದೂ ಕರೆದಿರುವುದುಂಟು. ತೀರ್ಥವೆಂದಿರುವ ಸ್ಥಳವು ತುಂಗಭದ್ರಾನದಿಯ ಬಲಗಡೆ ಭಾಗ. ಐತಿಹಾಸಿಕ ನೆಲೆಗಳಿರುವ ಪ್ರದೇಶ ಇದೇ ಭಾಗವಾಗಿದೆ. ಹೀಗಾಗಿ ಪಂಪಾಕ್ಷೇತ್ರವು ವಿಜಯನಗರ ಸಾಮ್ರಾಜ್ಯವು ಉದಯಿಸುವುದಕ್ಕೆ ಪೂರ್ವದಲ್ಲಿಯೇ ಪವಿತ್ರವಾದ ಪುಣ್ಯಕ್ಷೇತ್ರವಾಗಿತ್ತು ಎನ್ನುವದಕ್ಕೆ ಈ ಶಾಸನ ನೀಡುವ ವಿವರಗಳು ಸಾಕ್ಷಿಯಾಗಿವೆ. ಹಾಗೆಯೇ ಈ ಪ್ರದೇಶದಲ್ಲಿರುವ ತುಂಗಭದ್ರಾ ನದಿಯು ಉತ್ತರ ಮುಖಿಯಾಗಿ ಹರಿಯುತ್ತಾ ಇಲ್ಲಿ ತೀರ್ಥವನ್ನು ಸೃಷ್ಟಿಸಿದೆ. ಕ್ರಿ.ಶ.ಸು.೧೦–೧೧ನೆಯ ಶತಮಾನಕ್ಕೆ ಸೇರಬಹುದಾದ ಕಂಬಗಳನ್ನು ಬಳಸಿ ಕಟ್ಟಿದ ಕಟ್ಟಡವೂ ಇಂದು ಕಾಣಸಿಗುತ್ತದೆ. ಇವು ಪ್ರಾಗೈತಿಹಾಸಿಕ ಕಾಲದ ಕುರುಹುಗಳಾಗಿವೆ ಎನ್ನುವದು ಹಲವು ವಿದ್ವಾಂಸರ ಅಭಿಮತ.

"ಕ್ರಿ.ಶ.೧೦ನೇ ಶತಮಾನಕ್ಕೆ ಸೇರಬಹುದೆಂದು ಶ್ಯಾಮಾಶಾಸ್ತ್ರಿಗಳು ಪತ್ತೆ ಹಚ್ಚಿರುವ ಶಾಸನದಲ್ಲಿ ಆಹವಮಲ್ಲನು ತುಂಗಭದ್ರೆಯ ತೆಂಕಣತಡಿಯ ಪಂಪೆಯ ಬೀಡಿನಲ್ಲಿದ್ದಂತೆ ಹೇಳಿಕೊಂಡಿದ್ದಾನೆ. ಹೀಗಾಗಿ ಪಂಪ ಎಂಬ ಹೆಸರಿನ ತೀರ್ಥವು ತುಂಗೆಯ ದಕ್ಷಿಣ ತಡಿಯಲ್ಲಿತ್ತು. ಹೀಗಾಗಿ ಇದಕ್ಕೂ ಪಂಪಾಸರೋವರಕ್ಕೂ ಹಂಪಿಗೂ ಸಂಬಂಧ ಕಲ್ಪಿಸುವುದು ಕಷ್ಟ. ಈ ದೇವಾಲಯ ಮತ್ತು ಅದರ ಮುಂದಿನ ಕೊಳವನ್ನು ಬಿಟ್ಟರೆ ಬೇರೆ ಅವಶೇಷಗಳು ಇಲ್ಲ. ಚಿದಾನಂದಮೂರ್ತಿಯವರು ಈ ಸ್ಥಳವನ್ನು ಬಾಲಪಂಪಾದೇವಿ ಸ್ಥಳವೆಂದು ಗುರುತಿಸುತ್ತಾರೆ ಮತ್ತು ಈಗ ಇರುವ ಗಜಲಕ್ಷ್ಮೀಶಿಲ್ಪವನ್ನು ಬೇರೆ ಕಡೆಯಿಂದ ಅಲ್ಲಿ ತಂದಿರಿಸಿರುವುದಾಗಿ ಉಲ್ಲೇಖಿಸಿದ್ದಾರೆ. ಆದರೆ ವಿ.ಸೀ.ಯವರು 'ಪಂಪಾಯಾತ್ರೆ'ಯಲ್ಲಿ ತಾವು ಪ್ರವಾಸ ಹೋಗಿದ್ದಾಗ ಕಂಡದ್ದು ಸೀತಾಬಿಂಬವನ್ನು ಮತ್ತು ಅಂದೂ ಸಹ ಉತ್ತರದವರೇ ಅಲ್ಲಿ ಪೂಜೆಯಲ್ಲಿದ್ದಾರೆಂದು

ಬರೆದಿರುತ್ತಾರೆ. ಹೀಗಾಗಿ ಕಾಲದಿಂದ ಕಾಲಕ್ಕೆ ಈ ಪಂಪಾದೇವಿ ವಿಗ್ರಹ ಬದಲಾಗಿರಬಹುದೆ? ಎಂಬ ಸಂಶಯ ಬರುತ್ತದೆ. ಆದರೆ ಗಜಲಕ್ಷ್ಮಿ ಜಲದೇವತೆ. ಹೀಗಾಗಿ ಪಂಪಾಸರೋವರದ ಬಳಿ ಈ ವಿಗ್ರಹವೇ ಮೊದಲಿನಿಂದಲೂ ಇರಬಹುದು. ಈ ವಿಗ್ರಹವನ್ನೇ ಪಂಪಾದೇವಿ ಎಂದು ಕರೆದಿರಬಹುದು. ಒಟ್ಟಿನಲ್ಲಿ ಕ್ರಿ.ಶ.ಸು.೧೦೦೦ಕ್ಕೆ ಈ ಸ್ಥಳವೂ ಪ್ರಸಿದ್ಧವಾಗಿತ್ತೆಂಬುದನ್ನು ಅಲ್ಲಿನ ಶಾಸನ, ವಾಸ್ತು ಅವಶೇಷಗಳು ದೃಢೀಕರಿಸುತ್ತವೆ. ಆದರೆ ಇದಕ್ಕೆ ಹೆಸರೇನಿತ್ತೆಂಬುದಕ್ಕೆ ಶಾಸನಗಳ ಅಥವಾ ಕೃತಿಗಳ ದಾಖಲೆಗಳಿಲ್ಲ. ಪಂಪಾಸರೋವರ, ಪಂಪಾತೀರ್ಥವೆಂಬುದು ಒಂದೇ ಆಗಿದ್ದು, ಅದು ಈಗಿನ ಚಕ್ರತೀರ್ಥವೇ ಆಗಿತ್ತು."[೮೨]

ಮೌಖಿಕ ಪರಂಪರೆಯ ಪ್ರಕಾರ ಪಂಪಾದೇವಿಯು ಇಲ್ಲಿ ಸ್ನಾನ ಮಾಡಿದುದರಿಂದ ಈ ಸರೋವರಕ್ಕೆ ಪಂಪಾ ಸರೋವರವೆಂಬ ಹೆಸರು ಬಂದಿದೆ ಎಂಬ ನಂಬಿಕೆಯೊಂದಿದೆ. ಪಂಪಾನದಿಯೆಂದರೆ ಸೀಳುಳ್ಳ ನದಿ, ಭಾಗಗಳುಳ್ಳ ನದಿ ಎಂದು ಕೆಲವರು ಅರ್ಥೈಸಿದ್ದು, ಇದಕ್ಕೆ ಭೌಗೋಳಿಕ ಸಮರ್ಥನೆಯೂ ಇದೆ.

ತುಂಗಭದ್ರಾ ನದಿಯನ್ನು ಹಡಗಲಿಯಿಂದ ಕಂಪ್ಲಿಯವರೆಗೆ ಹಂಪಿಹೊಳೆಯೆಂದು ಕರೆಯುವ ರೂಢಿ ಇಂದಿಗೂ ಇದೆ. ಈ ಪ್ರದೇಶದಲ್ಲಿ ನದಿಯು ಪದೇ ಪದೇ ಕವಲುಗಳಾಗಿ ಹರಿಯುವುದು ಮತ್ತೆ ಒಂದಾಗುವುದು. ಕವಲುಗಳಾಗಿ ನಡುಗಡ್ಡೆಗಳನ್ನು ಸೃಷ್ಟಿಸಿ ಹರಿಯುವುದು ಈ ನದಿಯ ವೈಶಿಷ್ಟ್ಯ. ಇದನ್ನು ಗಮನನಿಸಿ ಈ ಸ್ಥಳವನ್ನು ಪಂಪಾ, ಪಂಪಾತೀರ್ಥ, ಎಂದು ಕರೆಯಲಾಗಿದೆ. ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾದ ಮೇಲೆ ಈ ಸ್ಥಳವು ದೇಶ ವಿದೇಶಗಳಿಗಲ್ಲಿಯೂ ಪರಿಚಿತವಾಯಿತು. ತನ್ನ ಪ್ರಖ್ಯಾತಿಯನ್ನು ದಿನೇ ದಿನೇ ಹೆಚ್ಚಿಸಿಕೊಂಡ ಈ ಸ್ಥಳವು, ಮೊದಲಿಗೆ ಕೇವಲ ಪುಣ್ಯಕ್ಷೇತ್ರವೆಂದು ಹೆಸರಾಗಿದ್ದು ಕಾಲಾಂತರದಲ್ಲಿ ಐತಿಹಾಸಿಕ ಸ್ಥಳವಾಗಿಯೂ ಹೆಸರಾಯಿತು. ಸಾಮ್ರಾಜ್ಯದ ಹೆಸರು ವಿಜಯನಗರ ಎಂಬುದಾಗಿ ವಿಶ್ವಪ್ರಖ್ಯಾತಿಗೊಂಡರೂ ಈ ಸ್ಥಳದ ಹೆಸರು ಮಾತ್ರ ಹಂಪಿ ಎಂದೇ ಉಳಿಯಿತು. ಇದಕ್ಕೆ ಇಲ್ಲಿ ನೆಲೆಸಿರುವ ಪಂಪಾಬಿಕೆಯೇ ಕಾರಣವೆನಿಸುತ್ತದೆ. ಹೀಗಾಗಿ ಈ ಸ್ಥಳದ ಹೆಸರನ್ನೇ ಈ ನದಿಗೆ ಅನ್ವಯಿಸಿ ಕರೆಯುವುದು ರೂಢಿಗತವಾಗಿ ಬೆಳೆದು ಬಂದಂತಿದೆ.

ಹಂಪಿಯ ವಿರೂಪಾಕ್ಷ ದೇವಾಲಯದ ಎಡ ಬದಿಯಲ್ಲಿ ಹರಿಯುವ ಹೊಳೆಯ ಕವಲು ಪೂರ್ವಾಭಿಮುಖವಾಗಿ ಹರಿದು ನಂತರ ಉತ್ತರಕ್ಕೆ ತಿರುಗುತ್ತದೆ.(ಕೋದಂಡರಾಮ ದೇವಸ್ಥಾನದ ಮುಂಭಾಗ) ನದಿಯು ಹೀಗೆ ತಿರುಗುವ ಸ್ಥಳವನ್ನು ಸಾಮಾನ್ಯವಾಗಿ ತೀರ್ಥಗಳೆಂದು ಪರಿಗಣಿಸಿದ್ದು, ಈ ಸ್ಥಳವೇ ಇಂದಿನ ಚಕ್ರತೀರ್ಥವೆಂದು ಕರೆಯುವ ಪ್ರದೇಶವಾಗಿದೆ. ಇದು ಕಾವ್ಯಗಳಲ್ಲಿ, ಶಾಸನಗಳಲ್ಲಿ ಉಲ್ಲೇಖವಾಗಿರುವ ಪಂಪಾತೀರ್ಥವೂ ಹೌದು. ಹಂಪಿಯ ವಿರೂಪಾಕ್ಷ

ದೇವಾಲಯದ ಬಳಿ ಉತ್ತರಕ್ಕಿರುವ ನದಿಯ ಸ್ನಾನಘಟ್ಟಕ್ಕಿಂತ ಈ ಚಕ್ರತೀರ್ಥದ ಬಳಿಯ ಪ್ರದೇಶವೇ ವಿರೂಪಾಕ್ಷದೇವರಿಗೆ ಪವಿತ್ರವಾದ ಸ್ಥಳ. ಹಂಪಿಯಲ್ಲಿ ವಿರೂಪಾಕ್ಷನ ಪೂಜೆಯ ಮುಖ್ಯ ಆಚರಣೆಗಳಲ್ಲಿ ಫಲಪೂಜೆಯೂ ಒಂದು. ಇದು ನಡೆಯುವುದು ಚಕ್ರತೀರ್ಥದ ಬಳಿ. ಹೀಗಾಗಿ ಈ ಸ್ನಾನಘಟ್ಟವೇ ಪ್ರಾಚೀನವಾದದ್ದು ಹಾಗೂ ಪವಿತ್ರವಾದದ್ದು ಎನ್ನುವ ಪರಂಪರಾಗತ ನಂಬಿಕೆ ಇಂದಿಗೂ ಪ್ರಚಲಿತದಲ್ಲಿದೆ. ಇಲ್ಲಿನ ಸುತ್ತಮುತ್ತಲಿನ ಅವಶೇಷಗಳು ಪ್ರಾಗೈತಿಹಾಸಿಕ ಕುರುಹುಗಳಾಗಿವೆ.

ಹಾಗೆಯೇ ಇಂದಿನ ಹಂಪಿ ಪ್ರದೇಶದಲ್ಲಿ ಅಲ್ಲಲ್ಲಿ ಕೋಟಿ ಶಂಕರ ಲಿಂಗಾಯ ನಮಃ, ಭೂತೇಶ್ವರ, ಶ್ರೀಚಾಮುಂಡೇಶ್ವರಿ ಲಿಂಗ, ಶ್ರೀರಾಮಚಂದ್ರ ದೇವರು, ಶ್ರೀ ವಿರೂಪಾಕ್ಷ, ಶ್ರೀ ವೀರಭದ್ರ ಲಿಂಗ, ಶ್ರೀ ಪತಿಕ ವೀರಭದ್ರ, ಶ್ರೀ ಶನೇಶ್ವರ ದೇವರು, ಶ್ರೀ ವಿರೂಪಾಕ್ಷ ದೇವರ ಪಾದಗಳ ಉಲ್ಲೇಖ, ಕಾಶ್ಯಪ ಗೋತ್ರದ ಹೊನ್ನಪ ಮತ್ತು ವಿರೂಪಾಕ್ಷ ಎನ್ನುವ ಉಲ್ಲೇಖಗಳು ಶಿಲೆಗಳಲ್ಲಿ ಕಂಡುಬರುತ್ತವೆ.[*]

ಆನೆಗುಂದಿಯ ಪ್ರದೇಶವನ್ನು ಪಂಪಾ ಸರೋವರ ಮತ್ತು ಅದಕ್ಕೆ ಸಂಬಂಧಿಸಿದ ಪಂಪಾದೇವಿಯ ಐತಿಹ್ಯಗಳ ಹಿನ್ನೆಲೆಯಲ್ಲಿ 'ಪಂಪಾತೀರ್ಥ'ವೆಂದು ಕರೆಯುತ್ತಿದ್ದರೆನ್ನುವ ಅಂಶ ಶಾಸನ(Indian Antiquary, Vol-VI, p.85)ಗಳಿಂದ ತಿಳಿದು ಬರುತ್ತದೆ. ಹಾಗೇ ಈ ಪ್ರದೇಶಕ್ಕೆ ಕಿಷ್ಕಿಂಧೆ ಎಂಬ ಹೆಸರು ಪ್ರಚಲಿತವಿದ್ದಿತು ಎನ್ನುವುದನ್ನು ಈ ಸ್ಥಳದ ಕುರಿತು ಪ್ರಚಲಿತವಾಗಿರುವ ಪೌರಾಣಿಕ ಕಥೆಗಳ ಹಿನ್ನೆಲೆಯಲ್ಲಿ ಅರ್ಥೈಸಬಹುದಾಗಿದೆ. ಇಲ್ಲಿಯೇ ಇರುವ ಒಂದು ಬೆಟ್ಟವನ್ನು ಆಂಜನೇಯನ ಜನ್ಮಸ್ಥಳವಾದ ಅಂಜನಾದ್ರಿ ಎಂದು ಕೆಲವರು ಗುರುತಿಸುತ್ತಾರೆ.

ಮಾಲ್ಯವಂತ ತೀರ್ಥದ ಕುರಿತು ಹಂಪೆಯ ರತ್ನಕೂಟದ ಶಾಸನಗಳಲ್ಲಿ ಉಲ್ಲೇಖವಿದೆ. ಮಾಲ್ಯವಂತ ಪರ್ವತದ ಶ್ರೀಮೈಲಾರ ದೇವರು[೪೩] ಮಾಲ್ಯವಂತ ತೀರ್ಥ[೪೪]ಶ್ರೀಮಾಲ್ಯವಂತ ತೀರ್ಥ[೪೫]ಎಂದು ಉಲ್ಲೇಖಿಸಲಾಗಿದೆ. ಈ ಪರ್ವತಕ್ಕೆ ಈ ಮಾಲ್ಯವಂತಹ ಹೆಸರು ಬರುವುದಕ್ಕೆ ಸಂಬಂಧಿಸಿದ ಐತಿಹ್ಯವೊಂದು ಹೀಗಿದೆ. 'ಮಾಲ್ಯವಂತನೆಂಬ ಹೆಸರು ಕೇರಳದಿಂದ ಬಂದು ಈ ಸ್ಥಳದಲ್ಲಿ ನೆಲೆಸಿದ್ಧ ಮಾಲ್ಯವಂತನೆಂಬ ಶಿವಭಕ್ತನಿಂದಾಗಿ ಬಂದಿದೆ. ಮಾಲ್ಯವಂತನು ಹಿಂದೆ ಕೇರಳದಲ್ಲಿ ಜಯಸಿಂಹ ಮಹಾರಾಜನ ಪಟ್ಟಣದಲ್ಲಿ ವಾಸಿಸುತ್ತಿದ್ದನು. ನಿತ್ಯವೂ ಮಹಾರಾಜನಿಗೆ ಪೂಜೆಗಾಗಿ ಹೂ ಮಾಲೆಗಳನ್ನು ಮಾಡಿಕೊಡುತ್ತಿದ್ದನು. ಒಮ್ಮೆ ಹೂ ಮಾಲೆಯಲ್ಲಿ ಸ್ತ್ರೀಯರ ಕೂದಲು ಇದೆಯೆಂದು ಆಪಾದಿಸಿದ ರಾಜನು ಮಾಲ್ಯವಂತನನ್ನು ತನ್ನ ರಾಜ್ಯದಿಂದ ಹೊರಹಾಕಿದನು. ಮಾಲ್ಯವಂತನು ತನ್ನ ಆಸ್ತಿ ಸಂಪತ್ತನ್ನು ಶಿವಸ್ವರೂಪಿಗಳಿಗೆ ದಾನ ಮಾಡಿ ಪರಮ ವೈರಾಗ್ಯ ನಿಧಿಯಾಗಿ ಸಂಸಾರವನ್ನು ತೊರೆದು ಒಬ್ಬ ಋಷಿಯ

ಅಪ್ಪಣೆಯಂತೆ ಪಂಪಾ ಕ್ಷೇತ್ರಕ್ಕೆ ಬಂದು ಈ ಪರ್ವತದಲ್ಲಿ ನೆಲೆಗೊಂಡು, ಶಿವಪೂಜೆಯಲ್ಲಿ ನಿರತನಾಗಿ, ಬಿಲ್ವ, ತುಳಸಿ, ಹೂ ಮಾಲೆಗಳನ್ನು ಋಷಿಗಳಿಗೆ ಅರ್ಪಿಸುತ್ತಿದ್ದು, ಸ್ವಧರ್ಮದಿಂದ ಆರಾಧಿಸಿದ ಮಹೇಶ್ವರನನ್ನು ಸಂತೋಷಪಡಿಸಿ ಶಿವಾನುಗ್ರಹಕ್ಕೆ ಕಾರಣವಾದ ಸದಾ ಶಿವಯೋಗಿಗಳ ಪ್ರೀತಿಯನ್ನು ಸಂಪಾದಿಸುತ್ತೇನೆಂದು ನಿಶ್ಚಯಿಸಿ ಶಿವಯೋಗಿಗಳ ಸೇವೆಯಲ್ಲಿ ನಿರತನಾದನು. ನಂತರ ಶಿವಯೋಗಿಗಳು ಮಾಲ್ಯವಂತನ ಸೇವೆಯಿಂದ ಸಂತುಷ್ಟರಾಗಿ ಶಿವಪಂಚಾಕ್ಷರಿ ಮಂತ್ರವನ್ನು ಉಪದೇಶಿಸಿ 'ನೀನು ಸದಾ ಶಿವಯೋಗಿಗಳನ್ನು ಸೇವಿಸುತ್ತಾ ಸದ್ಭಕ್ತನಾಗಿರುವೆ' ಎಂದು ಹರಸಲಾಗಿ, ಮಾಲ್ಯವಂತನು ಜಿತೇಂದ್ರಿಯನಾಗಿ ಉಗ್ರ ತಪಸ್ಸನ್ನು ಆಚರಿಸಿದನು. ಇದರಿಂದ ಶ್ರೀ ವಿರೂಪಾಕ್ಷನು ಪ್ರತ್ಯಕ್ಷನಾದನು. ಆದುದರಿಂದ ಈ ಸ್ಥಳಕ್ಕೆ ಪ್ರಸನ್ನ ಮಾಲ್ಯವಂತ ಅಥವಾ ಪ್ರಸನ್ನ ವಿರೂಪಾಕ್ಷ ಎಂದು ಕರೆಯಲಾಗುತ್ತಿದೆ. ಅಲ್ಲದೆ ಮಾಲ್ಯವಂತ ಪರ್ವತದ ಸನಿಹದಲ್ಲಿ ದಕ್ಷಿಣ ದಿಕ್ಕಿನಲ್ಲಿ ಮಹಾ ಶಿವಯೋಗಿಗಳ ಮಂಟಪ, ಶಿವಯೋಗಿ ದೇವರ ಗವಿ ಮುಂತಾದವುಗಳು ಇದುವುದರಿಂದಲೂ ಮಾಲ್ಯವಂತ ಪರ್ವತವೂ ಇದೇ ಆಗಿದೆ'.[೪೬]

ಇನ್ನೊಂದು ಹೇಳಿಕೆಯ ಪ್ರಕಾರ ಈ ಬೆಟ್ಟದಲ್ಲಿ ಮಾತಂಗಿ ಇದ್ದಳು. ಅಲ್ಲದೆ ಮಾತಂಗಿ ವಿಗ್ರಹ ಪೂರ್ವದಲ್ಲಿತ್ತು. ಅದನ್ನು ಬೇರೆಡೆಗೆ ಸ್ಥಳಾಂತರಿಸಲಾಯಿತು ಎನ್ನಲಾಗಿದೆ. ಆದುದರಿಂದ ಇದು ಮಾತಂಗ ಪರ್ವತವಲ್ಲ, ಅದು ಮಾತಂಗಿ ಪರ್ವತ ಎಂದು ಕರೆಯಲಾಗುತ್ತದೆ. ಮಾತಂಗಿಯು ಮಾದಿಗರಿಗೆ ಪವಿತ್ರ ಸ್ಥಳವಾಗಿರುವುದರಿಂದ, ಇದು ಮಾದಿಗರಿಗೆ ಪವಿತ್ರ ಸ್ಥಳ ಎಂದು ಹೇಳಲಾಗುತ್ತದೆ.

ಸಿರುಗುಪ್ಪ ತಾಲೂಕಿನ ಕೊಂಚಗೆರೆಯಲ್ಲಿನ ಶಾಸನದಲ್ಲಿ ಈ ಸ್ಥಳದಲ್ಲಿ ಭೈರವ ದೇವರು ಬಂದು ನೆಲೆಸಿದ್ದನ್ನು ತಿಳಿಸುತ್ತದೆ.

"ರಾಜಮಲ್ಲದೇವಂ ಶ್ರೀ
ಮತ್ತಂನ ಪಿರಿಯರಸಿ ಮಾಕಲದೇವಿಯುಂ ತಾನುಂ ರಾಜ್ಯಂಗೆಯ್ಯು
ತ್ತಮಿರಲಾನೆವರಿಯ ರಾ[ಮ]ತೀರ್ಥ್ಧದ ಭೈರವದೇವ[ರ್ತ್ತಂಮ ಮುಂ]ಮಂಗೆ[ಯ]
ಯ್ದಲು ನೆಲಸಿ ನಿಲವು. . .॥"[೪೭]

ಈ ಹಿಂದೆ ಕಾಳಮುಖ ಪರಂಪರೆಯನ್ನು ನಡೆದಾಡುವ ಪರಂಪರೆಯೆಂದು ಗುರುತಿಸಿದ್ದಾರೆ. ಆ ಸಂದರ್ಭದಲ್ಲಿ ಇವರು ಭೈರವ ದೇವಸ್ಥಾನವನ್ನು ಕಟ್ಟಿದಂತಹ ಕೊಂಚಗೆರೆಯಲ್ಲಿ ಭೈರವ ದೇವರು ಬಂದು ನೆಲೆಸಿದ ಎಂದು ಹೇಳಲಾಗಿದೆ.

ಕುಡುತಿನಿಯಲ್ಲಿ ದೊರೆತಿರುವ ಶಾಸನವೊಂದು ಅಲ್ಲಿನ ಸ್ಥಳ ಮಹಿಮೆಯನ್ನು ಉಲ್ಲೇಖಿಸಿದೆ. ಈ ಶಾಸನದಲ್ಲಿ ಶೈವ ಭಕ್ತರ ಭಕ್ತಿಯ ಸ್ವರೂಪವನ್ನು ಕುರಿತು ಪವಾಡ ಸದೃಶ್ಯ ರೀತಿಯಲ್ಲಿ ಚಿತ್ರಿಸಲಾಗಿದೆ.

"ಕರಕಮಳಂಗಳಂ ಮುಗಿದುಮಾಪತಿಗೇ
ಱಿಸಿಮೀಂಟಿ ಕಂಣ್ಗಳು ಹರನ ಶಿಖಾಗ್ರದೊಳಿಱಿಸಿ ದಂಡೆಗರುಳ್ಗಳೊ[ಳೆ]ಡೆಯಂ
ಭಯಂಕರಮೆನೆ ಮಾಡಿ ಶಂಕರ
ನನರ್ಚ್ಚಿಸಿ ಪಂದಲೆಯಿಂ ನಿವಾಳಿಯಂ ಪುರಮಥವಂಗೆ ಕೊಟ್ಟು ಮಗುಳ್ದ ಪಡೆವ
ಪ್ರಮಥರ್ಕಳದ್ಭುತಂ॥"[೪೮]

ಇಲ್ಲಿ ಚಿತ್ರಿಸಿರುವ ಭಕ್ತಿಯ ಸ್ವರೂಪವು ಉಗ್ರವಾಗಿದ್ದು, ಭಕ್ತರು ಶಿವನಿಗಾಗಿ ತಮ್ಮನ್ನು ತಾವು ಅರ್ಪಿಸಿಕೊಳ್ಳಲು ಸಿದ್ಧರಿದ್ದರು. ಅಷ್ಟೇ ಅಲ್ಲದೆ ಅವರು ಶಿವ ನಿಂದಕರಿಗೆ ಯಮನಂತಿದ್ದರು. ಇಂತಹ ಭಕ್ತರಿಗೆ ಶಿವ ಭಕ್ತರಾಗಿದ್ದ ಬೇಡರ ಕಣ್ಣಪ್ಪನಂತಹ ಪೌರಾಣಿಕ ವ್ಯಕ್ತಿಗಳ ಪ್ರಭಾವವಿದ್ದಂತೆ ಕಂಡುಬರುತ್ತದೆ.

ಈ ಮೇಲಿನ ಅಂಶಗಳನ್ನು ಗಮನಿಸಿದಾಗ ಏಕೆ ಪೌರಾಣಿಕರಿಸಲಾಗುತ್ತದೆ ಎನ್ನುವುದು ಗೋಚರಿಸುತ್ತದೆ. ಅದು ರಾಜ ಪ್ರಭುತ್ವದ ಕಾಲ. ಅಲ್ಲಿ ಗೆದ್ದವನೇ ರಾಜ. ಹಾಗಾಗಿ ಈ ಗೆಲುವು ಎನ್ನುವುದು ಪ್ರಮುಖ ಪಾತ್ರ ವಹಿಸುತ್ತಿತ್ತು. ಈ ಗೆಲುವನ್ನು ಪಡೆದುಕೊಳ್ಳುವುದು ಕೇವಲ ಒಬ್ಬ ರಾಜನಿಂದ ಮಾತ್ರ ಸಾಧ್ಯವಾಗುವಂತಹದಲ್ಲ. ಅದು ಸೈನಿಕರಿಗಿರುವ ರಾಜ್ಯಾಭಿಮಾನ, ರಾಜಾಭಿಮಾನಗಳು ಮುಖ್ಯವಾಗುತ್ತವೆ. ಹೀಗಾಗಿ ಸೈನಿಕರಲ್ಲಿ ಈ ಬಗೆಯ ಅಭಿಮಾನವನ್ನು ಮೂಡಿಸುವಲ್ಲಿ ರಾಜ ಪ್ರಭುತ್ವವು ತಮ್ಮ ವಂಶವನ್ನು ಪೌರಾಣಿಕ ವ್ಯಕ್ತಿಗಳೊಂದಿಗೆ ಹೋಲಿಕೆ ಮಾಡಿಕೊಳ್ಳುವುದರ ಮೂಲಕ ತಾವು ಲೌಕಿಕ ದೇವರು ಎನ್ನುವ ಭಾವನೆ ಸೈನಿಕರಲ್ಲಿ ಮೂಡುವಂತೆ ನೋಡಿಕೊಳ್ಳುತ್ತಿದ್ದರು. ಇಂಥ ಸಂಗತಿಗಳಿಂದ ಪ್ರೇರೇಪಿತರಾದ ಸೈನಿಕರು ದೇವರಲ್ಲಿ ಭಕ್ತಿ ಭಾವನೆಯನ್ನಿಡುವಂತೆ ರಾಜರಲ್ಲಿ ಭಕ್ತಿಯನ್ನಿಟ್ಟು ತಮ್ಮ ಜೀವನವನ್ನೇ ಅವರಿಗೆ ಮುಡುಪಾಗಿಡುತ್ತಿದ್ದರು. ಇದೇ ಆ ಕಾಲದ ಮೌಲ್ಯ ಎನ್ನುವಂತಿತ್ತು. ಇದಕ್ಕೆ ಬಹುಮುಖ್ಯವಾದ ಪ್ರೇರಣೆ ಎಂದರೆ ಧರ್ಮ. ಧರ್ಮ ಮತ್ತು ರಾಜ ಧರ್ಮಗಳು ಕೊಡುಕೊಳ್ಳುವಿಕೆಯ ಸಂಬಂಧವಿದೆ ಎನ್ನುವುದು ಮೇಲಿನ ದಾಖಲೆಗಳಿಂದ ಸ್ಪಷ್ಟವಾಗುತ್ತದೆ.

ರಾಜ ಮತ್ತು ಪುರೋಹಿತಶಾಹಿ ವರ್ಗಗಳ ನಡುವೆ ಅಂತರ್ ಸಂಬಂಧವಿದೆ. ರಾಜ ವಿಪ್ರ ವರ್ಗಕ್ಕೆ ವಿಶೇಷ ಸೌಲಭ್ಯಗಳನ್ನು ಒದಗಿಸುವುದರ ಮೂಲಕ ಅವರನ್ನು ಓಲೈಸುವುದರ ಕಡೆಗೆ ಪ್ರಯತ್ನಿಸಿದರೆ, ವಿಪ್ರ ವರ್ಗವು ರಾಜನನ್ನು ಅತಿಮಾನುಷ ಮತ್ತು ಅಪೌರುಷೇಯ ವ್ಯಕ್ತಿಗಳೊಂದಿಗೆ ಸಮೀಕರಿಸುವುದರ ಮೂಲಕ ಅವರನ್ನು ದೇವರನ್ನಾಗಿಸುತ್ತದೆ. ಈ ಎರಡು ವರ್ಗಗಳು ಸಾಮಾನ್ಯ ಪ್ರಜೆಗಳಲ್ಲಿ ತಾವು ಜನ್ಮವೆತ್ತಿದ್ದೇ ರಾಜ ಮತ್ತು ವಿಪ್ರ ವರ್ಗಗಳ ಸೇವೆಗಾಗಿಯೇ ಎನ್ನುವ ಮನೋಭಾವನೆ ತಳೆಯುವಂತೆ ಸಾಂಸ್ಕೃತಿಕ ರಾಜಕಾರಣವನ್ನು

ನಿರ್ವಹಿಸುತ್ತವೆ. ಇದನ್ನೇ ಇನ್ನೊಂದು ಅರ್ಥದಲ್ಲಿ ಖಡ್ಗ ಮತ್ತು ಲೇಖನಿಯ ಚಾತುರ್ಯವೆಂದು ಕರೆಯಬಹುದಾಗಿದೆ.

ದೊರೆತಿರುವ ಶಾಸನಗಳಲ್ಲಿ ದಾನ ಶಾಸನಗಳ ಪ್ರಮಾಣವೇ ಅಧಿಕ. ದಾನ ಶಾಸನಗಳನ್ನು ಅವಲೋಕಿಸಿದಾಗ ರಾಜರುಗಳು ಅಥವಾ ಅವನ ಆಡಳಿತ ಪರಿವಾರವು ದಾನ ನೀಡಿರುವುದು ಹೆಚ್ಚಾಗಿ ಕಂಡು ಬರುತ್ತದೆ. ದಾನವನ್ನು ಬಹುತೇಕ ದೇವಸ್ಥಾನಗಳಿಗೆ ನೀಡಿದ್ದೇ ಹೆಚ್ಚು. ಇಂತಹ ಶಾಸನಗಳಲ್ಲಿ ರಾಜನನ್ನು ಪೌರಾಣಿಕ ವ್ಯಕ್ತಿಗಳೊಂದಿಗೆ ಅಭೇಧ ಕಲ್ಪಿಸಿ ವರ್ಣಿಸಲಾಗಿರುತ್ತದೆ. ಏಕೆಂದರೆ ದಾನ ನೀಡಿದ್ದು ದೇವಸ್ಥಾನಕ್ಕಾದರೂ ಆ ದಾನದ ಫಲಾನುಭವಿಗಳು ಪರೋಕ್ಷವಾಗಿ ಪುರೋಹಿತಶಾಹಿ ವರ್ಗದವರೇ ಆಗಿರುತ್ತಾರೆ. ರಾಜ ಪ್ರಭುತ್ವವು ನೇರವಾಗಿ ವ್ಯವಸ್ಥೆಯನ್ನು ನಿಯಂತ್ರಿಸಿದರೆ, ಈ ಪುರೋಹಿತಶಾಹಿ ವರ್ಗವು ಪರೋಕ್ಷವಾಗಿ ವ್ಯವಸ್ಥೆಯನ್ನು ನಿರ್ದೇಶನ ಮಾಡುತ್ತದೆ. ಹೀಗೆ ನಿರ್ದೇಶಿಸುವ ವರ್ಗವು ತಾನು ರೂಪಿಸಿದ ಕಟ್ಟಳೆಗಳಿಗೆ ಅನುಗುಣವಾಗಿ ಸಮಾಜದ ಮುಂದುವರಿಕೆಯನ್ನು ಬಯಸುತ್ತಿರುತ್ತದೆ. ಇಂತಹ ಸಂದರ್ಭದಲ್ಲಿ ದಾನ ಕೊಟ್ಟ ರಾಜನನ್ನು ಸೃಷ್ಟಿಕರ್ತನಿಗೋ, ಅಪೌರುಷ ವ್ಯಕ್ತಿಗೋ ಹೋಲಿಸಿ ಅವನ ಮತ್ತು ಅವನ ವಂಶದ ಕೀರ್ತಿಯನ್ನು ಆಚಂದ್ರಾರ್ಕವಾಗಿ ಉಳಿಸುತ್ತೇವೆಂದು ತೋರಿಸುವುದರ ಮೂಲಕ, ದಾನ ನೀಡುವ ವರ್ಗಕ್ಕೆ ಉತ್ತೇಜನ ನೀಡುತ್ತಿರುತ್ತದೆ. ಹೀಗೆ ಉತ್ತೇಜನಗೊಂಡ ವರ್ಗವು ದಾನ ನೀಡುವುದನ್ನು ಒಂದು ಪರಂಪರೆ ಎಂಬಂತೆ ಮುಂದುವರೆಸಿಕೊಂಡು ಬಂದಿದೆ. ಈ ಪರಂಪರೆಯನ್ನೇ ಪುರೋಹಿತಶಾಹಿ ವರ್ಗವು ಸಾಮಾಜಿಕ ಮೌಲ್ಯ ಎಂದು ಘೋಷಿಸಿದಂತಿದೆ.

ಇಲ್ಲಿ ಗಮನಿಸಬೇಕಾದ ಇನ್ನೊಂದು ಅಂಶವೆಂದರೆ ದಾನ ನೀಡಿರುವುದು ರಾಜನೇ ಎಂದು ಹೇಳಲಾಗಿರುತ್ತದೆ. ಆದರೆ ಆತ ಯಾವ ಭೂಮಿಯನ್ನು ದಾನವಾಗಿ ನೀಡಿದ ಎನ್ನುವುದು ಮುಖ್ಯ. ಏಕೆಂದರೆ ರಾಜ ದಾನ ನೀಡಿದ್ದು ಸಾರ್ವಜನಿಕವಾದ ಆಸ್ತಿಯನ್ನೋ ಅಥವಾ ತನ್ನ ಸ್ವಂತದನ್ನೋ ಎನ್ನುವುದನ್ನು ಯಾವ ಶಾಸನವೂ ಉಲ್ಲೇಖಿಸಿಲ್ಲ. ಇಲ್ಲಿ ದಾನ ನೀಡಿದ್ದು ಅರಸನಿಗೆ ಸಂಬಂಧಿಸಿದ್ದು ಎಂದರೆ ಆ ಅರಸನು ಆ ಸಂಪತ್ತನ್ನು ಯಾವ ರೀತಿಯಲ್ಲಿ ಸಂಪಾದಿಸಿದ್ದ ಎನ್ನುವ ಪ್ರಶ್ನೆ ಹುಟ್ಟಿಕೊಳ್ಳುತ್ತದೆ. ಒಂದು ರಾಜ್ಯವನ್ನು ಗೆದ್ದು ಆ ಸಂಪತ್ತನ್ನು ಆತ ಸಂಪಾದಿಸಿದ್ದ ಎಂದು ಹೇಳುವುದಾದರೆ, ಆ ಗೆಲುವಿಗೆ ಆ ರಾಜ ಒಬ್ಬನೇ ಕಾರಣನಲ್ಲ. ಅಲ್ಲಿ ಲಕ್ಷಾಂತರ ಸೈನಿಕರ ಹೋರಾಟದ ಶ್ರಮವಿದೆ. ರಾಜನೊಂದಿಗೆ ಅವನಿಗಿಂತಲೂ ನಿಷ್ಠೆಯಿಂದ ಹೋರಾಟ ಮಾಡಿದ ಲಕ್ಷಾಂತರ ಸೈನಿಕರ ಪಾಲೂ ಆ ಸಂಪತ್ತಿನಲ್ಲಿದೆ ಎಂದರ್ಥ. ಅಂದಾಗ ಅದು ಪರೋಕ್ಷವಾಗಿ ಸಾರ್ವಜನಿಕರ ಸಂಪತ್ತು. ಅಂತಹ ಸಾರ್ವಜನಿಕರ ಸಂಪತ್ತನ್ನು ತನ್ನದೆಂದು ಭಾವಿಸಿಕೊಂಡು ದಾನ ನೀಡಿ ತನ್ನ ಹಿರಿಮೆಯನ್ನು ಸಾರಿಕೊಳ್ಳುವ ರಾಜಪ್ರಭುತ್ವವು

ಮತ್ತು ಅದು ರಾಜನಿಗೆ ಸಂಬಂಧಿಸಿದ್ದು ಎಂದು ಹೇಳಿ ಹೊಗಳುವ ಪುರೋಹಿತಶಾಹಿಗಳು ಸಾಮಾಜಿಕ ಮೌಲ್ಯವನ್ನು ನಿರ್ಧರಿಸಲು ಯಾವ ರೀತಿ ಹಕ್ಕುದಾರರಾಗುತ್ತಾರೆ ಎನ್ನುವುದನ್ನು ಪುನರ್ ಪರಿಶೀಲಿಸುವ ಅಗತ್ಯವಿದೆ. ಅಲ್ಲದೆ ದಾನ ಮಾಡುವುದನ್ನು ಒಂದು ಶ್ರೇಷ್ಠ ಮೌಲ್ಯ ಎಂಬುದನ್ನು ಧಾರ್ಮಿಕವಾಗಿ ನಂಬಿದ ಸಾಮಾನ್ಯ ವರ್ಗವೂ ಕೂಡ ದಾನ ನೀಡುವುದಕ್ಕೆ ಮುಂದಾಗುತ್ತದೆ. ಹೀಗಾಗಿ ಪ್ರಜೆಗಳು ಖಡ್ಗ ಮತ್ತು ಲೇಖನಿಗಳ ಹಿಡಿತಕ್ಕೆ ಸಿಕ್ಕು ರಾಜನನ್ನೇ ಭೂಪತಿ ಎಂದು ಭಾವಿಸುತ್ತಾರೆ. ರಾಜ ಮತ್ತು ಪ್ರಜೆಗಳ ಮಧ್ಯೆ ಇರುವ ಪುರೋಹಿತಶಾಹಿ ವರ್ಗವು ಎರಡೂ ಕಡೆಯಿಂದಲೂ ಸೌಲಭ್ಯವನ್ನು ಪಡೆದು ಐಷಾರಾಮಿ ಜೀವನ ನಡೆಸುತ್ತದೆ ಎನ್ನುವ ಅಂಶಗಳು ಮೇಲಿನ ಶಾಸನಗಳನ್ನು ಅವಲೋಕಿಸಿದಾಗ ಕಾಣಸಿಗುತ್ತವೆ.

ಕೆಲವು ಸಂದರ್ಭಗಳಲ್ಲಿ ಪುರೋಹಿತಶಾಹಿ ವರ್ಗವೂ ಸಹಿತ ಲೋಕೋಪಯೋಗಿ ಕಾರ್ಯಗಳನ್ನು ಮಾಡಿರುವುದು ಕಂಡು ಬರುತ್ತದೆ. ಮೇಲ್ನೋಟಕ್ಕೆ ಅದು ಸಾಮಾಜಿಕ ಸೇವಾ ಕಾರ್ಯ ಎಂದು ಕಂಡರೂ, ಆ ಕಾರ್ಯನಿರ್ವಹಣೆಯ ಹಿಂದೆ ಇರುವ ಧೋರಣೆ ಯಾವ ಸ್ವರೂಪದ್ದೆಂಬುದನ್ನು ಅರಿತುಕೊಳ್ಳಬೇಕು. ಅವು ತಾವು ರೂಪಿಸಿದ ಮೌಲ್ಯಗಳನ್ನು ಕಾಯ್ದುಕೊಳ್ಳಲು, ತಮ್ಮ ಹಿತಾಸಕ್ತಿಗೆ ದಕ್ಕೆಯಾಗದಂತೆ ನೋಡಿಕೊಳ್ಳಲು ಇಂತಹ ವ್ಯವಸ್ಥಿತವಾದ ಹುನ್ನಾರವನ್ನು ಹೆಣೆದಿರುತ್ತವೆ.

ಇನ್ನು ವಿವೇಚಿಸಬೇಕಾದುದು ಜೀವಪರವಾದ ಕಾಳಜಿಯ ಕುರಿತು. ಗೋವುಗಳನ್ನು ರಕ್ಷಿಸುವ ಸಲುವಾಗಿ ಮನುಷ್ಯನು ಪ್ರಾಣ ಕಳೆದುಕೊಂಡರೂ ಚಿಂತೆಯಿಲ್ಲ ಎನ್ನುವುದು. ಗೋರಕ್ಷಣೆಗಾಗಿ ಹೋರಾಡಿ ಪ್ರಾಣ ಕಳೆದುಕೊಂಡವರು ಸ್ವರ್ಗಕ್ಕೆ ಸೇರುತ್ತಾರೆ ಎಂದು ನಂಬಿಸಿ, ಹೋರಾಟಕ್ಕೆ ಅಣಿಗೊಳಿಸುತ್ತಾರೆ. ಈ ರೀತಿ ಹೋರಾಡಿ ಸತ್ತವರು ಸ್ವರ್ಗದಲ್ಲಿ ಸುಖ ಕಾಣುತ್ತಾರೆ, ಅಲ್ಲಿ ಅವರು ಇಂದ್ರನ ವೈಭೋಗದಲ್ಲಿ ರಂಭೆ, ಊರ್ವಶಿಯರೊಂದಿಗೆ ಕಾಲ ಕಳೆಯುತ್ತಾರೆ. ಆದರೆ ತಾವು ಮಾತ್ರ ಬದುಕಿರುವಾಗಲೇ ಈ ಎಲ್ಲ ಸುಖಗಳನ್ನು ಅನುಭೋಗಿಸುತ್ತಾರೆ. ಬದುಕಿದ್ದಾಗಲೇ ಅನುಭವಿಸದ ಸುಖಗಳು ಸತ್ತ ಮೇಲೆ ಬರುವುದು ಎನ್ನುವುದರ ಹಿಂದೆ ಯಾವ ಮೌಲ್ಯವಿದೆ? ಅವು ಯಾರ ಸುಖಕ್ಕಾಗಿ ಸೃಷ್ಟಿಸಿದ ಮೌಲ್ಯಗಳು? ಎನ್ನುವ ಪ್ರಶ್ನೆಗಳಿಗೆ ಯಾವ ಶಾಸನದಲ್ಲೂ ಉತ್ತರ ಸಿಗುವುದಿಲ್ಲ.

**ಅಡಿಟಿಪ್ಪಣಿಗಳು.**

೧. ಶೇಷಶಾಸ್ತ್ರಿ ಆರ್., ಕನ್ನಡ ಶಾಸನಗಳಲ್ಲಿ ಇತಿಹಾಸ ಮತ್ತು ಪುರಾಣ ಪ್ರಜ್ಞೆ, (ಕನ್ನಡ ಸಾಹಿತ್ಯದಲ್ಲಿ ಚರಿತ್ರೆ ಮತ್ತು ಪುರಾಣ, (ಸಂ)ಬರಗೂರು ರಾಮಚಂದ್ರಪ್ಪ) ಪುಟ.೨೧.

೨. ದೇವರಕೊಂಡಾರೆಡ್ಡಿ, ಕೆ.ಜಿ.ಭಟ್‌ಸೂರಿ, ಕಲವೀರ ಮನ್ವಾಚಾರ, ಪರಮಶಿವಮೂರ್ತಿ (ಸಂ)., ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೩, ಹಂಪಿ ಶಾಸನಗಳು, ಶಾಸನ ಸಂಖ್ಯೆ-೬೯.

೩. ದೇವರಕೊಂಡಾರೆಡ್ಡಿ, ಕೆ.ಜಿ.ಭಟ್‌ಸೂರಿ, ಕಲವೀರ ಮನ್ವಾಚಾರ, ಪರಮಶಿವಮೂರ್ತಿ(ಸಂ)., ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨, ಕೊಪ್ಪಳ ಜಿಲ್ಲೆ, ಯಲಬುರ್ಗಾ,ಶಾಸನ ಸಂಖ್ಯೆ- ೬೭.

೪. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.೩೨೩.

೫. ಎ.ಕ., ಶಾಸನ ಸಂಖ್ಯೆ ೧೦, ದಾವಣಗೆರೆ ೪೩, ಹರಿಹರ.

೬. ಕ.ಇ., ವಿ-೩೦, ಹಳ್ಳೂರು, ಹಿರೇಕೇರೂರು.

೭. ಕ.ಇ., ೭೫೦, ಆಡೂರು, ಹಾನಗಲ್ಲ(ತಾ), ಧಾರವಾಡ(ಜಿ).

೮. ಗೋಪಾಲ ಬಾ.ರಾ., ರಂಜೋಲ ಗ್ರಾಮದ ಸಿಂದರ ಶಾಸನ, ಕ.ಬಾ.ಸಂ-೧, ಸಂ ೧, ಪು. ೧೪೭-೧೫೬.

೯. ದೇವರಕೊಂಡಾರೆಡ್ಡಿ, ಕೆ.ಜಿ.ಭಟ್‌ಸೂರಿ, ಕಲವೀರ ಮನ್ವಾಚಾರ, ಪರಮಶಿವಮೂರ್ತಿ(ಸಂ)., ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧, ಬಳ್ಳಾರಿ ಜಿಲ್ಲೆ, ಹಗರಿಬೊಮ್ಮನಳ್ಳಿ, ಶಾಸನ ಸಂಖ್ಯೆ-೨.

೧೦. ದೇವರಕೊಂಡಾರೆಡ್ಡಿ, ಕೆ.ಜಿ.ಭಟ್‌ಸೂರಿ, ಕಲವೀರ ಮನ್ವಾಚಾರ, ಪರಮಶಿವಮೂರ್ತಿ(ಸಂ)., ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೩, ಹಂಪಿ ಶಾಸನಗಳು, ಶಾಸನ ಸಂಖ್ಯೆ-೫೪.

೧೧. ದೇವರಕೊಂಡಾರೆಡ್ಡಿ, ಕೆ.ಜಿ.ಭಟ್‌ಸೂರಿ, ಕಲವೀರ ಮನ್ವಾಚಾರ, ಪರಮಶಿವಮೂರ್ತಿ(ಸಂ)., ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೩, ಹಂಪಿ ಶಾಸನಗಳು, ಶಾಸನ ಸಂಖ್ಯೆ ೩೪.

೧೨. ಶಂಕರಾಚಾರಾರ್ಯ ಮಠದ ತಾಮ್ರ ಶಾಸನಗಳು, ೧ ಮತ್ತು ೨ ಟಿ.ಎ.ಗೋಪಿನಾಥರಾವ್(ಸಂ).

೧೩. ಚಿದಾನಂದಮೂರ್ತಿ ಎಂ., ಹೊಸತು ಹೊಸತು, ಪುಟ. ೩೩೧.

೧೪. ಶೇಷಶಾಸ್ತ್ರಿ ಆರ್., ಕನ್ನಡ ಶಾಸನಗಳಲ್ಲಿ ಇತಿಹಾಸ ಮತ್ತು ಪುರಾಣ ಪ್ರಜ್ಞೆ, (ಕನ್ನಡ ಸಾಹಿತ್ಯದಲ್ಲಿ ಚರಿತ್ರೆ ಮತ್ತು ಪುರಾಣ, (ಸಂ) ಬರಗೂರು ರಾಮಚಂದ್ರಪ್ಪ) ಪುಟ. ೩೩.

೧೫. ದೇವರಕೊಂಡಾರೆಡ್ಡಿ, ಕೆ.ಜಿ.ಭಟ್‌ಸೂರಿ, ಕಲವೀರ ಮನ್ವಾಚಾರ, ಪರಮಶಿವಮೂರ್ತಿ(ಸಂ)., ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨, ಕೊಪ್ಪಳ ಜಿಲ್ಲೆ, ಗಂಗಾವತಿ, ಶಾಸನ ಸಂಖ್ಯೆ-೪೪.

೧೬. ದೇವರಕೊಂಡಾರೆಡ್ಡಿ, ಕೆ.ಜಿ.ಭಟ್‌ಸೂರಿ, ಕಲವೀರ ಮನ್ವಾಚಾರ, ಪರಮಶಿವಮೂರ್ತಿ (ಸಂ)., ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೩, ಹಂಪಿ ಶಾಸನಗಳು, ಶಾಸನ ಸಂಖ್ಯೆ-೮೬.

೧೭. ದೇವರಕೊಂಡಾರೆಡ್ಡಿ, ಕೆ.ಜಿ.ಭಟ್‌ಸೂರಿ, ಕಲವೀರ ಮನ್ವಾಚಾರ, ಪರಮಶಿವಮೂರ್ತಿ (ಸಂ)., ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧, ಬಳ್ಳಾರಿ ಜಿಲ್ಲೆ, ಹಡಗಲಿ, ಶಾಸನ ಸಂಖ್ಯೆ-೫೫.

೧೮. ದೇವರಕೊಂಡಾರೆಡ್ಡಿ, ಕೆ.ಜಿ.ಭಟ್‌ಸೂರಿ, ಕಲವೀರ ಮನ್ವಾಚಾರ, ಪರಮಶಿವಮೂರ್ತಿ (ಸಂ)., ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧, ಬಳ್ಳಾರಿ ಜಿಲ್ಲೆ, ಹಡಗಲಿ, ಶಾಸನ ಸಂಖ್ಯೆ-೫೨.

೧೯. ದೇವರಕೊಂಡಾರೆಡ್ಡಿ, ಕೆ.ಜಿ.ಭಟ್‌ಸೂರಿ, ಕಲವೀರ ಮನ್ವಾಚಾರ, ಪರಮಶಿವಮೂರ್ತಿ (ಸಂ)., ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨, ಕೊಪ್ಪಳ ಜಿಲ್ಲೆ, ಯಲಬುರ್ಗಾ, ಶಾಸನಸಂಖ್ಯೆ-೨೯.

೨೦. ದೇವರಕೊಂಡಾರೆಡ್ಡಿ, ಕೆ.ಜಿ.ಭಟ್‌ಸೂರಿ, ಕಲವೀರ ಮನ್ವಾಚಾರ, ಪರಮಶಿವಮೂರ್ತಿ (ಸಂ)., ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೩, ಹಂಪಿ ಶಾಸನಗಳು, ಶಾಸನ ಸಂಖ್ಯೆ-೬೯.

೨೧. ದೇವರಕೊಂಡಾರೆಡ್ಡಿ, ಕೆ.ಜಿ.ಭಟ್‌ಸೂರಿ, ಕಲವೀರ ಮನ್ವಾಚಾರ, ಪರಮಶಿವಮೂರ್ತಿ (ಸಂ)., ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೩, ಹಂಪಿ ಶಾಸನಗಳು, ಶಾಸನ ಸಂಖ್ಯೆ-೫೩.

೨೨. ದೇವರಕೊಂಡಾರೆಡ್ಡಿ, ಕೆ.ಜಿ.ಭಟ್‌ಸೂರಿ, ಕಲವೀರ ಮನ್ವಾಚಾರ, ಪರಮಶಿವಮೂರ್ತಿ(ಸಂ)., ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨, ಬಳ್ಳಾರಿ ಜಿಲ್ಲೆ, ಬಳ್ಳಾರಿ, ಶಾಸನ ಸಂಖ್ಯೆ-೧೯.

೨೩. ಶೇಷಶಾಸ್ತ್ರಿ ಆರ್., ಕನ್ನಡ ಶಾಸನಗಳಲ್ಲಿ ಇತಿಹಾಸ ಮತ್ತು ಪುರಾಣ ಪ್ರಜ್ಞೆ, (ಕನ್ನಡ ಸಾಹಿತ್ಯದಲ್ಲಿ ಚರಿತ್ರೆ ಮತ್ತು ಪುರಾಣ, ಸಂ: ಬರಗೂರು ರಾಮಚಂದ್ರಪ್ಪ) ಪುಟ.೩೯

೨೪. ದೇವರಕೊಂಡಾರೆಡ್ಡಿ, ಕೆ.ಜಿ.ಭಟ್‌ಸೂರಿ, ಕಲವೀರ ಮನ್ವಾಚಾರ, ಪರಮಶಿವಮೂರ್ತಿ(ಸಂ)., ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨, ಕೊಪ್ಪಳ ಜಿಲ್ಲೆ, ಯಲಬುರ್ಗಾ, ಶಾಸನ ಸಂಖ್ಯೆ-೧೬.

೨೫. ದೇವರಕೊಂಡಾರೆಡ್ಡಿ, ಕೆ.ಜಿ.ಭಟ್‌ಸೂರಿ, ಕಲವೀರ ಮನ್ವಾಚಾರ, ಪರಮಶಿವಮೂರ್ತಿ(ಸಂ)., ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨, ಕೊಪ್ಪಳ ಜಿಲ್ಲೆ, ಕೊಪ್ಪಳ ಶಾಸನ ಸಂಖ್ಯೆ-೯೪.

೨೬. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.೩೩೦.

೨೭. ಶೇಷಶಾಸ್ತ್ರಿ ಆರ್., ಕನ್ನಡ ಶಾಸನಗಳಲ್ಲಿ ಇತಿಹಾಸ ಮತ್ತು ಪುರಾಣ ಪ್ರಜ್ಞೆ, (ಕನ್ನಡ ಸಾಹಿತ್ಯದಲ್ಲಿ ಚರಿತ್ರೆ ಮತ್ತು ಪುರಾಣ, ಸಂ:ಬರಗೂರು ರಾಮಚಂದ್ರಪ್ಪ) ಪುಟ. ೬೫.

೨೮. ಶೇಷಶಾಸ್ತ್ರಿ ಆರ್., ಕರ್ನಾಟಕದ ವೀರಗಲ್ಲುಗಳು, ಪುಟ. ೩೦.

೨೯. ನಂಜುಡ., ರಾಮನಾಥ ಚರಿತೆ, ಭಾಗ-೩, ಆ-೯, ಸಂ-೧-೧೦೩.

೩೦. ಶೇಷಶಾಸ್ತ್ರಿ ಆರ್., ಕರ್ನಾಟಕದ ವೀರಗಲ್ಲುಗಳು, ಪುಟ. ೯೨.

೩೧. ಶೇಷಶಾಸ್ತ್ರಿ ಆರ್., ಕರ್ನಾಟಕದ ವೀರಗಲ್ಲುಗಳು, ಪುಟ. ೧೧೨.

೩೨. ದೇವರಕೊಂಡಾರೆಡ್ಡಿ, ಕೆ.ಜಿ.ಭಟ್‌ಸೂರಿ, ಕಲವೀರ ಮನ್ವಾಚಾರ, ಪರಮಶಿವಮೂರ್ತಿ(ಸಂ)., ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧, ಬಳ್ಳಾರಿ ಜಿಲ್ಲೆ, ಹರಪನಹಳ್ಳಿ ಶಾಸನ ಸಂಖ್ಯೆ -೨೧೧.

೩೩. ದೇವರಕೊಂಡಾರೆಡ್ಡಿ, ಕೆ.ಜಿ.ಭಟ್‌ಸೂರಿ, ಕಲವೀರ ಮನ್ವಾಚಾರ, ಪರಮಶಿವಮೂರ್ತಿ(ಸಂ)., ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧, ಬಳ್ಳಾರಿ ಜಿಲ್ಲೆ, ಹರಪನಹಳ್ಳಿ ಶಾಸನ ಸಂಖ್ಯೆ-೧೪೬.

೩೪. ಶೇಷಶಾಸ್ತ್ರಿ ಆರ್., ಕನ್ನಡ ಶಾಸನಗಳಲ್ಲಿ ಇತಿಹಾಸ ಮತ್ತು ಪುರಾಣ ಪ್ರಜ್ಞೆ, (ಕನ್ನಡ ಸಾಹಿತ್ಯದಲ್ಲಿ ಚರಿತ್ರೆ ಮತ್ತು ಪುರಾಣ, ಸಂ:ಬರಗೂರು ರಾಮಚಂದ್ರಪ್ಪ) ಪುಟ. ೩೮.

೩೫. ಶಂಬಾಜೋಷಿ, ಎಡೆಗಳು ಹೇಳುವ ಕಂನಾಡ ಕಥೆ, ಪುಟ.೧೨೨ ಶಂಬಾ ಸಂಪುಟ ೨ ಪ್ರಸಾರಾಂಗ. ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೬. ದೇವರಕೊಂಡಾರೆಡ್ಡಿ, ಕೆ.ಜಿ.ಭಟ್‌ಸೂರಿ, ಕಲವೀರ ಮನ್ವಾಚಾರ, ಪರಮಶಿವಮೂರ್ತಿ(ಸಂ)., ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೩, ಹಂಪಿ ಶಾಸನಗಳು, ಶಾಸನ ಸಂಖ್ಯೆ-೨೩೨.

೩೭. ದೇವರಕೊಂಡಾರೆಡ್ಡಿ, ಕೆ.ಜಿ.ಭಟ್‌ಸೂರಿ, ಕಲವೀರ ಮನ್ವಾಚಾರ, ಪರಮಶಿವಮೂರ್ತಿ(ಸಂ)., ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨, ಕೊಪ್ಪಳ ಜಿಲ್ಲೆ, ಗಂಗಾವತಿ ಶಾಸನ ಸಂಖ್ಯೆ -೨.

೩೮. ದೇವರಕೊಂಡಾರೆಡ್ಡಿ, ಕೆ.ಜಿ.ಭಟ್‌ಸೂರಿ, ಕಲವೀರ ಮನ್ವಾಚಾರ, ಪರಮಶಿವಮೂರ್ತಿ (ಸಂ)., ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧, ಬಳ್ಳಾರಿ ಜಿಲ್ಲೆ, ಹರಪನಹಳ್ಳಿ ಶಾಸನ ಸಂಖ್ಯೆ-೬.

೩೯. ದೇವರಕೊಂಡಾರೆಡ್ಡಿ, ಕೆ.ಜಿ.ಭಟ್‌ಸೂರಿ, ಕಲವೀರ ಮನ್ವಾಚಾರ, ಪರಮಶಿವಮೂರ್ತಿ (ಸಂ)., ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೩, ಹಂಪಿ ಶಾಸನಗಳು, ಶಾಸನ ಸಂಖ್ಯೆ-೫೫.

೪೦. ದೇವರಕೊಂಡಾರೆಡ್ಡಿ, ಕೆ.ಜಿ.ಭಟ್‌ಸೂರಿ, ಕಲವೀರ ಮನ್ವಾಚಾರ, ಪರಮಶಿವಮೂರ್ತಿ (ಸಂ)., ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೩, ಹಂಪಿ ಶಾಸನಗಳು, ಶಾಸನ ಸಂಖ್ಯೆ-೫೫.

೪೧. ದೇವರಕೊಂಡಾರೆಡ್ಡಿ, ಕೆ.ಜಿ.ಭಟ್‌ಸೂರಿ, ಕಲವೀರ ಮನ್ವಾಚಾರ, ಪರಮಶಿವಮೂರ್ತಿ (ಸಂ)., ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೩, ಹಂಪಿ ಶಾಸನಗಳು, ಮುನ್ನುಡಿಯಿಂದ.

೪೨. ದೇವರಕೊಂಡಾರೆಡ್ಡಿ, ಕೆ.ಜಿ.ಭಟ್‌ಸೂರಿ, ಕಲವೀರ ಮನ್ವಾಚಾರ, ಪರಮಶಿವಮೂರ್ತಿ (ಸಂ)., ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೩, ಹಂಪಿ ಶಾಸನಗಳು, ಮುನ್ನುಡಿಯಿಂದ.

೪೩. ದೇವರಕೊಂಡಾರೆಡ್ಡಿ, ಕೆ.ಜಿ.ಭಟ್‌ಸೂರಿ, ಕಲವೀರ ಮನ್ವಾಚಾರ, ಪರಮಶಿವಮೂರ್ತಿ (ಸಂ)., ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೩, ಹಂಪಿ ಶಾಸನಗಳು, ಶಾಸನ ಸಂಖ್ಯೆ-೮೯.

೪೪. ದೇವರಕೊಂಡಾರೆಡ್ಡಿ, ಕೆ.ಜಿ.ಭಟ್‌ಸೂರಿ, ಕಲವೀರ ಮನ್ವಾಚಾರ, ಪರಮಶಿವಮೂರ್ತಿ (ಸಂ)., ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೩, ಹಂಪಿ ಶಾಸನಗಳು, ಶಾಸನ ಸಂಖ್ಯೆ-೯೦.

೪೫. ದೇವರಕೊಂಡಾರೆಡ್ಡಿ, ಕೆ.ಜಿ.ಭಟ್‌ಸೂರಿ, ಕಲವೀರ ಮನ್ವಾಚಾರ, ಪರಮಶಿವಮೂರ್ತಿ(ಸಂ)., ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೩, ಹಂಪಿ ಶಾಸನಗಳು, ಶಾಸನ ಸಂಖ್ಯೆ-೯೧.

೪೬. ಮಂಜುನಾಥಯ್ಯ ಟಿ.ಎಂ., ಮಾಲ್ಯವಂತ ಪರ್ವತ-ಒಂದು ಅಧ್ಯಯನ, ಪು. ೫೭.

೪೭. ದೇವರಕೊಂಡಾರೆಡ್ಡಿ, ಕೆ.ಜಿ.ಭಟ್‌ಸೂರಿ, ಕಲವೀರ ಮನ್ವಾಚಾರ, ಪರಮಶಿವಮೂರ್ತಿ(ಸಂ)., ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧, ಬಳ್ಳಾರಿ ಜಿಲ್ಲೆ, ಸಿರುಗುಪ್ಪ ಶಾಸನ ಸಂಖ್ಯೆ-೪೦.

೪೮. ದೇವರಕೊಂಡಾರೆಡ್ಡಿ, ಕೆ.ಜಿ.ಭಟ್‌ಸೂರಿ, ಕಲವೀರ ಮನ್ವಾಚಾರ, ಪರಮಶಿವಮೂರ್ತಿ(ಸಂ)., ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧, ಬಳ್ಳಾರಿ ಜಿಲ್ಲೆ, ಬಳ್ಳಾರಿ, ಶಾಸನ ಸಂಖ್ಯೆ-೨೪.

* ಈ ಉಲ್ಲೇಖಗಳು ಹಂಪಿಯ ನದಿ ದಡದ ಪಕ್ಕದಲ್ಲಿ, ಗಾಯತ್ರಿ ಪೀಠದ ಸುತ್ತಮುತ್ತಲ ಪ್ರದೇಶದಲ್ಲಿ, ವಿರೂಪಾಕ್ಷ ದೇವಸ್ಥಾನದ ಆಜುಬಾಜಿನಲ್ಲಿ ಮತ್ತು ಆವರಣದಲ್ಲಿ ಕಂಡು ಬರುತ್ತವೆ. ವಿಸ್ತೃತ ಅಧ್ಯಯನಕ್ಕಾಗಿ ಕನ್ನಡ ವಿಶ್ವವಿದ್ಯಾಲಯವು ಪ್ರಕಟಿಸಿರುವ ಶಾಸನ ಸಂಪುಟವನ್ನು ನೋಡಬಹುದು.

ಅಧ್ಯಾಯ – ಐದು

## ಪುರಾಣಗಳಿಗೆ ಪೂರಕವಾಗಿ ಐತಿಹ್ಯಗಳು

೫.೧ ದೈವ ಪ್ರಧಾನವಾದ ಐತಿಹ್ಯಗಳು

೫.೨ ಸ್ಥಳ ಪ್ರಧಾನವಾದ ಐತಿಹ್ಯಗಳು

೫.೩ ವ್ಯಕ್ತಿ ಪ್ರಧಾನವಾದ ಐತಿಹ್ಯಗಳು

## ಅಧ್ಯಾಯ-ಐದು

# ಪುರಾಣಗಳಿಗೆ ಪೂರಕವಾಗಿ ಐತಿಹ್ಯಗಳು

ಲಿಖಿತ ಪರಂಪರೆಯನ್ನು ಅವಲಂಬಿಸಿ ಬಹುಸಂಖ್ಯಾತ ಜನಸಮುದಾಯದ ಭಾವನೆಗಳನ್ನು ಸಂಪೂರ್ಣ ಕಡೆಗಣಿಸಿದ ಇತಿಹಾಸ ನಮ್ಮ ಮುಂದಿದೆ. ಆದರೂ ನಾವು ಇಲ್ಲಿಯವರೆಗೆ ಅಲ್ಲಿರುವ ಕೊರತೆಗಳನ್ನು ತುಂಬಿಕೊಳ್ಳಲು ಸಾಧ್ಯವಾಗಿಲ್ಲ. ಏಕೆಂದರೆ ಅಲಿಖಿತ ಇತಿಹಾಸಗಳು ಅಪರಿಪೂರ್ಣ, ಪಾರ್ಶ್ವಿಕ ಮತ್ತು ಅರ್ಧಸತ್ಯಗಳನ್ನು ಒಳಗೊಂಡಿರುತ್ತವೆ ಎಂದು ಕಡೆಗಣಿಸುತ್ತಲೇ ಬರಲಾಗಿದೆ. ಆದರೆ ಎಷ್ಟೋ ಸಂದರ್ಭದಲ್ಲಿ ನಮಗೆ ಗೊತ್ತಿರದ ಹಾಗೆಯೇ ಜನಸಮುದಾಯದ ಭಾವನೆಗಳು ಮೌಖಿಕ ಪರಂಪರೆಯಲ್ಲಿ ನಮ್ಮ ಇತಿಹಾಸ ರಚನೆಯಲ್ಲಿ ಸೇರಿಕೊಂಡಿರುತ್ತವೆ. ಅಲ್ಲದೇ ಅನೇಕಸಲ ಲಿಖಿತ ಆಧಾರಗಳು ಲಭ್ಯವಾಗದೆ ಇದ್ದಾಗ, ಇಂಥ ಮೌಖಿಕ ಆಕರಗಳೆ ಇತಿಹಾಸದ ರಚನೆಗೆ ಸಹಕಾರಿಯಾಗುತ್ತವೆ. ಇಂಥ ಐತಿಹಾಸಿಕ ಮಹತ್ವವನ್ನು ಒಳಗೊಂಡ ಐತಿಹ್ಯಗಳನ್ನು ಕಡೆಗಣಿಸುವುದು ತಪ್ಪಾಗುತ್ತದೆ. ಕೆಲವೊಂದು ಸಂದರ್ಭದಲ್ಲಿ ಎಲ್ಲಿಯೂ ಉಲ್ಲೇಖವಿರದ ಹೊಸ ವಿಷಯವನ್ನು ಮೌಖಿಕ ಇತಿಹಾಸವು ತಿಳಿಸುತ್ತದೆ.

ಮೌಖಿಕ ಆಕರಗಳಿಗೆ ಸೇರಿದಂತಹ ಐತಿಹ್ಯಗಳನ್ನು ಚಾರಿತ್ರಿಕ ರಚನೆಗೆ ಆಕರಗಳ ರೂಪದಲ್ಲಿ ಬಳಸಿಕೊಳ್ಳುವ ಅಗತ್ಯವಿದೆ. ಈ ಅಧ್ಯಾಯದಲ್ಲಿ ಬಳ್ಳಾರಿ ಪರಿಸರದ ಐತಿಹಾಸಿಕತೆಯನ್ನು ನಿರೂಪಿಸಲು ಐತಿಹ್ಯಗಳನ್ನು ಪುರಾಣಗಳಿಗೆ ಪೂರಕವಾಗಿ ನೋಡಲಾಗುತ್ತದೆ. ಪುರಾಣಗಳಿಗೂ ಐತಿಹ್ಯಗಳಿಗೂ ಕೊಡುಕೊಳ್ಳುವ ಸಂಬಂಧವಿದೆ. ಈ ಎರಡು ಪರಿಕಲ್ಪನೆಗಳು ಮೌಖಿಕ ಪರಂಪರೆಗೆ ಸಂಬಂದಿಸಿವೆ. ಆದರೆ ಅಧ್ಯಯನಕಾರರು, ಧಾರ್ಮಿಕ ಚಳುವಳಿಕಾರರು ಈ ಪರಿಕಲ್ಪನೆಗಳನ್ನು ಭಿನ್ನ ಅರ್ಥದಲ್ಲಿ ಗ್ರಹಿಸಿದ್ದಾರೆ. ಪುರಾಣವು ಅತಿಮಾನುಷ ಮತ್ತು ಪೌರಾಣಿಕ

ವ್ಯಕ್ತಿಗಳಿಗೆ ಸಂಬಂಧಿಸಿದ ಅಂಶಗಳ ಕಡೆಗೆ ಹೆಚ್ಚು ಗಮನಹರಿಸಿವೆ. ಆದರೆ ಐತಿಹ್ಯವೂ ಸಾಮಾಜಿಕ ರಚನೆಯಲ್ಲಿ ಜನಸಾಮಾನ್ಯರೆಂದು ಪರಿಗಣಿಸಿದವರ ಬದುಕನ್ನು ಒಳಗೊಂಡು ರೂಪುಗೊಂಡಿವೆ. ಆದರೂ ಮೇಲ್ವರ್ಗದ ಹಿತಾಸಕ್ತಿಯನ್ನು ಒಳಗೊಂಡ ಪುರಾಣಗಳಿಗೆ ಹೆಚ್ಚು ಮಾನ್ಯತೆ ಇದ್ದರೆ, ತಳಸಮುದಾಯಗಳ ಬದುಕನ್ನು ತನ್ನ ಗರ್ಭದಲ್ಲಿರಿಸಿಕೊಂಡ ಐತಿಹ್ಯಗಳನ್ನು ಬಹಳಷ್ಟು ಸಂದರ್ಭಗಳಲ್ಲಿ ಕಡೆಗಣಿಸಲಾಗಿದೆ. ಹೀಗಾಗಿ ಅವುಗಳಲ್ಲಿ ಬಹಳಷ್ಟು ಅಂತರ ಸೃಷ್ಟಿಯಾಗಿದೆ. ಸಮಾಜವನ್ನು ಅರ್ಥಮಾಡಿಕೊಳ್ಳಲು ಪುರಾಣಗಳಷ್ಟೆ ಐತಿಹ್ಯಗಳು ಮಹತ್ವವಾದವು. ಈ ಎರಡೂ ಪರಿಕಲ್ಪನೆಗಳನ್ನು ಭಿನ್ನ ಅರ್ಥದಲ್ಲಿ ಗ್ರಹಿಸದೆ ಒಂದಕ್ಕೊಂದು ಪೂರಕವಾಗಿ ನೋಡುವುದು ಸೂಕ್ತವೆನಿಸುತ್ತದೆ.

ಅಧ್ಯಯನ ಪ್ರಾರಂಭಕ್ಕೆ ಐತಿಹ್ಯಗಳ ಅರ್ಥ, ವ್ಯಾಖ್ಯಾನ, ಸ್ವರೂಪ ಕುರಿತು ಚರ್ಚಿಸಲಾಗಿದೆ. ತದನಂತರ ಐತಿಹ್ಯಗಳು ಯಾವಾಗ ಹುಟ್ಟಿದವು ಎನ್ನುವುದಕ್ಕಿಂತ ಅವು ಯಾವ ಮಾಹಿತಿಯನ್ನು ಒಳಗೊಂಡಿವೆ ಮತ್ತು ಅವುಗಳಿಂದ ಉಂಟಾಗುವ ಸ್ವರೂಪ ಯಾವ ಬಗೆಯದ್ದು ಎನ್ನುವುದನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಈ ಹಿನ್ನಲೆಯಲ್ಲಿ ಅವುಗಳ ಮಹತ್ವವನ್ನು ಚರ್ಚಿಸಿ, ಶಾಸನಗಳಿಗೂ ಮತ್ತು ಮೌಖಿಕ ಆಕರಗಳಿಗೂ ಇರುವ ವ್ಯತ್ಯಾಸವನ್ನು ಗುರುತಿಸಲಾಗಿದೆ.

ಹೀಗಾಗಲೇ ಐತಿಹ್ಯಗಳನ್ನು ಕುರಿತು ಅಧ್ಯಯನಕಾರರು, ಚಳುವಳಿಕಾರರು, ಬರಹಗಾರರು, ಚಿಂತಕರು ಮುಂತಾದವರು ಐತಿಹ್ಯಗಳೆಂದರೇನು ಎನ್ನುವುದನ್ನು ಕುರಿತು ಚಿಂತಿಸಿದ್ದಾರೆ. ಅವುಗಳನ್ನು ಯಾವ ದೃಷ್ಟಿಕೋನದಲ್ಲಿ ಅವರು ಗ್ರಹಿಸಿದ್ದಾರೆ ಎನ್ನುವುದನ್ನು ಸ್ಪಷ್ಟಪಡಿಸಿಕೊಳ್ಳುವುದು ಸೂಕ್ತವೆನಿಸುತ್ತದೆ. ಭಾರತೀಯ ಚಿಂತನೆಯಲ್ಲಿ ಐತಿಹ್ಯವೇ ಇತಿಹಾಸ. ಪರಂಪರೆಯಿಂದ ಬಂದ ತಿಳುವಳಿಕೆಯ ಹಿನ್ನಲೆಯಲ್ಲಿ ಸೃಷ್ಟಿಯಾದ ಚರಿತ್ರೆ ಅದು. ಇದು ಹೀಗೆಯೇ ಇತ್ತು ಎಂಬುದರ ನಿರೂಪಣೆ. ಐತಿಹ್ಯಗಳು ಸಮಕಾಲೀನ ಬದುಕಿಗೆ ಹಿರಿದಾದ ಮಹತ್ವವನ್ನು ಪ್ರಸ್ತಾಪಿಸಿಕೊಳ್ಳುತ್ತವೆ. ಲಿಂಡಾ ಅವರು ಹೇಳುವಂತೆ 'ಐತಿಹ್ಯವು ಇತಿಹಾಸಕ್ಕೆ ಸಮೀಪವರ್ತಿಯಾದದ್ದು. ಚರಿತ್ರೆಯ ನಿರ್ಮಿತಿಯಂತೆ ಇಲ್ಲಿ ಕೂಡ ಭೌತಿಕ ಆಧಾರವೊಂದನ್ನು ಅದರ ಮೂಲಸ್ವರೂಪದಲ್ಲಿಯೇ ಹಿಡಿದಿಟ್ಟುಕೊಳ್ಳಲಾಗುವುದು'. ಅನಂತರ ನಂಬಿಕೆಗಳ, ಕಲ್ಪನೆಗಳ ಆಧಾರದಿಂದ ಅವನ್ನು ಬಳಸಲಾಗುವುದು. ಆದರೆ ಯಾವುದೇ ಆಧಾರಗಳಿಲ್ಲದೆ ಐತಿಹ್ಯ ಹುಟ್ಟಿರಲಾರದು. ಅವಶೇಷ ಪಳೆಯುಳಿಕೆ, ವಸ್ತು, ವ್ಯಕ್ತಿ, ಘಟನೆ, ಸ್ಥಳ, ಕೆರೆ, ಕಟ್ಟೆ, ಗುಡ್ಡ, ಬೆಟ್ಟ, ನದಿ, ಹಳ್ಳ, ಉಡುಗೆ, ತೊಡುಗೆ, ಪ್ರಾಣಿ, ಸಸ್ಯ, ದೈವ, ವ್ಯಕ್ತಿ ಹೀಗೆ ಯಾವುದು ಬೇಕಾದರೂ ಐತಿಹ್ಯದ ವ್ಯಾಪ್ತಿಗೆ ಒಳಗಾಗಬಹುದು. ಹೀಗೆ ಭೌತಿಕ ಆಧಾರಗಳ ಹಲವು ವಿಷಯಗಳನ್ನಾಧರಿಸಿ ಆಯಾ ಪರಿಸರದ ಸಂಸ್ಕೃತಿಗನುಸಾರವಾಗಿ ಐತಿಹ್ಯಗಳು ಹುಟ್ಟಿಕೊಂಡಿವೆ. ಇಂತಹ ಐತಿಹ್ಯಗಳಿಂದ ನಮ್ಮ ಪರಂಪರೆಯನ್ನು ಅರ್ಥಮಾಡಿಕೊಳ್ಳಲು ಸಹಾಯಕವಾಗುತ್ತದೆ.

ಐತಿಹ್ಯಗಳೆಂದರೇನು?. ಎನ್ನುವುದನ್ನು ಕುರಿತು ವಿಭಿನ್ನ ವ್ಯಾಖ್ಯಾನಗಳನ್ನು ವಿದ್ವಾಂಸರು ಮಂಡಿಸಿದ್ದಾರೆ. ಅವುಗಳನ್ನು ಎರಡು ಅಭಿಪ್ರಾಯಗಳ ಹಿನ್ನಲೆಯಲ್ಲಿ ಈ ಮುಂದಿನಂತೆ ನೋಡಬಹುದಾಗಿದೆ. ದೇ.ಜವರೇಗೌಡರವರ ಪ್ರಕಾರ ನಡೆಯಿತೆಂದು ಹೇಳಲಾದ ಘಟನೆಗಳ ಸುತ್ತ ಹುಟ್ಟಿಕೊಳ್ಳುವ ಕಟ್ಟುಕತೆಗಳೆ ಐತಿಹ್ಯಗಳಾಗುತ್ತವೆ. ಎ.ವಿ.ನಾವಡರ ಪ್ರಕಾರ 'ಐತಿಹ್ಯದ ಬಗೆಗೆ ಈ ಕೆಳಗಿನಂತೆ ವ್ಯಾಖ್ಯಾನಿಸುತ್ತಾರೆ "ನಡೆಯಿತೆಯೆಂದು ಹೇಳಲಾದ ವ್ಯಕ್ತಿ, ಸ್ಥಳ, ಘಟನೆಗಳ ಸುತ್ತ ಹುಟ್ಟಿಕೊಳ್ಳುವ ಕಟ್ಟುಕಥೆ". ಪುರುಷೋತ್ತಮ ಬಿಳಿಮಲೆಯವರ ಪ್ರಕಾರ, "History becames much more excting and intresting when we read stories of what people said and did. No one knows if house stories are true. But they are generally bhiend to be true, they are legends"[೧]ಎಂಬುದಾಗಿ ವಿಶ್ಲೇಷಿಸಿದ್ದಾರೆ. A.K.ಘೋಷ್ ಅವರು ಹೀಗೆ ಹೇಳಿದ್ದಾರೆ, Legends tell us not only what people did but whey they did it? whe see the ideons behind their actons. ರಾಜಪ್ಪ ದಳವಾಯಿಯವರು ತಮ್ಮ ಕನ್ನಡ ಸಾಹಿತ್ಯ ಕೋಶ(ಪುಟ. ೫೦೨)ದಲ್ಲಿ ಐತಿಹ್ಯ ಕುರಿತು ಹೀಗೆ ವ್ಯಾಖ್ಯಾನಿಸಿದ್ದಾರೆ. "ಜಾನಪದದ ಅತಿ ಮುಖ್ಯ ಪ್ರಕಾರಗಳಲ್ಲೊಂದಾದ ಐತಿಹ್ಯವು ವಾಸ್ತವವಾಗಿ ನಡೆದುದೇ ಎಂದು ನಂಬಿಕೊಂಡು ಬಂದಿರುವ ಅಸಾಮಾನ್ಯ ಘಟನೆಯೊಂದರ ಕಥೆಯೇ ಐತಿಹ್ಯವೆನಿಸುವುದು. ಪ್ರಾಚೀನ ಕಾಲದ ಯಾವುದೇ ಒಂದು ಸಣ್ಣ ಚಾರಿತ್ರಿಕ ಘಟನೆಯ ಸುತ್ತ ಅದ್ಭುತವಾದ ಸನ್ನಿವೇಶಗಳು ಬೆಳೆದು ತಲೆಮಾರುಗಳ ಮೂಲಕ ಹರಿಯುವ ಕಥೆಯಾಗಿ ರೂಪಗೊಂಡರೆ ಅಂಥವನ್ನು ಐತಿಹ್ಯವೆನ್ನಲಾಗುತ್ತದೆ". ಬಾಗ್ಸನ್‌ರವರ ಪ್ರಕಾರ "ಲೇಜೆಂಡ್ ಎಂದರೆ ನಿರ್ದಿಷ್ಟ ವ್ಯಕ್ತಿ, ಸ್ಥಳ, ವಸ್ತುಗಳಿಗೆ ಸಂಬಂಧಪಟ್ಟ ಕಥೆ ಎನ್ನುವ ಮಾತು ದಂತಕಥೆ ಮತ್ತು ಐತಿಹ್ಯದ ಪದದ ಅರ್ಥ ಬರುವುದು ಸಹಜವಾಗಿದೆ ಎಂದಿದ್ದಾರೆ". ಮೇಲಿನ ವ್ಯಾಖ್ಯಾನಗಳನ್ನು ಗಮನಿಸಿದಾಗ ಐತಿಹ್ಯವೆಂದರೆ ಕೆಲವರು ಕತೆ, ಕಟ್ಟುಕತೆ ಎನ್ನುತ್ತಾರೆ. ಇತಿಹಾಸವೆ ಇರಲಿ, ಪುರಾಣವೆ ಇರಲಿ, ಇವೆಲ್ಲವು ಕಟ್ಟಿದ ಕತೆಗಳೆ(ಕಟ್ಟುವ ವಿಧಾನಗಳಲ್ಲಿ ವ್ಯತ್ಯಾಸವಿದೆ). ಆದರೆ ಇವುಗಳನ್ನು ಬುದ್ದಿವಂತರು, ಸಮಾಜದಲ್ಲಿ ಮೇಲ್‌ಸ್ತರದಲ್ಲಿರುವವರು ಹೇಳಿದರೆ ಅದು(ಚರಿತ್ರೆ, ಪುರಾಣ) ಸತ್ಯಘಟನೆ ಎನಿಸುತ್ತದೆ. ಆದರೆ ಸಾಮಾನ್ಯ ಜನರು ತಮ್ಮ ಮೌಖಿಕ ಪರಂಪರೆಯಿಂದ ಬಂದ ಐತಿಹ್ಯಗಳನ್ನು ಕಟ್ಟುಕತೆಗಳೆಂದು ಗ್ರಹಿಸಿ, ಅವುಗಳನ್ನು ಕೆಳಸ್ತರದವುಗಳು ಎನ್ನುವಂತ ಮನೋಭಾವನೆಯನ್ನು ರೂಪುಗೊಳ್ಳಲು ಅವು ಒತ್ತಾಯಿಸುತ್ತವೆ.

ಆದರೆ, ಭಿನ್ನ ಅರ್ಥದಲ್ಲಿ ಐತಿಹ್ಯಗಳ ಮಹತ್ವವನ್ನು ಕೆಲವು ವಿದ್ವಾಂಸರು ವ್ಯಾಖ್ಯಾನಿಸಿದ್ದಾರೆ. ಶಿವರಾಂ ಕಾರಂತರು ಚರಿತ್ರೆ ಮತ್ತು ಪುರಾಣ, ಐತಿಹ್ಯಗಳನ್ನು ಕುರಿತು

ಸಿರಿಗನ್ನಡ ಅರ್ಥಕೋಶ(ಪುಟ. ೭೭)ದಲ್ಲಿ "ಇತಿಹಾಸಕ್ಕೆ ಸಂಬಂಧಿಸಿದ ಚರಿತ್ರೆ" ನಾವು ನಡೆದು ಹೋದ ಘಟನಾ ಚರಿತ್ರೆ, ಪುರಾಣ ಮತ್ತು ಐತಿಹ್ಯ ರೂಪದಲ್ಲಿ ಗುರುತಿಸಲೂಬಹುದು ಎನ್ನುತ್ತಾರೆ. ಎಂ.ಬಿ.ನೇಗಿನಹಾಳರು ತಮ್ಮ 'ನೇಗಿನಹಾಳ ಪ್ರಬಂಧಗಳು'(ಪು.೨೭೩) ಕೃತಿಯಲ್ಲಿ ಐತಿಹ್ಯವೆಂದರೆ "ವ್ಯಕ್ತಿ ಸ್ಥಳ, ಘಟನೆಯೊಂದರ ಸುತ್ತ ಸಂಪ್ರದಾಯಿಕವಾಗಿ ಮತ್ತು ಯಾವುವೋ ಮೂಲಸಂಗತಿಗಳ ಆಧಾರದ ಮೇಲೆ ಬೆಳೆದು ಬಂದ ಕಥನ" ಎನ್ನುತ್ತಾರೆ. ಜೀ.ಶಂ. ಪರಮಶಿವಯ್ಯನವರು ಕರ್ನಾಟಕ ಜಾನಪದ ಕೃತಿಯಲ್ಲಿ(ಪಟ.೩೦೬) "ಕುಡಿಯುವ ನೀರಿನ ಬಾವಿ ಇಲ್ಲದ ಊರು ಹೇಗೆ ಸಾಧ್ಯವಿಲ್ಲವೋ ಹಾಗೆಯೇ ಐತಿಹ್ಯವಿಲ್ಲದ ಊರು ಇಲ್ಲದಿರಲು ಸಾಧ್ಯವಿಲ್ಲ' ಎನ್ನುತ್ತಾರೆ. ಮಚ್ಚಮಲೆ ಶಂಕರನಾರಯಣರಾವ್‌ರವರು 'ಪರಂಪರಾಗತ ವೃತ್ತಾಂತ'ವೇ ಐತಿಹ್ಯವೆಂದಿದ್ದಾರೆ. ಬಸವರಾಜ ಪೋಲಿಸ್ ಪಾಟೀಲರವರು 'ಒಬ್ಬ ವ್ಯಕ್ತಿ ದೈವ ಶಕ್ತಿಯಿಂದ ಯಾರೂ ಮಾಡದ ಕಾರ್ಯವನ್ನು ಮಾಡಿ ತೋರಿಸಿದಾಗ ಜನ ಆತನಲ್ಲಿ ಭಯ, ಭಕ್ತಿ, ನಿಷ್ಠೆ ತಾಳುತ್ತಾರೆ. ಇಂತಹ ವ್ಯಕ್ತಿಗಳ ಹೆಸರಿನಲ್ಲಿ ಐತಿಹ್ಯ ಸೃಷ್ಟಿಯಾಗುತ್ತವೆ' ಎನ್ನುತ್ತಾರೆ. ಐತಿಹ್ಯವೆಂದರೆ ಪರಂಪರೆಯಿಂದ ಬಂದಿರುವುದು, ಪುರಾಣ ಚರಿತ್ರೆ ಪ್ರಮಾಣವಿಲ್ಲದೆ ಪರಂಪರೆಯಿಂದ ಬಂದ ಮಾತು ಹೇಳುವುದು ಐತಿಹ್ಯಂ ಇತಿಹಾಸವೆನಿಸುವುದು ಎಂದು ಕನ್ನಡ ಸಾಹಿತ್ಯ ಪರಿಷತ್ ನಿಘಂಟು(ಪುಟ.೧೧೭೬)ನಲ್ಲಿ ಉಲ್ಲೇಖವಾಗಿದೆ. ಐತಿಹ್ಯವು ಇತಿಹದಿಂದ ಬಂದಿತೆಂದು ಹೇಳಿ ಅದಕ್ಕೆ "oral tradition, a legal actual"ಎಂದು ಕಿಟಲ್ ನಿಘಂಟು(ಪುಟ. ೨೯)ನಲ್ಲಿ ಅರ್ಥ ಕೊಟ್ಟಿದ್ದಾರೆ. ಈ ವ್ಯಾಖ್ಯಾನಗಳನ್ನು ಗಮನಿಸಿದಾಗ ಐತಿಹ್ಯಗಳು ಯಾವುದೇ ಅಭೌತಿಕವಾದ ವಸ್ತುವಿನೊಡನೆ ಹೋಲಿಸಿಕೊಂಡು ಈ ನಾಡಿನ ಚರಿತ್ರೆ, ಸಂಸ್ಕೃತಿ, ಧರ್ಮ ಮುಂತಾದ ವಿಷಯಗಳನ್ನು ಕಟ್ಟಿಕೊಡುವಲ್ಲಿ ಯಶಸ್ವಿಯಾಗಿವೆ. ಹಾಗೆಯೇ ಈ ಮೇಲಿನ ವ್ಯಾಖ್ಯಾನಗಳು ಜಾನಪದ, ಜನಪದ ಆಕರಗಳಂಥಹ ಮೌಖಿಕ ಸಂಪ್ರಾದಾಯದಲ್ಲಿ ನಂಬಿಕೆಯಿಂದ ಬಂದಿವೆ ಎಂದು ತಿಳಿದುಬರುತ್ತದೆ. ಆದರೆ ಒಂದು ನಾಡಿನ ಒಟ್ಟಾರೆ ಚರಿತ್ರೆ ರಚಿಸಲು ಮೌಖಿಕ ಆಕರಗಳು ಬೇಕಾಗುತ್ತವೆ. ಈ ಹಿನ್ನಲೆಯಲ್ಲಿ ಮೌಖಿಕ ಆಕರಗಳಾದಂತಹ ಐತಿಹ್ಯಗಳಲ್ಲಿರುವ ಸಂಗತಿಗಳು ಲಿಖಿತ ಆಕರಗಳಂತಹ ಶಾಸನಗಳಲ್ಲಿಯೂ ಕಾಣಸಿಗುತ್ತವೆ. ಹೀಗಾಗಿ ಇತಿಹಾಸ ನಿರ್ಮಿತಿಗೆ ಮೌಖಿಕ ಆಕರಗಳ ಬಳಕೆಯಿಂದ ನಿಖರವಾದ ಚರಿತ್ರೆ ಕಟ್ಟಲು ಸಾಧ್ಯ.

ಇಂದಿನ ಆಧುನಿಕ ವಿಜ್ಞಾನ ತಂತ್ರಜ್ಞಾನದಂತಹ ಸಂದರ್ಭದಲ್ಲಿಯೂ ನಾವು ಹಲವಾರು ಅಗೋಚರ ವಿಷಯಗಳಾದ ದೇವಾನುದೇವತೆಗಳು ಮತ್ತು ಧಾರ್ಮಿಕ ವಿಚಾರಗಳ ಕುರಿತಾದ ನಂಬಿಕೆಗಳು ಇನ್ನೂ ಜೀವಂತವಾಗಿವೆ. ಶ್ರೇಣಿಕೃತ ಸಾಮಾಜಿಕ ವ್ಯವಸ್ಥೆಯಲ್ಲಿ ಕೆಳವರ್ಗಗಳ ಜನರಿಂದ ಮೇಲ್‌ವರ್ಗದ ಜನರವರೆಗೆ ಮತ್ತು ಅತ್ಯಂತ ಕೆಳಸ್ತರದ ವ್ಯಕ್ತಿಗಳಿಂದ ಅತ್ಯಂತ

ಮೇಲ್‌ಸ್ತರದ ವ್ಯಕ್ತಿಗಳು ಅವುಗಳನ್ನು ಪೂಜಿಸಿ, ನಂಬಿಕೊಂಡು ಆಚರಿಸುತ್ತಿರುವುದು ಇಂದಿಗೂ ಕಂಡುಬರುತ್ತದೆ. ದೇವ, ದೇವತೆಗಳು ಜನರಲ್ಲಿರುವ ಭಯ, ಭಕ್ತಿ, ನಂಬಿಕೆ, ಇಂತಹ ಅಂಶಗಳೇ ಇಲ್ಲದಿದ್ದರೆ ಈ ಮಾನವನ ಉಳಿವಿನ ಪ್ರಶ್ನೆ ಬರುತ್ತದೆ. ಏಕೆಂದರೆ ಯಾವುದೇ ವ್ಯಕ್ತಿ ತಾನು ನಂಬಿರುವ ಅಗೋಚರವಾದ, ಅಭೌತಿಕವಾದ ವಸ್ತುವಿಗೆ ತನ್ನನ್ನು ಸಮರ್ಪಸಿಕೊಂಡಿರುತ್ತಾನೆ. ತಾನು ನಂಬಿಕೊಂಡು ಬಂದಿರುವಂತಹ ಅಂಶಗಳನ್ನು ಮುಂದಿನ ಜನರಿಗೆ ಉಡುಗೊರೆಯಾಗಿ ಕೊಟ್ಟಿರುತ್ತಾನೆ. ಇಂತಹ ವಸ್ತುಗಳಿಂದ ಪ್ರತಿಯೊಬ್ಬ ವ್ಯಕ್ತಿಯೂ ಅವುಗಳಿಗೆ ಗೌರವ ಕೊಟ್ಟು ಬದುಕುತ್ತಾನೆ. ಇಂದಿನ ಆಧುನಿಕ ಯುಗದ ಸಂದರ್ಭದಲ್ಲಿಯೂ ಜನರು ಹೀಗಿರುವಾಗ ಇನ್ನೂ ಪೂರ್ವಕಾಲದ ಮಾನವನು ಯಾವ ರೀತಿ ಇರಬಹುದು ಎಂದು ಊಹಿಸಲೂಬಾರದು. ಹಿಂದಿನ ಜನರು ಅಗೋಚರ ಶಕ್ತಿಗಳಿಗೆ ತಮ್ಮನ್ನು ಸಮರ್ಪಿಸಿಕೊಂಡು ಅವುಗಳನ್ನು ದೈವತ್ವಕ್ಕೇರಿಸಿ ತನ್ನ ಜೀವನವೇ ಅವುಗಳಿಂದ ಬಂದಿರುವುದು ಎಂದು ತಿಳಿದಿದ್ದರು. ಹಿಂದಿನ ಮಾನವ ಜನಾಂಗ ಕೇವಲ ಒಂದು ಕಲ್ಲಿನ ಗುರುತು ಕಂಡರೂ ಸಾಕು ಅದು ಭೀಮನ ಹೆಜ್ಜೆ ಎಂದೇ ನಂಬಿಕೊಂಡು ಬಂದಿದ್ದಾರೆ. ಒಂದು ಉದ್ದನೆಯ ಸಾಲು ಬಂಡೆಯ ಮೇಲೆ ಕಂಡರೂ ಅದು ಸೀತೆಯ ಸೆರಗು ಎಂದು ಹೇಳುತ್ತಿದ್ದರು. ಇಂತಹ ನೂರಾರು ಅಂಶಗಳು, ಹೇಳಿಕೆಗಳು, ಅಭಿಪ್ರಾಯಗಳು ಅಂದಿನ ಬದುಕಿನೊಂದಿಗೆ ಹುಟ್ಟುವುದು ಸಹಜವೇ ಆಗಿತ್ತು. ಈ ತರಹದ ವಿಷಯಗಳು ಅಂದಿನ ಜನರ ಮೌಖಿಕ ಇತಿಹಾಸ. ಇವುಗಳನ್ನು ಇಂದು ಐತಿಹ್ಯಗಳು ಎನ್ನುತ್ತಾರೆ. ತದನಂತರ ರಾಜ–ಮಹಾರಾಜರ ಆಳ್ವಿಕೆಯಲ್ಲಿ ಪುರೋಹಿತಶಾಹಿಗಳ ಪ್ರಭಾವದಿಂದ ಇವುಗಳು ಲಿಖಿತ ರೂಪ ಪಡೆದು ಶಾಸನಗಳಲ್ಲಿ ದಾಖಲಿತವಾದವು. ಏಕೆಂದರೆ ರಾಜರನ್ನು ಹೊಗಳಿ ಅವರಿಂದ ರಾಜಮರ್ಯಾದೆ ಪಡೆದು, ಹಿಂಬಾಗಿಲಿನಿಂದ ಆಡಳಿತ ನಡೆಸುವ ಉದ್ದೇಶವಿತ್ತೆಂಬುದು ಸ್ಪಷ್ಟವಾಗುತ್ತದೆ. ಇಂತಹ ನೂರಾರು ಸಂಗತಿಗಳು ಬಳ್ಳಾರಿ ಪರಿಸರದ ತುಂಬ ಸಿಗುತ್ತವೆ. ಹೆಚ್ಚಾಗಿ ಈ ಪ್ರದೇಶದಲ್ಲಿ ಮೌಖಿಕ ಸ್ವರೂಪದಲ್ಲಿ ಐತಿಹ್ಯಗಳು ಕಂಡುಬರುತ್ತವೆ. ಆದರೂ ರಾಜ– ಮಹಾರಾಜರು ಹಾಕಿಸಿದಂತಹ ಕೆಲವು ಶಾಸನಗಳಲ್ಲಿ ಇವುಗಳು ದಾಖಲೆಗೊಂಡಿವೆ. ಇದಕ್ಕೆ ನಿದರ್ಶನವಾಗಿ ಉಚ್ಚಂಗಿದುರ್ಗದ ಶಾಸನವನ್ನು ನೋಡಬಹುದು.

ಬಳ್ಳಾರಿ ಪರಿಸರದ ಪಶ್ಚಿಮ ಮತ್ತು ಉತ್ತರ ಭಾಗಗಳಲ್ಲಿ ತುಂಗಾಭದ್ರೆಯು ಹರಿಯುತ್ತಿರುವುದರಿಂದ ಸಹಜವಾದ ನಿಸರ್ಗ ಎಲ್ಲೆಯನ್ನು ಹೊಂದಿದೆ. ಈ ಪ್ರದೇಶವನ್ನು ಅಶೋಕನಿಂದ ಹಿಡಿದು ಶಾತವಾಹನರು, ಕದಂಬರು, ಚಾಲುಕ್ಯರು, ನೊಳಂಬರು, ಪಾಂಡ್ಯರು, ಹೊಯ್ಸಳರು, ವಿಜಯನಗರದ ಅರಸರು, ತದನಂತರ ಪಾಳೆಗಾರರಾದ ಬಲ್ಲುಕುಂದೆ ಪ್ರಭುಗಳು, ಹರಪನಹಳ್ಳಿ ಪಾಳೆಗಾರರು ಆಳ್ವಿಕೆ ನಡೆಸಿದ್ದಾರೆ. ಇವರ ಆಡಳಿತದ ಅವಧಿಯಲ್ಲಿ ಹಾಕಿಸಿದ

ಹಲವಾರು ಶಾಸನಗಳು ನಮಗೆ ಇಂದು ದೊರೆತಿವೆ. ಇವುಗಳಲ್ಲಿ ಹೆಚ್ಚಾಗಿ ಕಂಡುಬರುವುದು ದಾನಶಾಸನಗಳು. ತದನಂತರ ಅವರ ವಂಶ ಕುರಿತ ಶಾಸನಗಳು ಮತ್ತು ಅವರ ಮಾಡಿದ ಯುದ್ಧಗಳ ನೆನಪಿಗೋಸ್ಕರ ಹಾಕಿಸಿದಂತಹ ವೀರಗಲ್ಲು, ಮಾಸ್ತಿಗಲ್ಲುಗಳು ಈ ಪರಿಸರದಲ್ಲಿ ಕಂಡುಬಂದಿವೆ. ಈ ಶಾಸನಗಳನ್ನು ಅಧ್ಯಯನಕಾರರು ದಾನ, ಪ್ರಸಸ್ತಿ, ವೀರಗಲ್ಲು, ಮಾಸ್ತಿಗಲ್ಲು ಮುಂತಾದವುಗಳೆಂದು ವಿಭಾಗಿಸಿಕೊಂಡಿದ್ದಾರೆ. ಈ ವಿಭಾಗ ಕ್ರಮದಲ್ಲಿ ಐತಿಹ್ಯಗಳನ್ನು ಕೆಲವು ಮುಖ್ಯ ಸಂಗತಿಗಳ ಹಿನ್ನಲೆಯಲ್ಲಿ ಮಾತ್ರ ನೋಡಲಾಗಿದೆ. ಆದರೆ ಈ ದಾಖಲೆಗಳಲ್ಲಿ ದಾಖಲಾಗಿರುವ ಸಂಗತಿಗಳಲ್ಲಿ ಇನ್ನೂ ಅನೇಕ ಸಂಗತಿಗಳು ಗೌಣವಾಗಿವೆ. ಅವುಗಳನ್ನು ಪರಿಶೀಲಿಸುವ ಅಗತ್ಯವಿದೆ. ಉದಾಹರಣೆಗೆ, ದಾನಶಾಸನಗಳಲ್ಲಿ ದಾನ ಕೊಟ್ಟಿರುವ ಉಲ್ಲೇಖ ಮಾತ್ರ ಇರುವುದಿಲ್ಲ. ಅದರ ಜೊತೆಗೆ ದಾನ ಕೊಟ್ಟವರು ತಮ್ಮ ಅನನ್ಯತೆಯನ್ನು ಪೌರಾಣಿಕ ಅಂಶಗಳೊಂದಿಗೆ ಮತ್ತು ಸಮಕಾಲೀನ ಐತಿಹ್ಯದಂತಹ ಅಂಶಗಳೊಂದಿಗೆ ಸಮೀಕರಿಸಿಕೊಂಡಿರುವ ಉಲ್ಲೇಖಗಳಿರುತ್ತವೆ. ಇಂತಹ ಗೌಣವಾಗಿರುವ ಅಂಶಗಳ ಕಡೆಗೆ ಹೆಚ್ಚಿನ ಗಮನಹರಿಸುವುದರಿಂದ ಇಂದಿನ ಚರಿತ್ರೆಯಲ್ಲಿ ಕಣ್ಮರೆಯಾಗಿರುವ ಅಂಶಗಳ ಮೇಲೆ ಬೆಳಕು ಚೆಲ್ಲಬಹುದು.

ಈ ಪರಿಸರದಲ್ಲಿರುವ ಪ್ರತಿಯೊಂದು ಹಳ್ಳಿಗಳಿಗೂ ಒಂದೊಂದು ಐತಿಹ್ಯಗಳಿವೆ. ಇವುಗಳು ಪ್ರಾಚೀನ ಕಾಲದಿಂದ ಇಂದಿನವರೆಗೆ ಹಾಗೆಯೇ ಉಳಿದುಕೊಂಡು ಬಂದಿವೆ. ಇಂತಹ ಐತಿಹ್ಯಗಳನ್ನು ನೋಡಿದರೆ ನಮ್ಮ ಪೂರ್ವಜರ ಜೀವನವೇ ನಮ್ಮ ಕಣ್ಣೆದುರಿಗೆ ಬಂದು ನಿಲ್ಲುತ್ತದೆ. ಮೊದಲು ಪೌರಾಣಿಕ ರೂಪ ಪಡೆದಿದ್ದಂತಹ ಸ್ಥಳಗಳು ಮುಂದೆ ಕಾಲಾಂತರದಲ್ಲಿ ಐತಿಹ್ಯಗಳಾದವು. ಇವುಗಳು ಪುರಾಣ ಪರಿಕಲ್ಪನೆಗೆ ಪೂರಕವಾದಂತಹವುಗಳೆ. ಸಾಮಾನ್ಯ ವ್ಯಕ್ತಿಗಳಿಂದ ಪ್ರಮುಖ ವ್ಯಕ್ತಿಗಳೊಡನೆ ಮತ್ತು ಸ್ಥಳದ ಜೊತೆ ಐತಿಹ್ಯಗಳು ಗುರುತಿಸಿಕೊಂಡವು. ಉದಾಹರಣೆಗೆ ತೆನಾಲಿರಾಮ, ಕುಮಾರರಾಮ, ವಿರೂಪಾಕ್ಷಿ ದೇವಾಲಯದ ಆವರಣದಲ್ಲಿರುವ ತಳವಾರಪ್ಪನ ಕಲ್ಲು, ಮುಂತಾದ ವ್ಯಕ್ತಿಗಳ ಕುರಿತ ಐತಿಹ್ಯಗಳನ್ನು ಈ ಹಿನ್ನಲೆಯಲ್ಲಿ ನೋಡಬಹುದು.

ಈಗಾಗಲೇ ನಿರ್ಮಾಣಗೊಂಡ ಚರಿತ್ರೆಯು ಇನ್ನೂ ಗಟ್ಟಿಗೊಳ್ಳಬೇಕಾದರೆ ಮೌಖಿಕ ಅಂಶಗಳನ್ನು ಸರಿಯಾದ ರೀತಿಯಲ್ಲಿ ಅರ್ಥೈಸಿಕೊಳ್ಳಬೇಕು. ಹಾಗಾದಾಗ ಮಾತ್ರ ಕೆಳವರ್ಗದವರ ಇತಿಹಾಸವನ್ನು ಕಟ್ಟಲು ಸಾಧ್ಯ. ಕೇವಲ ಕೆಲವೇ ಕೆಲವು ವ್ಯಕ್ತಿಗಳ ಹಿತಾಸಕ್ತಿಗೋಸ್ಕರ ನಿರ್ಮಾಣವಾದ ಚರಿತ್ರೆಯಲ್ಲಿ ಬಹುಸಂಖ್ಯಾತರಾದ ಕೆಳವರ್ಗದ ಜನರ ಇತಿಹಾಸವನ್ನು ನಿರ್ಲಕ್ಷಿಸಿಕೊಂಡು ಬರಲಾಗಿದೆ. ಈ ನಿರ್ಲಕ್ಷಿಸಲ್ಪಟ್ಟ ಜನರ ಇತಿಹಾಸದ ಹಿನ್ನಲೆಯಲ್ಲಿ ಚರಿತ್ರೆ ನಿರ್ಮಾಣಮಾಡಿಸಿದರೆ ಮಾತ್ರ ನಿಜವಾದ ಚರಿತ್ರೆ ಕಟ್ಟಲು ಸಾಧ್ಯ. ಈ ಸಂದರ್ಭದಲ್ಲಿ ಮೌಖಿಕ ಪರಂಪರೆಗೆ ಸೇರಿರುವ ಪುರಾಣ ಮತ್ತು ಐತಿಹ್ಯಗಳಿಂದ ಇತಿಹಾಸದ ಅಧ್ಯಯನದಲ್ಲಿರುವ ತೊಡಕುಗಳನ್ನು ನಿವಾರಿಸಿಕೊಳ್ಳಬೇಕಾದ ಅಗತ್ಯವಿದೆ. ಏಕೆಂದರೆ ಇತಿಹಾಸದ ರಚನೆಯಲ್ಲಿ

ಐತಿಹ್ಯಗಳು ಪ್ರಮುಖವಾಗಿವೆ. ಅದರಲ್ಲೂ ಸ್ಥಳೀಯ ಚರಿತ್ರೆ ರಚನೆಯಲ್ಲಿ ಐತಿಹ್ಯಗಳ ಕೊಡುಗೆ ಅಪಾರ ಎನ್ನುವುದನ್ನು ಚರಿತ್ರೆ ನಿರ್ಮಾಣಕಾರರು ಅರ್ಥಮಾಡಿಕೊಳ್ಳಬೇಕಾಗಿದೆ.

ಪುರಾಣ-ಐತಿಹ್ಯಗಳಿಗೆ ವ್ಯತ್ಯಾಸಗಳನ್ನು ತೋರಿಸುವುದು ಸುಲಭವಲ್ಲ. ಅವುಗಳು ಒಂದಕ್ಕೊಂದು ಪೂರಕವಾಗಿ ಕಾರ್ಯನಿರ್ವಹಿಸುತ್ತವೆ. ಅದನ್ನು ಕುರಿತು ವಿವೇಚಿಸುವ ಮೊದಲು ಪುರಾಣದ ಬಗ್ಗೆ ಪ್ರಾಚೀನ ಭಾರತೀಯರ ಕಲ್ಪನೆ ಏನಿತ್ತು ಎಂಬುದನ್ನು ಸ್ಪಷ್ಟಪಡಿಸಿಕೊಳ್ಳುವುದು ಸೂಕ್ತವೆನಿಸುತ್ತದೆ. ಪುರಾಣ 'ಪುರಾ' ದಿಂದ ಬಂದಿದ್ದು 'ಪುರಾ' ಎಂದರೆ ಹಳೆಯದು(ಕನ್ನಡ ವಿಶ್ವಕೋಶ). ನಮ್ಮ ಪ್ರಾಚೀನರಿಗೆ ಇತಿಹಾಸ, ಪುರಾಣಗಳೆರಡು ವಾಸ್ತವಗಳೆ. ಆದರೆ ಐತಿಹ್ಯವು ಕಾಲಮಾನದಲ್ಲಿ ಸ್ವಲ್ಪ ಈಚೆಗೆ ನಡೆದದ್ದನ್ನು ಹೇಳಿದರೆ ಪುರಾಣ ಅದಕ್ಕಿಂತ ಬಹು ಹಿಂದೆ ನಡೆದಿದ್ದನ್ನು ಹೇಳುತ್ತದೆ. ಪುರಾಣಗಳ ಸೃಷ್ಟಿಗೆ ಭೌತಿಕ ಆಧಾರಗಳ ಅಗತ್ಯವಿಲ್ಲ. ಆದರೆ ಭೌತಿಕ ವಸ್ತುಗಳಾದ ಪ್ರಾಣಿವರ್ಗ, ಸಸ್ಯವರ್ಗ, ಮಾನವವರ್ಗ ಮತ್ತು ಅವು ಮೂರರ ಸಮನ್ವಯದ ಸಾತ್ವಿಕತೆ ಐತಿಹ್ಯಗಳ ಹುಟ್ಟಿಗೆ ಕಾರಣವಾಗುತ್ತವೆ. ಜನರ ನಂಬಿಕೆ, ಶ್ರದ್ಧೆ, ನಡವಳಿಕೆ, ಮೌಲ್ಯ, ವ್ಯವಸ್ಥೆ, ಆದರ್ಶಗಳು ಐತಿಹ್ಯಗಳನ್ನು ಸೃಷ್ಟಿಸುತ್ತವೆ. ಹಾಗಂತ ಭೌತಿಕ ವಸ್ತುಗಳ ಮಾತುಕತೆಯ ಅವಲಂಬನ ಅವಕ್ಕೆ ಬೇಡ. ಕತೆಗಳಿಗಾದರೂ ಅಷ್ಟಮೂಲ ವಸ್ತುಗಳ ಹೊಸ ಆಕೃತಿಯೊಂದನ್ನು ಪಡೆದುಕೊಂಡು ನಿರ್ದಿಷ್ಟ ಸಾತ್ವಿಕತೆಯೊಂದನ್ನು ಅಲ್ಲಿ ಪ್ರಕಟಪಡಿಸುತ್ತದೆ. ಈ ದೃಷ್ಟಿಯಿಂದ ಕತೆಗಳು ಐತಿಹ್ಯದತ್ತ ಸುಳಿದಾಡಿದರೆ ಐತಿಹ್ಯಗಳು ಚರಿತ್ರೆಯತ್ತ ವಾಲುತ್ತವೆ. ಚರಿತ್ರೆ ಬದುಕಿನ ವಾಸ್ತವತೆಯ ಅಧಿಕೃತ ನಿರೂಪಣೆಯಾಗಿದೆ. ಪುರಾಣ ವ್ಯಕ್ತಿಗಳೆಲ್ಲರೂ ಸಾಮಾನ್ಯ ಮನುಷ್ಯರಿಗಿಂತ ವಿಶಿಷ್ಟರು. ಸಾಮಾನ್ಯರಾದುದರಿಂದ ಅವರಿಗೆ ಐತಿಹ್ಯದಲ್ಲಿ ವಿಶೇಷ ಸ್ಥಾನವಿದೆ. ಪುರಾಣಗಳು ಐತಿಹ್ಯಗಳಿಗೂ ಪ್ರಾಚೀನವಾಗಿರಬೇಕೆಂಬ ಮಾತುಗಳು ಹುಟ್ಟಲು ಇದೇ ಕಾರಣವಾಗಿದೆ. ಕಾಲಮಾನದ ದೃಷ್ಟಿಯಿಂದ ಸಾಕಷ್ಟು ದೂರವನ್ನು ಕಾಪಾಡಿಕೊಂಡಿರುವ ಪುರಾಣಗಳನ್ನು ವರ್ತಮಾನಕ್ಕೆ ಒಗ್ಗಿಸಿಕೊಳ್ಳುವ ಅವಸರದಲ್ಲಿಯೂ ಐತಿಹ್ಯಗಳು ಸೃಷ್ಟಿಯಾಗುತ್ತವೆ. ತಾಳ್ತಜೆ ವಸಂತಕುಮಾರರು ಗುರುತಿಸಿದಂತೆ 'ಪುರಾಣ ವ್ಯಕ್ತಿಗಳ ನಾಡಾಡಿತನವು ಐತಿಹ್ಯವಾಗುವುದಿಲ್ಲ. ಬದಲಾಗಿ ವ್ಯತಿರಿಕ್ತ ಪ್ರಕ್ರಿಯೆ ನಡೆಯುತ್ತದೆ. ಐತಿಹ್ಯಗಳಲ್ಲಿ ಪುರಾಣ ವ್ಯಕ್ತಿಗಳು ನಾಡಾಡಿಗಳಾಗುತ್ತಾರೆ. ವರ್ತಮಾನದ ಸ್ಪರ್ಧೆ ಇರುವುದೇ ಅದಕ್ಕೆ ಬಲವಾದ ಕಾರಣ, ಜೊತೆಗೆ ಪುರಾಣ ಸಹಜವಾದ ಪಾವಿತ್ರ್ಯವೂ ಐತಿಹ್ಯದಲ್ಲಿ ಕಡಿಮೆಯಾಗುತ್ತದೆ'.

ವಿವರಣೆ, ವ್ಯಾಪ್ತಿ ದೃಷ್ಟಿಯಿಂದ ಐತಿಹ್ಯಗಳು ಪುರಾಣಕ್ಕಿಂತ ಕಿರಿದು, ಬಹುಮಟ್ಟಿಗೆ ಅವು ಒಂದು ನಿರ್ದಿಷ್ಟ ಸ್ಥಳಕ್ಕೆ ಮತ್ತು ವ್ಯಾಪ್ತಿಗೆ ಅಂಟಿಕೊಂಡಿರುತ್ತವೆ. ಭಾರತದಲ್ಲಿ ಅವು ನಿರ್ದಿಷ್ಟ ಜಾತಿ, ಬುಡಕಟ್ಟುಗಳಿಗೆ ಬದ್ಧವಾಗಿರುತ್ತವೆ. ಇಂಥ ಐತಿಹ್ಯಗಳು ತಮ್ಮ ಸೀಮಿತ ವಲಯವನ್ನು ಭೇದಿಸಿಕೊಂಡು ಹೊರ ಪ್ರಪಂಚಕ್ಕೆ ಕಾಲಿರಿಸಿದೊಡನೆ ಅವುಗಳ ಅರ್ಥವಂತಿಕೆಯನ್ನು

ಬಹಳ ತೀವ್ರವಾದ ಸವಾಲುಗಳನ್ನು ಎದುರಿಸುತ್ತದೆ. ಆಗ ಬದ್ಧತೆಯಿಂದ ತನ್ನನ್ನು ಬಿಡಿಸಿಕೊಂಡು ಐತಿಹ್ಯಗಳು ವಿಶಾಲ ಕ್ಷೇತ್ರದಲ್ಲಿ ಬದುಕುಳಿಯಬೇಕಾದರೆ ಸಾರ್ವಜನಿಕರಿಗೆ ಇಷ್ಟವಾಗುವ ರೀತಿಯಲ್ಲಿ ಬೆಳೆಯಬೇಕಾಗುತ್ತದೆ. ಕೇವಲ ಸ್ವಕೀಯವಾಗಿದ್ದು ಪ್ರತೀಕಗಳನ್ನು ಬದಲಾಯಿಸಿಕೊಂಡು ಸಾರ್ವತ್ರಿಕ ಪ್ರತೀಕಗಳಿಗೆ ಮೈ ಒಡ್ಡಿಕೊಳ್ಳಬೇಕಾಗುತ್ತದೆ. ಈ ಸಾರ್ವತ್ರೀಕರಣವು ಮೂರು ರೀತಿಯಲ್ಲಿ ಸಾಧಿತವಾಗುತ್ತದೆ. ಮೊದಲನೆಯದು ಸ್ಥಳದ ಬದ್ಧತೆಯನ್ನು, ಎರಡನೆಯದು ವ್ಯಕ್ತಿ ನಿಷ್ಠತೆಯನ್ನು, ಕೊನೆಯದು ಕಾಲದ ಬದ್ಧತೆಯನ್ನು ಮೀರುವುದು. ಈ ನಿಟ್ಟಿನಲ್ಲಿ ಐತಿಹ್ಯಗಳು ಬಯಸುವ ಭೌತಿಕ ಆಧಾರಗಳನ್ನು ಪುರಾಣಗಳು ಬಯಸುವುದಿಲ್ಲ.

ಸಾಮಾನ್ಯರ ಜೀವನ ಶಿಷ್ಟಕ್ಕಿಂತ ಬೇರೆಯಾಗಿದ್ದು ವಿಶಿಷ್ಟವಾಗಿರುವ ಅಥವಾ ಅಸಾಮಾನ್ಯವಾಗಿರುವ ವಸ್ತು ವಿಷಯಗಳೇ ಐತಿಹ್ಯ-ಪುರಾಣವಾಗಿರುತ್ತವೆ. ಯಾವುದೇ ಸಂಸ್ಕೃತಿಯು ವಿಶಿಷ್ಟವನ್ನು ತನ್ನ ಶಿಷ್ಟಕ್ಕೆ ಒಗ್ಗಿಸಿಕೊಳ್ಳಲು ಪ್ರಯತ್ನಿಸುತ್ತದೆ. ಮತ್ತು ತನಗೆ ಪರಿಶಿಷ್ಟ ಎಂದು ತೋಚಿದನ್ನು ತಿರಸ್ಕರಿಸುತ್ತದೆ. ಐತಿಹ್ಯ ಪುರಾಣಗಳು ಸಂಸ್ಕೃತಿಯ ಇಂಥ ಕೆಲಸದ ದಾಖಲೆಗಳಾಗುತ್ತವೆ. ಹೀಗೆ ಮಾಡಿಕೊಳ್ಳುವುದರಿಂದಲೇ ಚರಿತ್ರೆ ತನ್ನ ಘನತೆಯನ್ನು ಕಾದುಕೊಳ್ಳುತ್ತದೆ.

ಜನರು ತಮ್ಮ ಪರಂಪರೆಯೊಂದಿಗೆ ತಮ್ಮನ್ನು ಗುರುತಿಸಿಕೊಳ್ಳಲು ಮಾಡುವ ಪ್ರಯತ್ನಗಳಂತೆಯೂ ಕಂಡು ಬರುತ್ತದೆ. ಅಲ್ಲಿನ ಕಥಾನಾಯಕರು ಸಾಮಾನ್ಯವಾಗಿ ಸಂಸ್ಕೃತಿ ವೀರರಾಗಿದ್ದು, ಆ ಸಮುದಾಯದ ಅಶೋತ್ತರಗಳನ್ನು ವಿಸ್ತರಿಸಿದ ವ್ಯಕ್ತಿಗಳಾಗಿರುತ್ತಾರೆ. ಅಂಥವರ ನೆನೆಪು ಮತ್ತು ಕಥನಗಳಿಂದ ಜನರು ತಮ್ಮ ವರ್ತಮಾನಕ್ಕೆ ಒಂದು ಬಗೆಯ ಅರ್ಥವಂತಿಕೆಯನ್ನು ತಂದು ಕೊಳ್ಳುತ್ತಾರೆ. ಮತ್ತು ಆ ಮೂಲಕ ಸಲೀಸಾಗಿ ಪರಂಪರೆಯೊಂದಿಗೆ ತಮ್ಮನ್ನು ಜೋಡಿಸಿಕೊಳ್ಳುತ್ತಾರೆ.

ಸಾಮಾನ್ಯವಾಗಿ ಆಳುವವರ್ಗ ನಿರ್ಮಾಣ ಮಾಡಿಕೊಳ್ಳುವ ಐತಿಹ್ಯ, ಪುರಾಣಗಳು ಭಾರತೀಯ ಸಮಾಜದ ವಿಷಮತೆಯನ್ನು ಸಮರ್ಥಿಸುವಂತಿರುತ್ತವೆ. ಅವು ಶ್ರೇಣೀಕೃತ ಸಮಾಜ ವ್ಯವಸ್ಥೆಯನ್ನು ಗಟ್ಟಿ ಮಾಡಲು ಹೂಡಿದ ತಂತ್ರಗಳಂತೆ ಕಾಣುತ್ತವೆ. ಐತಿಹ್ಯ ಜನರು ನಂಬಿದ ಇತಿಹಾಸವಾದರೆ, ಪುರಾಣ ಪವಿತ್ರವೆಂದು ಭಾವಿಸಿದ ಸತ್ಯ ಕಥನ. ಹಿದೆಂದೋ ನಡೆಯಿತೆಂದು ಹೇಳಲಾದ ಘಟನೆಗಳ ಸುತ್ತ ಹುಟ್ಟಿಕೊಳ್ಳುವ ಕತೆಗಳೇ ಐತಿಹ್ಯಗಳು. ನಡೆಯಿತೆನ್ನಲಾದ ಘಟನೆಗಳಿಗೂ ಮರೆಮಾಚಿ ಅದರೊಂದಿಗೆ ದೈವಿಕ ಅಂಶಗಳು ಬೆರೆತು ನಡೆದವುಗಳೇ ಎಂಬ ಭ್ರಮೆಯನ್ನು ಹುಟ್ಟಿಸುವ ಕಥೆಗಳೇ ಪುರಾಣಗಳು. ಉದಾಹರಣೆಗೆ ಹಂಪಿ ಗೋಪುರ ಸ್ಥಾಪನೆಗೆ ಸಂಬಂಧಪಟ್ಟ ಕಥೆ ಐತಿಹ್ಯವಾದರೆ, ನಿಲ್ಲದ ಕೋಟೆಯ ಭದ್ರತೆಗಾಗಿ ತನ್ನನ್ನೇ ಬಲಿಕೊಟ್ಟು ದೈವತ್ವಕ್ಕೇರಿದ ಅಕ್ಕಮ್ಮನ ಕಥೆ ಪುರಾಣ.

ಪುರಾಣ ಮತ್ತು ಐತಿಹ್ಯಗಳ ನಡುವೆ ಪರಸ್ಪರ ಸಂಬಂದವು ಗಣನೀಯವಾಗಿದ್ದರೂ ಕ್ವಚಿತ್ತಾಗಿ ಇವೆರಡರ ನಡುವೆ ಸಂಬಂಧ ಇಲ್ಲದೆ ಇರಬಹುದು. "ಮಾನವರು ಸಂಸ್ಕೃತಿಯನ್ನು ಎತ್ತಿ ಹಿಡಿದು ಬದುಕುತ್ತಾ ಬಂದವರು. ಇವರ ಜೀವನಾನುಭವದಲ್ಲಿ ಸಂಸ್ಕೃತಿಯ ಉಳಿವು ಉದ್ಧಾರಗಳಿಗಾಗಿ ಶ್ರಮಿಸಿ ವಿನಾಶಕಾರಿ ಶಕ್ತಿಗಳನ್ನು ದಮನಮಾಡಿ ಸಮಷ್ಟಿ ಕಲ್ಯಾಣಕ್ಕಾಗಿ ಹೋರಾಡಿದ ವೀರರನ್ನು ಸಹಾ ದೇವತೆಗಳೆಂದು ಜನ ಪೂಜಿಸಲಾರಂಭಿಸಿದರು. ಈ ವೀರರ ಬದುಕು ಜನರ ಬಾಯಲ್ಲಿ ಪರಾಕ್ರಮದ ಗಾದೆಯಾಯಿತು. ಇಲ್ಲಿ ನಾವು ಆ ವೀರನ ಬಗ್ಗೆ ಕಥೆಯನ್ನು ಮಾತ್ರ ಐತಿಹ್ಯವೆಂದೂ ದೇವತೆಗಳಂತೆ ಪೂಜಿಸ ತೊಡಗಿದಾಗ ಪುರಾಣವೆಂದು ಅರ್ಥ ಮಾಡಿಕೊಳ್ಳಬಹುದು. ಪುರಾಣಗಳು ಜನರ ಧಾರ್ಮಿಕ ಮತ್ತು ಪವಿತ್ರತೆಯ ಕಡೆಗೆ ವಾಲಿಸುತ್ತವೆ. ರಚನೆ ಹಾಗೂ ಸ್ವರೂಪದ ದೃಷ್ಟಿಯಿಂದ ಪುರಾಣ ಮತ್ತು ಐತಿಹ್ಯಗಳ ನಡುವೆ ಹೆಚ್ಚಿನ ವ್ಯತ್ಯಾಸವಿಲ್ಲವಾದರೂ ಅವೆರಡನ್ನು ಸ್ಪಷ್ಟವಾಗಿ ಬೇರ್ಪಡಿಸುವುದು ಕಷ್ಟ ಎಂಬುದು ಒಪ್ಪಲೇಬೇಕು. ಅವುಗಳನ್ನು ಬೇರೆ ಬೇರೆ ಇಡುವುದು ಸಾಧ್ಯ ಮತ್ತು ಅಗತ್ಯ ಎಂಬುದು ನಿಜ. ಇಲ್ಲಿ ಪುರಾಣಗಳ ಆವರಣ ದೈವಿಕ ಪಾತ್ರಗಳು, ದೇವತೆಗಳು ಎಂಬುದು ಪುರಾಣಗಳ ಇತಿಹಾಸ ಪೂರ್ವಕಾಲ"[3] ಎಂದಿದ್ದಾರೆ. ಆದರೆ ಒಂದು ಸ್ಥಳ ವಸ್ತುವಿನ ಬಗ್ಗೆ ಪ್ರಚಲಿತವಿರುವ ಕಥೆಯೇ ಐತಿಹ್ಯವಾಗಿದೆ. ಇಲ್ಲಿ ಒಂದಿಷ್ಟು ಕಾಲಘಟ್ಟದ ಭಿನ್ನತೆಯನ್ನು ಕಾಣಬಹುದು. ಆ ಕತೆಗಳು ವಾಸ್ತವವಾಗಿ ನಿಜವಿರಬಹುದು. ಅದು ಬಹು ಹಿಂದೆ ನಡೆದ ಘಟನೆಯ ಸುತ್ತ ಕಲ್ಪಿತ ಅಂಶಗಳನ್ನು ಕಲೆಹಾಕಿಕೊಂಡು ಬೆಳೆದುಬಂದಿರಬಹುದು. ಇದಕ್ಕೆ ನಿದರ್ಶನವಾಗಿ ಸಂಡೂರು ತಾಲೂಕಿನ ಬೊಮ್ಮಘಟ್ಟ ಗ್ರಾಮದ ಬಗ್ಗೆ ಘಟನೆಯೊಂದು ನೆನಪಿಸಬಹುದು*. ಅದೇನೆ ಇರಲಿ ಜನ ಐತಿಹ್ಯ ಪುರಾಣವನ್ನು ಗಂಭೀರವಾಗಿ ತೆಗೆದುಕೊಳ್ಳುತ್ತಾರೆ. ಏಕೆಂದರೆ ಸಾಮಾನ್ಯ ಜನರ ದೃಷ್ಟಿಯಲ್ಲಿ ಅವೆರಡು ನಿಜವೇ ಆಗಿರುತ್ತವೆ. ಅವು ವಾಸ್ತವ ಬದುಕಿನ ಗಂಭೀರ ಚಿಂತನೆಗಳಾಗಿವೆ.

ಇಲ್ಲಿ ಮುಖ್ಯವಾಗಿ ಪುರಾಣಗಳ ದೀರ್ಘತೆ ಐತಿಹ್ಯಗಳಲ್ಲಿ ಇರುವುದಿಲ್ಲವಾದರೂ ಪುರಾಣ ಐತಿಹ್ಯವು ಒಂದಕ್ಕೊಂದು ಪೂರಕವಿರುವುದು ಕಂಡುಬರುತ್ತದೆ. ಶಾಸನಗಳನ್ನು ಬರೆದವರು ಪಂಡಿತರು, ಶಿಷ್ಟರು ಕೈಫಿಯತ್ತು ಬರೆದವರು, ಐತಿಹ್ಯಗಳನ್ನು ಸಾಮಾನ್ಯರು ಇಲ್ಲವೆ ಸಾಮಾನ್ಯರಿಂದ ಕೇಳಿಬರೆದವರು ಶಿಷ್ಟರು. ಹೀಗಾಗಿ ಆಯಾಸ್ಥಳದ ಐತಿಹ್ಯ-ಪುರಾಣ-ಇತಿಹಾಸಗಳು ಇಲ್ಲಿ ಸೇರಿಕೊಂಡಿವೆ. ಜನರಿಂದ ಕೇಳಿಬರೆದುದೇ ಅಧಿಕ ಪ್ರಮಾಣದಲ್ಲಿರುವುದರಿಂದ ಇದು ಮೌಖಿಕ ಇತಿಹಾಸ ವರ್ಗಕ್ಕೆ ಸೇರುತ್ತದೆ. ಇತಿಹಾಸ ರಚನೆಗೆ ಮೌಖಿಕ ಸಾಮಗ್ರಿಯನ್ನು ಬಳಸಿಕೊಳ್ಳಲು ಇಂದು ಇತಿಹಾಸಶಾಸ್ತ್ರ ಹೆಚ್ಚು ಒಲವು ತೋರುತ್ತದೆ.

ಪುರಾಣ ಐತಿಹ್ಯಗಳಿಗೂ ಹೊಕ್ಕಳ ಬಳ್ಳಿಯ ಸಂಬಂಧವುಂಟು ಎಂದು ಹೀಗಾಗಲೇ ಹೇಳಲಾಗಿದೆ. ಇತಿಹಾಸ ಐತಿಹ್ಯಕ್ಕೆ ಆಧಾರವಾದರೆ, ಪುರಾಣ ಐತಿಹ್ಯಕ್ಕೆ ಮೂಲ. ಐತಿಹ್ಯ ಮತ್ತು ಪುರಾಣಗಳು ಪ್ರಥಮತ ಕಥೆಗಳು. ಆದರೆ ಈ ಕಥೆಗಳೇ ಸಾಮಾನ್ಯ ಜನರ ಸ್ಥಳೀಯ ಜೀವನ ವಿಧಾನವನ್ನು ಕಟ್ಟಿಕೊಡುವ ಆಕರಗಳಾಗಿ ಇಂದು ನಮಗೆ ಕಂಡುಬರುತ್ತವೆ. ಕಲ್ಪನೆ ಆದಿಮಾನವನ ವಿಶಿಷ್ಟ ಲಕ್ಷಣ ಹಾಗೂ ಅದೇ ಅವನ ಜೀವನದ ಚಾಲಕ ಶಕ್ತಿಯಾದ್ದರಿಂದ ಅವನ ಆಲೋಚನೆ ವ್ಯವಹಾರ ಸಾಧನಗಳೆಲ್ಲ ಅಭಿವ್ಯಕ್ತಿಗಾಗಿ ಕಥನ ಮಾಧ್ಯಮವನ್ನವಲಂಬಿಸಿದವು. ಆದರೆ ಕಾಲ್ಪನಿಕ ಕತೆಗಳಲ್ಲಿ ರಂಜಕಾಂಶ ಅಧಿಕವಾಗಿದ್ದರೆ ಐತಿಹ್ಯ, ಪುರಾಣಗಳಲ್ಲಿ ಚಿಂತನಯೇ ಪ್ರಧಾನ. ಆದ್ದರಿಂದಲೇ ಈ ಪ್ರಕಾರಗಳನ್ನು ಕೆಲವು ವಿದ್ವಾಂಸರು ಸಾಹಿತ್ಯದ ಗಡಿಯೊಳಗೆ ಸೇರಿಸುವುದಿಲ್ಲ. 'ಪುರಾಣ ಪೂರ್ವಯುಗದ ವಿಜ್ಞಾನ'[3]ಎಂಬ ಅಭಿದಾನದಿಂದ ಇಂದಿನ ಮಾನವರಿಗೆ ಲಭಿಸುತ್ತದೆ.

ಮಾನವರ ಬದುಕು ಶ್ರಮಸಂಸ್ಕೃತಿಯೊಂದಿಗೆ ವಿಕಾಸಗೊಂಡಿದೆ. ತನ್ನ ಬದುಕಿನುದ್ದಕ್ಕೂ ಪ್ರಕೃತಿಯೊಂದಿಗೆ ಸೆಣಸಾಡುತ್ತಾ ತನ್ನ ಬದುಕನ್ನು ನಿರ್ಮಾಣಮಾಡಿಕೊಂಡ. ಈ ಹೋರಾಟದ ಬದುಕಿನಲ್ಲಿ ತನ್ನ ಶಕ್ತಿಗೆ ಮೀರಿದ ಘಟನೆಗಳನ್ನು ದೈವಿಶಕ್ತಿಯೊಂದಿಗೆ ಸಂಬಂಧ ಕಲ್ಪಿಸಿ ಪೂಜ್ಯಭಾವನೆಯಿಂದ ಕಾಣತೊಡಗಿದನು. ಮಾನವರ ಈ ಭಾವನೆಯೇ ಐತಿಹಾಸಿಕ ವ್ಯಕ್ತಿಗಳನ್ನು ಕೂಡ ಪೌರಾಣಿಕರಿಸಿದಂತಿದೆ. ಇಂದು ಪುರಾಣ ಪುರುಷರೆಂದು ಕರೆಯಲ್ಪಡುವ ಇಂದ್ರ, ನಚಿಕೇತ, ರಾಮ, ಕೃಷ್ಣ, ವೃಷಭನಾಥ, ಬುದ್ಧ ಮೊದಲಾದವರೆಲ್ಲಾ ಒಂದಾನೊಂದು ಕಾಲದಲ್ಲಿ ಚಾರಿತ್ರಿಕ ವ್ಯಕ್ತಿಗಳಾಗಿದ್ದವರು ಎನ್ನುವುದನ್ನು ಮರೆಯುವಂತಿಲ್ಲ. ಅದರಂತೆ ಹೀಗಾಗಲೆ ಕುಮಾರರಾಮ, ಕೆಂಪೇಗೌಡನ ಸೊಸೆ ಲಕ್ಷ್ಮಮ್ಮ ಮೊದಲಾದವರು ದೇವ ದೇವಿಯರ ಮಟ್ಟಕ್ಕೇರಿ ಪೂಜೆಯನ್ನು ಪಡೆಯುತ್ತಿದ್ದು ಮುಂದೊಂದು ದಿನ ಇವರೆ ಪೌರಾಣಿಕ ವ್ಯಕ್ತಿಯಾಗಿ ರೂಪುಗೊಳ್ಳುವ ಸಾಧ್ಯವಿದೆ.

ಪುರಾಣ ಮತ್ತು ಐತಿಹ್ಯವು ಮಾನವ ಸಂಸ್ಕೃತಿಯ ನೆಲೆಗಳನ್ನು ಗುರುತಿಸುವಲ್ಲಿ ಪೂರಕವಾಗಿವೆ. ಪುರಾಣಗಳು ಹಿಂದೆ ನಡೆದ ಘಟನೆಗಳನ್ನು ಶಕ್ತಿಯುತವಾಗಿ ವರ್ಣಿಸಲು ಇಂದ್ರ, ಚಂದ್ರ, ಸೂರ್ಯ ಮುಂತಾದ ದೇವತೆಗಳಿಗೆ ಮೊರೆಹೋಗಿ ತಮ್ಮ ವಂಶ, ಮನೆತನವನ್ನು ವರ್ಣಿಸಿಕೊಂಡಿರುವುರಾಗಿದ್ದಾರೆ, ಐತಿಹ್ಯಗಳು ಇವುಗಳ ಮಂದುವರೆದ ಭಾಗವಾಗಿ ಐತಿಹಾಸಿಕ ವ್ಯಕ್ತಿಗಳನ್ನು, ಸ್ಥಳಗಳನ್ನು, ಘಟನೆಗಳನ್ನು ಕುರಿತು ಬಂದಿರುವಂತಹವುಗಳು. ಮೌಖಿಕ ಪರಂಪರೆಯಿಂದಾಗಿ ಸಾಗಿಬಂದಿರುವ ವ್ಯಕ್ತಿ, ಸ್ಥಳ, ಘಟನೆಗಳಿಗೆ ಸಂಬಂಧಿಸಿದ ವಾಸ್ತವ ಘಟನೆಯ ಕತೆಗಳು ಅಥವಾ ನಡೆದಿದೆ ಎಂದು ನಂಬಿಕೊಂಡು ಬಂದಿರುವ ಕತೆಗಳನ್ನು ಅದು ತನ್ನ ವ್ಯಾಪ್ತಿಗೆ ಸೇರಿಸಿಕೊಂಡಿತು. ಜನ ಸಾಮಾನ್ಯರ ನಡುವೆ ಈ ಪದವು ಬಳಕೆಗೆ ಬಂದಾಗ ಅದರ ಅರ್ಥ ವ್ಯಾಪ್ತಿ ವಿಕಾಸಗೊಂಡಿತು.

ನಮ್ಮಲ್ಲಿ ಪ್ರಾಚೀನ ವೀರರ ಸಾಧನೆ, ಅರಸರ ಸಾಧನೆ, ಬಿರುದು, ಲಾಂಛನ, ಯುದ್ಧ, ಮುಂತಾದ ವಿಷಯಗಳಿಗೆ ಸಂಬಂಧ ಪಟ್ಟ ಐತಿಹ್ಯಗಳು ದೊರೆಯುತ್ತವೆ. ಇವೆಲ್ಲಾ ಸಾಮಾಜಿಕ ಆಧಾರದ ಮೇಲೆ ನಿಂತು ಒಟ್ಟುಗೂಡಿ ಸೃಷ್ಟಿಯಾಗಿ ಇತಿಹಾಸವೆನಿಸಿವೆ. ವ್ಯಕ್ತಿ, ವಸ್ತು, ಘಟನೆಯನ್ನು ಆಧರಿಸಿ ಹುಟ್ಟಿದ ಐತಿಹ್ಯ ಸಂಪೂರ್ಣ ಸತ್ಯವೆನ್ನಲೂಬಾರದು, ಪೂರ್ತಿ ಮಿಥ್ಯವೆಂದು ಹೇಳಲಿಕ್ಕಾಗದು. ಇವು ಒಂದು ಕಾಲಕ್ಕೆ ಸತ್ಯ ಕಥೆಗಳೇ. ಒಂದು ಕಾಲದ ಸಮಾಜ ಈ ಐತಿಹ್ಯಗಳನ್ನು ಸೃಷ್ಟಿಸುತ್ತಾ, ಪರಿವರ್ತಿತ ಸಮಾಜ ಇವುಗಳನ್ನು ಪೋಷಿಸುತ್ತಾ ಬಂದಿದ್ದರ ಪರಿಣಾಮವಾಗಿ ಅನೇಕ ಐತಿಹ್ಯಗಳು ಇಂದು ನಮ್ಮ ಮಧ್ಯದಲ್ಲಿ ಬಳಕೆಯಲ್ಲಿವೆ. ಈ ಕಾರಣದಿಂದಾಗಿ ಪ್ರಾಚೀನ ಸಂಸ್ಕೃತಿಯು ಅಧ್ಯಯನಕ್ಕೆ ಐತಿಹ್ಯಗಳು ಮಹತ್ವದ ಕುರುಹುಗಳಾಗಿವೆ.

ಐತಿಹ್ಯಗಳು ಪ್ರಾಚೀನ ಅರಸರಿಗೆ ಮತ್ತು ರಾಜರಾಣಿಯರಿಗೆ ಮಾತ್ರ ಸಂಬಂಧಿಸಿದ ಕಥೆಗಳೆಂದು ಗ್ರಹಿಸಬೇಕಿಲ್ಲ. ಅವು ಅವರ ಆನೆ, ಕುದುರೆ, ಒಂಟೆ, ಕಾಲಾಳು ಮುಂತಾದ ಬಲಗಳ ಕುರಿತ ಕಥೆಗಳನ್ನು ತಿಳಿಸುತ್ತವೆ. ಹಾಗೆಯೇ ಅವು ಅಂದಿನ ಅರಸರ ಒಂದು ಕಲ್ಪನೆಯನ್ನು ಮೂಡಿಸುತ್ತವೆ. ಈ ಆಧಾರಗಳಿಂದಲೇ ಅಂದಿನ ಆಳರಸರ ಇತಿಹಾಸದೊಂದಿಗೆ ಸಮಾಜದಲ್ಲಿ ಸಾಮಾನ್ಯರೆಂದು ಗುರುತಿಸುವ ವರ್ಗದವರ ಇತಿಹಾಸ ಅರ್ಥಮಾಡಿಕೊಳ್ಳಲು ಸಾಧ್ಯ. ಅಂದರೆ ಇವುಗಳು ಅರಸರ ಪ್ರಭಾವ, ಆಳ್ವಿಕೆಯ ವಿಧಿ–ವಿಧಾನ, ನ್ಯಾಯ–ನಿಷ್ಠುರತೆ ಮುಂತಾದ ಸಂಗತಿಗಳನ್ನು ಒಳಗೊಂಡಿದ್ದು, ಜನಸಾಮಾನ್ಯರ ಚರಿತ್ರೆಯನ್ನು ಬಿಂಬಿಸುವಲ್ಲಿ ಇವು ಸಹಕಾರಿಯಾಗಿವೆ. ಅಲ್ಲದೆ ಇಂದು ಕಾಣುವ ಕೋಟೆ, ಕೊತ್ತಲ, ದುರ್ಗ, ಹಳೆಮರದ ವಾಸ್ತುಶಿಲ್ಪ ಕಲೆಗಳ ಕುರಿತ ಮಾಹಿತಿಯು ಹೇರಳವಾಗಿ ದೊರೆಯುತ್ತವೆ. ಇವು ಆ ಕಾಲದ ಸಮಾಜದ ಚರಿತ್ರೆಯನ್ನೇ ಒದಗಿಸುತ್ತದೆ.

ಪ್ರಕೃತಿಯ ನಾನ ಅದ್ಭುತಗಳನ್ನು ಮತ್ತು ವೈಚಿತ್ತಾರಗಳನ್ನು ಒಳಗೊಂಡಿರುವ ಐತಿಹ್ಯಗಳಲ್ಲಿ ವೈಜ್ಞಾನಿಕತೆಯ ಹುರುಳಿಲ್ಲ ಎಂದು ಕೆಲವು ವಿದ್ವಾಂಸರು ಅಭಿಪ್ರಾಯಿಸಿರಬಹುದು. ಆದರೆ ಜನತೆಯ ಮಾನಸಿಕ ನೆಮ್ಮದಿ, ಸಂತೃಪ್ತಿ ಮನೋಭಾವ ಮೂಡಿಸಲು ಅದು ಹೇಗೆ ಕಾರ್ಯನಿರ್ವಹಿಸಿದೆ ಎನ್ನುವುದನ್ನು ಅರ್ಥಮಾಡಿಕೊಳ್ಳಬೇಕಾಗಿದೆ. ಐತಿಹ್ಯಗಳ ಚಾರಿತ್ರಿಕ ಸತ್ಯ ಏನೇ ಇರಲಿ ಜನರ ಜೀವನ ಮತ್ತು ನಡೆನುಡಿಗಳನ್ನು ರೂಪಿಸುವುದರಲ್ಲಿ ಅವು ಮಹತ್ವದ ಪಾತ್ರವಹಿಸಿದೆಂಬುದನ್ನು ಅಲ್ಲಗಳೆಯುವಂತ್ತಿಲ್ಲ. ವೇದೋಕ್ತವಾದ ಮತ್ತು ಮಹಾಕಾವ್ಯಗಳಲ್ಲಿ ನಿರೂಪಿತವಾದ ಐತಿಹ್ಯಗಳು ತಲೆ ತಲಾಂತರದಿಂದ ಸತತವಾಗಿ ಜನರಲ್ಲಿ ಜೀವನ ಶ್ರದ್ಧೆ ಮತ್ತು ಚೈತನ್ಯಗಳನ್ನು ತುಂಬುತ್ತಾ ಬಂದಿವೆ. ರಾಮಾಯಣ, ಮಹಾಭಾರತದ ಕಥೆ ಜನರ ಹೃದಯ ಮಂದಿರದಲ್ಲಿ ಶಾಶ್ವತವಾಗಿ ಮೂಡಲಿ ಎನ್ನುವ ಉದ್ದೇಶಕ್ಕಾಗಿ ಅವರ ಕುರಿತು

ಐತಿಹ್ಯಗಳು ರಚನೆಯಾದಂತಿವೆ. ಇವುಗಳನ್ನು ಕಂಡಾಗ ಸಾಕ್ಷಾತ್ ಐತಿಹಾಸಿಕ ಘಟನೆಯ ಪ್ರತೀಕಗಳು ಎನ್ನುವ ನಂಬಿಕೆ ಜನತೆಯ ಮನದಲ್ಲಿ ಅಚಲವಾಗುತ್ತದೆ. ಐತಿಹ್ಯ ಮತ್ತು ಪುರಾಣಗಳು ಒಂದಕ್ಕೊಂದು ಪೂರಕವಾಗಿದ್ದು, ಇವು ಜನಜೀವನದ ಸಾಂಸ್ಕೃತಿಕ ಇತಿಹಾಸದ ಪ್ರತಿಬಿಂಬಗಳಾಗಿವೆ. ಈ ಹಿನ್ನಲೆಯಲ್ಲಿ ಬೆಳೆದು-ಉಳಿದುಕೊಂಡು ಬಂದ ಐತಿಹ್ಯಗಳು ಸಾಕಷ್ಟಿವೆ. ಬಳ್ಳಾರಿ ಪರಿಸರದಲ್ಲಿರುವ ಐತಿಹ್ಯ ಪುರಾಣಗಳ ಸಂಬಂಧವು ಇತಿಹಾಸದ ಅಧ್ಯಯನಕ್ಕೆ ಹೇಗೆ ಪೂರಕವಾಗಿವೆ ಎಂಬುದನ್ನು ಈ ಮುಂದಿನಂತೆ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**೫.೧ ದೈವ ಪ್ರಧಾನವಾದ ಐತಿಹ್ಯಗಳು**

**೫.೨ ಸ್ಥಳ ಪ್ರಧಾನವಾದ ಐತಿಹ್ಯಗಳು**

**೫.೩ ವ್ಯಕ್ತಿ ಪ್ರಧಾನವಾದ ಐತಿಹ್ಯಗಳು**

**೫.೧ ದೈವ ಪ್ರಧಾನವಾದ ಐತಿಹ್ಯಗಳು**

ಹೀಗಾಗಲೆ ರೂಪುಗೊಂಡಿರುವ ಚರಿತ್ರೆಯನ್ನು ಗಮನಿಸಿದಾಗ ಸಾಮ್ರಾಜ್ಯ, ಸಂಸ್ಥಾನ ಮತ್ತು ಧರ್ಮದ ನಡುವೆ ಅವಿನಾಭಾವ ಸಂಬಂಧವಿರುವುದು ಕಂಡುಬರುತ್ತದೆ. ರಾಜನಿಂದ ಹಿಡಿದು ಜನಸಾಮಾನ್ಯರವರೆಗೂ ದೇವಸ್ಥಾನಗಳನ್ನು ನಿರ್ಮಾಣ ಮಾಡಿರುವುದು ಶಾಸನಗಳಿಂದ ತಿಳಿದುಬರುತ್ತದೆ. ಇದನ್ನು ಗಮನಿಸಿದಾಗ ದೇವಸ್ಥಾನದ ನಿರ್ಮಾಣ ಕಾರ್ಯವು ಸಮಾಜದ ಮೌಲ್ಯವಾಗಿತ್ತು ಎಂದು ಹೇಳಬಹುದು. ಈ ದೇವಸ್ತಾನಗಳ ಉಸ್ತುವಾರಿಯನ್ನು ನೋಡಿಕೊಳ್ಳುವ ಹೊಣೆ ಆಯಾ ಧರ್ಮ ಸಂಸ್ಥಾಪಕರು, ಧಾರ್ಮಿಕ ಮುಖಂಡರು, ಸನ್ಯಾಸಿಗಳು, ಗುರುಗಳು ಮುಂತಾದವರದಾಗಿತ್ತು. ಈ ಉಸ್ತುವಾರಿಯ ಹೊಣೆಯನ್ನು ಹೊತ್ತವರು ತಮಗೆ ದಾನ ನೀಡಿದವರನ್ನು ವರ್ಣಿಸಬೇಕಾಗಿತ್ತು. ಇದು ದಾನ ಸಂಸ್ಕೃತಿಯ ಪರಂಪರೆಯನ್ನು ಬೆಳಸುವ ಮತ್ತು ದಾನ ನೀಡುವವರನ್ನು ಪ್ರಚಾರಮಾಡುವ ಉದ್ದೇಶವನ್ನು ಹೊಂದಿತ್ತು. ಹೊಗಳುವ ಮತ್ತು ಹೊಗಳಿಸಿಕೊಳ್ಳುವವರ ನಡುವೆ ಒಂದು ಅಂತರ್‌ಸಂಬಂದವಿತ್ತು. ಹೀಗಾಗಿ ಅವರ ಬದುಕಿನ ಸುತ್ತ ಕೆಲವೊಂದು ಐತಿಹ್ಯಗಳು ಹುಟ್ಟಿಕೊಂಡಿವೆ. ಇಂತಹ ವ್ಯಕ್ತಿಗಳ ಸುತ್ತ ಹುಟ್ಟುವ ಬಹುಪಾಲು ಐತಿಹ್ಯಗಳಿಗೆ ಪವಾಡದ ಅಂಶಗಳು ಸೇರಿಕೊಂಡು ಅಲೌಕಿಕತೆಯ ಮೆರಗು ಬಂದು ಬಿಡುವುದು ಸಾಮಾನ್ಯ ಸಂಗತಿ. ಅದರಲ್ಲಿಯೂ ವಿಶೇಷವಾಗಿ ಧರ್ಮ ಸ್ಥಾಪಕರು, ಮತ ಸ್ಥಾಪಕರು, ಧರ್ಮಗುರುಗಳು ತಮ್ಮ ಮತ ಧರ್ಮಗಳ ಉದ್ದೇಶಕ್ಕಾಗಿ ಸಾಕಷ್ಟು ಪವಾಡಗಳನ್ನು ಮೆರೆದಂತೆ ಚಿತ್ರಿತರಾಗುತ್ತಾರೆ. ಧಾರ್ಮಿಕ ನಂಬಿಕೆಯೇ ಪ್ರಧಾನವಾದ ಸಮಾಜದಲ್ಲಿ ಪವಾಡ ಸ್ವರೂಪದ ಐತಿಹ್ಯಗಳು ಹೆಚ್ಚು ಹುಲುಸಾಗಿ ಬೆಳೆಯುತ್ತವೆ. "ಪ್ರಾಚೀನ ಕಾಲದ ಜನರಲ್ಲಿ ದೇವಾಲಯಗಳ ನಿರ್ಮಾಣ ಅವರಲ್ಲಿ ಬೇರೂರಿದ್ದ ಜೀವನ ಶ್ರದ್ಧೆ ಹಾಗೂ ನಿಷ್ಠೆಗಳ

ಪ್ರತೀಕವೂ ಆಗಿವೆ. ಸಮಾಜದಲ್ಲಿಯ ಎಲ್ಲಾ ವರ್ಗದ ಜನರು ದೇವಾಲಯಗಳೊಡನೆ ಸಂಬಂಧ ಇರಿಸಿಕೊಂಡಿದ್ದು ಶಾಸನಗಳಿಂದ ತಿಳಿದು ಬರುತ್ತದೆ. ವ್ಯಕ್ತಿಗಳು ಯಾವುದಾದರೊಂದು ಸಂದರ್ಭದಿಂದ ಪ್ರಚೋದನೆಯನ್ನು ಪಡೆದು ತನ್ನ ಹೆಸರಿನ ಜೊತೆಗೆ ಇಷ್ಟದೈವ ಹೆಸರನ್ನು ಸೇರಿಸಿ ದೇವಾಲಯವನ್ನು ಸ್ಥಾಪಿಸಿರುವ ವಿವರಗಳು ಶಾಸನಗಳ ಅಧ್ಯಯನದಿಂದ ತಿಳಿದುಬರುತ್ತದೆ. ಚಾಲುಕ್ಯ ವಿಕ್ರಮನ ಮಹಾಮಂಡಳೇಶ್ವರ ಚಾವುಂಡರಾಯನಿಗೆ ಶಂಭುವು ಸ್ವಪ್ನದಲ್ಲಿ ಕಾಣಿಸಿಕೊಂಡು ದೇಗುಲ ನಿರ್ಮಿಸೆಂದು ಸಂಜ್ಞೆದೋರಲು ಅದರಂತೆ ದೇವಾಲಯವನ್ನು ನಿರ್ಮಿಸಿದ ವಿವರ ಕ್ರಿ.ಶ. ೧೧೯೫ರ ಯಡ್ರಾಮಿ ಶಾಸನ ತಿಳಿಸುತ್ತದೆ[೪]. ಅವುಗಳಿಗೆ ಮೂಲವಾಗಿ ದೊರೆಯುವ ಆಕರಗಳೆಂದರೆ ಪೌರಾಣಿಕತೆಯೊಂದಿಗೆ ಗುರಿತಿಸಿಕೊಂಡಿರುವ ದೇವತೆಗಳೆ. ಇಲ್ಲಿರುವ ಅಸಂಖ್ಯಾತ ದೇವಾಲಯಗಳೆ ಇದಕ್ಕೆ ಸಾಕ್ಷಿ. ಹಾಗಾಗಿ ಪುರಾಣೀಕೃತಗೊಂಡಿರುವಂತಹ ಐತಿಹ್ಯಗಳು ಈ ಪ್ರದೇಶದಾದಂತ್ಯ ಕಂಡುಬರುತ್ತವೆ. ಎಲ್ಲಾ ಐತಿಹ್ಯಗಳಿಗೆ ಮೂಲ ಪುರಾಣ ಎಂದು ಹೇಳಬಹುದು. ಈ ಹಿನ್ನಲೆಯಲ್ಲಿ ಪ್ರಾತಿನಿಧಿಕ ಐತಿಹ್ಯಗಳನ್ನು ಮುಂದಿನಂತೆ ನೋಡಬಹುದು.

**ವಿರೂಪಾಕ್ಷ:** ಹಂಪಿಯ ಪ್ರಸಿದ್ಧ ಆರಾಧ್ಯ ದೇವನಾಗಿರುವ ವಿರೂಪಾಕ್ಷನ ಕುರಿತು ಐತಿಹ್ಯ ಹೀಗಿದೆ. ವಿರೂಪಾಕ್ಷನು ಹೇಮಕೂಟದ ಮೇಲೆ ತಪಸ್ಸು ಮಾಡುವಾಗ ಮನ್ಮಥನು ಇವನ ತಪಸ್ಸು ಭಂಗ ಮಾಡಲು ಯತ್ನಿಸುವನು. ಇದರಿಂದ ಕೋಪಗೊಂಡ ವಿರೂಪಾಕ್ಷನು ತನ್ನ ಮೂರನೇ ಕಣ್ಣಿನಿಂದ ಮನ್ಮಥನನ್ನು ಸುಡುತ್ತಾನೆ. ತದನಂತರ ವಿರೂಪಾಕ್ಷ ಹೇಮಕೂಟದಿಂದ ಕೆಳಗಿಳಿದುಬಂದು ಈಗಿರುವ ಸ್ಥಳದಲ್ಲಿ ನೆಲೆಸಿದ್ದಾನೆಂದು ಐತಿಹ್ಯವಿದೆ.

ಇದಕ್ಕೆ ಪೂರಕವಾಗುವಂತೆ ಹೇಮಕೂಟದ ತುದಿಯಲ್ಲಿರುವ ಶಾಸನ, ಗಿರಿಜಾ ಮತ್ತು ಶಿವ ಹೇಮಕೂಟದಲ್ಲಿ ಮನೆಮಾಡಿಕೊಂಡು ವಾಸವಾಗಿದ್ದರು ಎಂಬುದನ್ನು ತಿಳಿಸುತ್ತದೆ.[೫]ಈ ವಿಷಯವನ್ನು ಗಮನಿಸಿದಾಗ ಮೇಲಿನ ಎರಡು ಸಂಗತಿಗಳಲ್ಲಿ ನಿರೂಪಿಸುವ ವಿಧಾನ ಭಿನ್ನವಾಗಿದ್ದರೂ ತಲುಪುವ ತೀರ್ಮಾನ ಒಂದೇ. ಹಾಗೆಯೇ ಈಗಿನ ವಿರೂಪಾಕ್ಷಿ ದೇವಾಲಯದ ಎಡಭಾಗಕ್ಕಿರುವ ಕೊಳವನ್ನು ಮನ್ಮಥಕೊಂಡ ಎಂದು ಇಂದಿಗೂ ಕರೆಯುವ ವಾಡಿಕೆಯಲ್ಲಿದೆ.

**ಪಟ್ಟಣದ ಎಲ್ಲಮ್ಮ:** ಕಮಲಾಪುರದಿಂದ ಸುಮಾರು ೩ ಕಿ.ಮಿ ದೂರದ ಕಮಲಮಹಲ್ ಹಿಂದಿನ ಭಾಗದಲ್ಲಿ ಪಟ್ಟಣದ ಎಲ್ಲಮ್ಮ ದೇವಸ್ಥಾನ ಕಂಡುಬರುತ್ತದೆ. ಇದರ ಕುರಿತು ಐತಿಹ್ಯ ಹೀಗಿದೆ. "ವಿಜಯನಗರ ಸಾಮ್ರಾಜ್ಯದಲ್ಲಿ ಅಲ್ಲಿನ ರಾಜ ಮಹಾರಾಜರು ಮತ್ತು ಸೈನಿಕರಿಗೆ ಊಟಕ್ಕಾಗಿ ನೆಲ್ಲನ್ನು ಕುಟ್ಟಿಕೊಡುತ್ತಿದ್ದಳು. ಆದುದರಿಂದ ಕೂಟ್ಟಮ್ಮ ಎಂದು ಹೆಸರು ಬಂತು. ಮುಂದೆ ಇದೇ ಸಾಮ್ರಾಜ್ಯವಾಗಿ ದೊಡ್ಡ ಪಟ್ಟಣವಾಯಿತು. ಈ ಅಮ್ಮನಿಗೆ ಪಟ್ಟಮ್ಮ ಎಂದು ತದನಂತರ ಪಟ್ಟಣದ ಎಲ್ಲಮ್ಮ ಎಂದು ಹೆಸರು ಬಂತು ಎಂದು ಐತಿಹ್ಯವಿದೆ"[೬].ಕುಟ್ಟುವ

ಕಾಯಕದಲ್ಲಿ ತೊಡಗಿದ್ದ ಸಾಮಾನ್ಯ ಮಹಿಳೆಯೊಬ್ಬಳು ತನ್ನ ಕಾಯಕ ನಿಷ್ಠೆಯಿಂದ ದೈವತ್ವಕ್ಕೇರಿದ ಸಂಗತಿಯನ್ನು ಇಲ್ಲಿ ಕಾಣಬಹುದು. ಒಂದು ಕಾಲದಲ್ಲಿ ಚಾರಿತ್ರಿಕ ವ್ಯಕ್ತಿಯಾಗಿದ್ದ ವ್ಯಕ್ತಿಯೊಬ್ಬರು ಪರಿವರ್ತಿತ ಕಾಲದಲ್ಲಿ ಪುರಾಣದ ವ್ಯಕ್ತಿಯೊಂದಿಗೆ ಸಮೀಕರಿಸಿಕೊಂಡು ಇಂದಿಗೂ ಪೂಜಿಸಿಕೊಂಡು, ಆಚರಿಸಿಕೊಂಡು ಬರುವುದು ಕಂಡುಬರುತ್ತದೆ.

**ಹೊಸೂರಮ್ಮ:** ಹೊಸಪೇಟೆಯಿಂದ ಸುಮಾರು ೫ ಕಿ.ಮೀ ದೂರದ ತುಂಗಭದ್ರ ನದಿಯ ಬಲದಂಡೆಯ ಮೇಲಿದೆ. ಈ ದೇವಿಯನ್ನು ಕುರಿತು ಐತಿಹ್ಯ ಹೀಗೆ ಹೇಳುತ್ತದೆ. ರೇಣುಕೆಯು ತನ್ನ ಪತಿಯ ಪ್ರಭಾವದಿಂದ ಹಾವನ್ನು ಸಿಂಬೆಯನ್ನಾಗಿ ಮಾಡಿಕೊಂಡು ಅದರ ಮೇಲೆ ನೀರು ತುಂಬಿದ ಉಸುಕಿನ ಕೊಡವನ್ನು ನದಿಯಿಂದ ದಿನಾಲು ತಲೆಯ ಮೇಲೆ ಹೊತ್ತುಕೊಂಡು ಬಂದು, ತನ್ನಪತಿ ಜಮದಗ್ನಿ ಪೂಜೆಯಲ್ಲಿ ಸಹಾಯ ಮಾಡುತ್ತಿದ್ದಳು. ಒಮ್ಮೆ ಜಮದಗ್ನಿಯು ಪೂಜೆಯಲ್ಲಿ ಮಗ್ನನಾಗಿದ್ದಾಗ ರೇಣುಕೆಯು ನೀರು ತರಲು ತುಂಗಭದ್ರ ನದಿಗೆ ಹೋದಳು. ಅಲ್ಲಿ ಚಿತ್ರರಥನೆಂಬ ಗಂಧರ್ವನು ತನ್ನ ವನಿತೆಯರೊಂದಿಗೆ ನೀರಿನಲ್ಲಿ ಆಟವಾಡುತ್ತಿರುವುದನ್ನು ಕಂಡ ರೇಣುಕೆಯ ಮನಸ್ಸು ಚಂಚಲವಾಗುತ್ತದೆ. ಈ ಸಮಯದಲ್ಲಿ ತಕ್ಷಣ ಎಚ್ಚೆತ್ತುಕೊಂಡ ರೇಣುಕೆಯು ನಿತ್ಯದಂತೆ ನದಿ ದಡದಲ್ಲಿದ್ದ ಉಸಕನ್ನು ತೆಗೆದುಕೊಂಡು ಕೊಡವನ್ನು ಮಾಡತೊಡಗಿದಳು. ಎಷ್ಟು ಪ್ರಯತ್ನ ಮಾಡಿದಾಗ್ಯೂ ಉಸುಕಿನ ಕೊಡ ಮಾಡಲಾಗಲಿಲ್ಲ. ಬರಿಗೈಯಿಂದ ಆಶ್ರಮಕ್ಕೆ ವಾಪಸ್ಸು ಬಂದಳು. ಬರಿಗೈಯಿಂದ ಬಂದ ರೇಣುಕೆಯನ್ನು ಕಂಡ ಜಮದಗ್ನಿಯು ತನ್ನ ದಿವ್ಯ ಜ್ಞಾನದಿಂದ ಎಲ್ಲವನ್ನು ತಿಳಿದುಕೊಂಡ. ಕೋಪಗೊಂಡ ಜಮದಗ್ನಿಯು ಅವಳಿಗೆ ಶಾಪನೀಡಿ ತನ್ನ ಮಕ್ಕಳಿಗೆ ಅವಳ ತಲೆಯನ್ನು ಕಡಿದು ಹಾಕಲು ಹೇಳಿದನು. ಪರಶುರಾಮ ತನ್ನ ತಂದೆ ಅಜ್ಞೆಯಂತೆ ರೇಣುಕೆಯ ತಲೆಯನ್ನು ಕಡಿದು ಹಾಕಲು, ತಲೆ ಹಲವಾರು ಭಾಗಗಳಾಗಿ ನಾಡಿನಾದ್ಯಾಂತ ಬೀಳುತ್ತದೆ. ಈಗೆ ಬಿದ್ದಂತಹ ಜಾಗದಲ್ಲೆಲ್ಲಾ ಗ್ರಾಮದೇವತೆಗಳಾಗಿ ರೇಣುಕೆಯು ಅವತಾರ ಪಡುತ್ತಾಳೆ. ಹೀಗೆ ಒಂದು ತಲೆ ಹೊಸೂರಿನಲ್ಲಿ ಬಂದು ಬೀಳುತ್ತದೆ. ಅದುವೇ ಹೊಸೂರಮ್ಮ ಆಗಿ ಪ್ರಸಿದ್ಧಿಯಾಯಿತು ಎಂದು ಹೇಳುವ ಐತಿಹ್ಯವು ಹುಲಿಗಿ ಪರಿಸರದಲ್ಲಿದೆ. ಈ ಐತಿಹ್ಯವು ಗ್ರಾಮ ದೇವತೆಯಾದ ದುರ್ಗೆಯನ್ನು ಕುರಿತು ಇರುವ ಐತಿಹ್ಯಕ್ಕೆ ಪರ್ಯಾಯವಾಗಿ ಹುಟ್ಟಿಕೊಂಡಂತಿದೆ. ಅಂದರೆ ತಳ ಸಮುದಾಯಕ್ಕೆ ಸೇರಿದ ವ್ಯಕ್ತಿಯಿಂದ ಮೋಸಕ್ಕೊಳಗಾದ ಮೇಲ್ಜಾತಿಗೆ ಸೇರಿದ ದುರ್ಗೆಯು ತಾನು ದೇವತೆಯಾಗಿ ಹುಟ್ಟಿದಳು. ಆಕೆಯ ಶಾಪದಂತೆ ಆಕೆಗೆ ಮೋಸಮಾಡಿದ ವ್ಯಕ್ತಿಯು ಕೋಣನಾಗಿ ಹುಟ್ಟಿ ಆಕೆಯ ಮುಂದೆ ಬಲಿಯಾಗುತ್ತಾನೆ. ರೇಣುಕೆ ಎಲ್ಲಮ್ಮನಿಗೆ ಸಂಬಂಧಿಸಿದ ಐತಿಹ್ಯದಲ್ಲಿ ಜಮದಗ್ನಿಯ ತಪಶಕ್ತಿಯ ಜೊತೆಗೆ ಅವನ ಕೋಪ ಕಠೋರವಾದ ನಿರ್ಧಾರ ಹಾಗೂ ಶಿಕ್ಷೆಗಳು ಪುರುಷ ಪ್ರಧಾನ ಸಮಾಜದ ಮೌಲ್ಯ(ಪಾತಿವ್ರತ್ಯ)ಗಳಿಂದ ರೇಣುಕೆ

ಶಿಕ್ಷೆಗೊಳಪಡುವುದನ್ನು ತಿಳಿಸಿದರೆ, ಗ್ರಾಮದೇವತೆಗೆ ಸಂಬಂಧಿಸಿದ ಐತಿಹ್ಯದಲ್ಲಿ ದುರ್ಗಿಯು ಹೆಣ್ಣಾದರೂ ಶಾಪಕ್ಕೆ ಒಳಗಾಗಿ ಕೋಣವಾಗಿ ಬಲಿಯಾಗುವವನು ತಳಸಮುದಾಯದ ಗಂಡೇ. ಇದು ಅಂದಿನ ಜಾತಿ ಅಥವಾ ವರ್ಗವ್ಯವಸ್ಥೆಯನ್ನು ಪ್ರತಿಸಿಧಿಸುತ್ತದೆ. ಆದರೆ ಈ ಐತಿಹ್ಯದಲ್ಲಿ ಜಮದಗ್ನಿಯ ಶಾಪಕ್ಕೆ ಗುರಿಯಾದ ರೇಣುಕೆ ಬಲಿಯಾಗುತ್ತಾಳೆ. ಒಂದೆಡೆ ಪುರುಷ ಶೋಷಣೆ ಮತ್ತೊಂದಡೆ ಮಹಿಳೆಯರ ಷೋಷಣೆಯನ್ನು ನಿರೂಪಿಸುವ ಸಂಗತಿಯನ್ನು ಈ ಐತಿಹ್ಯಗಳು ಒಳಗೊಂಡಿವೆ. ಇವುಗಳನ್ನು ವರ್ಗಗಳ ಹಿನ್ನಲೆಯಲ್ಲಿ ನೋಡಿದಾಗ ಒಂದು ಐತಿಹ್ಯದ ವಿರುದ್ಧ ಮತ್ತೊಂದು ಐತಿಹ್ಯ ರೂಪುಗೊಂಡಂತಿದೆ. ಇದಕ್ಕೆ ಆ ಕಾಲದ ಸಾಂಸ್ಕೃತಿಕ ಒತ್ತಡಗಳು ಪ್ರೇರಣೆಯಾಗಿರಬೇಕು. ಎರಡು ಐತಿಹ್ಯಗಳು ಪುರಾಣದ ಹಿನ್ನಲೆಯಲ್ಲಿ ರೂಪುಗೊಂಡಿವೆ. ಆದರೆ ಹೊಸೂರಿನಲ್ಲಿರುವ ಹೊಸೂರಮ್ಮನ ದೇವಸ್ಥಾನದಲ್ಲಿ ಶಾಸನಗಳಿದ್ದರೂ ಈ ಐತಿಹ್ಯಕ್ಕೆ ಪೂರಕವಾದ ಮಾಹಿತಿಯನ್ನು ಒಳಗೊಂಡಿಲ್ಲ. ಈ ಹೊಸೂರಮ್ಮನ ಪೂಜೆಗೆ ನೀಡಿದ ದಾನ ದತ್ತಿಗಳ ವಿವರಗಳ ಮೇಲೆ ಈ ಶಾಸನಗಳು ಬೆಳಕು ಚೆಲ್ಲುತ್ತವೆ.

**ಕಡಲುಬಾಳು ಆಂಜನೇಯಸ್ವಾಮಿ:** ಹಗರಿಬೊಮ್ಮನಹಳ್ಳಿ ತಾಲೂಕಿನ ಕಡಲಬಾಳು ಗ್ರಾಮದಲ್ಲಿರುವ ಆಂಜನೇಯ ಸ್ವಾಮಿ ಕುರಿತು ಐತಿಹ್ಯ ಹೀಗಿದೆ. ಈ ಗ್ರಾಮದ ಮುಂದೆ ಹರಿಯುವ ಹಳ್ಳದ ಪಶ್ಚಿಮ ದಿಕ್ಕಿನ ಮೂಲೆಯಲ್ಲಿ ತಿರುವಿನ ಮಡುವಿದೆ. ಆಗಿನ ಕಾಲದಲ್ಲಿ ಈ ಹಳ್ಳ ತುಂಬಿ ಹರಿಯುತ್ತಿತ್ತು. ಈ ಊರಿನ ದಾಸಯ್ಯನೊಬ್ಬನು ತನ್ನ ಕಾರ್ಯನಿಮಿತ್ತದಿಂದ ಈ ಮಡುವು ಇರುವ ಕಡೆಗೆ ಹೋದಾಗಲೆಲ್ಲಾ ಆ ಮಡುವಿನೊಳಗಿನಿಂದ ನನ್ನನ್ನು ಕರೆದುಕೊಂಡು ಹೋಗು ಎಂಬ ಧ್ವನಿ ಅವನಿಗೆ ಕೇಳಿಸುತ್ತಿತ್ತು. ಆದರೆ ಅವನು ಅದರ ಕಡೆ ಗಮನಹರಿಸಲಿಲ್ಲ. ಒಂದು ದಿನ ಆಂಜನೇಯಸ್ವಾಮಿ ಕನಸಿನಲ್ಲಿ ಬಂದು ನಾನು ಆ ಮಡುವಿನಲ್ಲಿದ್ದೇನೆ, ನಾನು ಕಡಲಿನಲ್ಲಿ ಬಾಳಿದವ, ಉಸುಕಿನ ಮೇಲೆ ಮಲಗಿದವ, ಪ್ರವಾಹದಲ್ಲಿ ಕೊಚ್ಚಿಕೊಂಡು ಭೂಗರ್ಭದಲ್ಲಿ ಇಲ್ಲಿಗೆ ಬಂದು ಸೇರಿ, ಇಲ್ಲೇ ಕಲ್ಲು ಮೂರ್ತಿಯಾಗಿ ಈ ಮಡುವಿನಲ್ಲಿದ್ದೇನೆ. ನನ್ನನ್ನು ಹೊರತೆಗೆದು ಒಂದು ಬಂಡಿಯಲ್ಲಿ ಕರೆದೊಯ್ಯರಿ, ಆ ಬಂಡಿಯ ಅಚ್ಚು ಎಲ್ಲಿ ಮುರಿದು ಬಿಳುತ್ತದೆಯೋ ಅಲ್ಲಿ ನನ್ನನ್ನು ಪ್ರತಿಷ್ಠಾಪಿಸಿ ಗುಡಿಕಟ್ಟಿಸಿ, ನಾನು ಗ್ರಾಮದ ಜನರನ್ನು ರಕ್ಷಿಸುತ್ತೇನೆ ಎಂದು ಹೇಳುತ್ತಾನೆ. ದಾಸಯ್ಯ ಈ ವಿಷಯವನ್ನು ಊರಿನ ಗಣ್ಯವ್ಯಕ್ತಿಗಳ ಮುಂದೆ ಚರ್ಚಿಸಿದನು. ತದನಂತರ ಊರಿನ ಜನರು ಅಲ್ಲಿಗೆ ಹೋಗಿ ನೋಡಿದಾಗ ನೀರಿನಲ್ಲಿ ಆಂಜನೇಯಸ್ವಾಮಿ ವಿಗ್ರಹ ಸಿಗುತ್ತದೆ. ಅದನ್ನು ಒಂದು ಬಂಡಿಯ ಮೇಲೆ ಎತ್ತಿಕೊಂಡು ಬರುವಾಗ ಆ ಬಂಡಿಯ ಅಚ್ಚು ಕಡಲುಬಾಳು ಗ್ರಾಮದ ಹತ್ತಿರ ಮುರಿದು ಬೀಳುತ್ತದೆ. ಅಲ್ಲಿಯೇ ಗುಡಿಯನ್ನು ಕಟ್ಟಿ ಪೂಜಿಸಿದರು ಎಂಬ ಐತಿಹ್ಯವಿದ್ದು ಆಂಜನೇಯಸ್ವಾಮಿ ದೇವಸ್ಥಾನದ ಉಗಮದ ಹಿಂದಿದ್ದ ಒತ್ತಾಸೆಗಳನ್ನು ಮತ್ತು ಆ ದೇವಸ್ಥಾನದ ಉಗಮವನ್ನು

ಕುರಿತು ಹೇಳುತ್ತದೆ. ದೇವರು ಮತ್ತು ದೇವಸ್ಥಾನಗಳು ಮಾನವ ನಿರ್ಮಿತವಾದವು ಎನ್ನುವ ವಾದವನ್ನು ಒಡೆದು ಹಾಕುವುದಕ್ಕೆ ಇದು ಒತ್ತಾಯಿಸುತ್ತದೆ. ಇಲ್ಲಿ ಆಂಜನೇಯನು ದಾಸಯ್ಯನಿಗೆ ಸ್ವಪ್ನದಲ್ಲಿ ಕಾಣಿಸಿಕೊಂಡು ದೇವಸ್ಥಾನ ನಿರ್ಮಾಣ ಮಾಡಲು ಸೂಚಿಸಿದ ಎನ್ನುವುದು, ಮಾನವವರು ಇಲ್ಲಿ ನೆಪಮಾತ್ರ ಎಲ್ಲಾ ಕಾರ್ಯಗಳು ನಡೆಯುವುದು ದೇವರ ಆಣತಿಯಿಂದ ಎಂಬುದನ್ನು ಇದು ಸಾರುತ್ತದೆ. ತನ್ನನ್ನು ತಾನು ರಕ್ಷಣೆಮಾಡಿಕೊಳ್ಳಲಾಗದ ಆಂಜನೇಯ ಊರನ್ನು ರಕ್ಷಿಸುತ್ತಾನೆ ಎಂಬುದು ಸಂಶಯಾಸ್ಪದವಾಗಿ ಕಂಡರು ಐತಿಹ್ಯಗಳಲ್ಲಿ ಇದು ಸಾಧ್ಯ ಇಂತಹ ಸಂದರ್ಭಗಳೆಲ್ಲಾ ಕೆಲವು ಪವಾಡ ಸದೃಶದಂತೆ ಚಿತ್ರಿತವಾಗಿದ್ದು, ಇವುಗಳಲ್ಲಿ ಕೆಲವು ಅಂಶಗಳನ್ನು ದೈವಿ ನೆಲೆಯಲ್ಲಿ ಕಾಣುವುದರಿಂದ ಅವು ಗೌಣವಾಗುತ್ತವೆ.

ಈ ಹಿನ್ನಲೆಯಲ್ಲಿ ಹೊಸಪೇಟೆ–ಕಮಲಾಪುರ ಮಾರ್ಗಮಧ್ಯದಲ್ಲಿ ಇರುವ ಗಾಳೆಮ್ಮನಗುಡಿ ಕುರಿತು ಐತಿಹ್ಯ ನೋಡಬಹುದಾಗಿದೆ. 'ಹಿಂದೆ ಈ ಗುಡಿಯಿರುವ ಪ್ರದೇಶವು ದಟ್ಟ ಕಾಡಿನಿಂದ ಆವೃತವಾಗಿತ್ತು. ಇಲ್ಲಿ ಜನರು ಓಡಾಡುತ್ತಿರಲಿಲ್ಲಾ. ಸುಮಾರು ವರ್ಷಗಳ ಹಿಂದೆ ಇರಬಹುದುದಾದ ಒಬ್ಬಾತ ಅಲ್ಲಿನ ಅಡವಿಗೆ ಕಟ್ಟಿಗೆ ಕಡಿಯಲೆಂದು ಬಂದ, ಮಧ್ಯಾಹ್ನದ ವೇಳೆಗೆ ಆತನಿಗೆ ಅಮ್ಮನು ಒರ್ವ ಹೆಣ್ಣಿನ ರೂಪದಲ್ಲಿ ಕಾಣಿಸಿಕೊಂಡು ತನಗೆ ಯಾರು ದಿಕ್ಕಿಲ್ಲವೆಂದೂ, ಒಂದು ನೆಲೆ ಕಾಣಿಸಬೇಕೆಂದು ಕೇಳುತ್ತಾಳೆ. ಆಕೆ ದೇವತೆಯೆಂದು ತಿಳಿದು ಆತನು ಆತನ ಮನೆಯವರೆಲ್ಲಾ ಸೇರಿ ಅಲ್ಲಿನ ಕಲ್ಲೊಂದನ್ನು ಅಮ್ಮನೆಂದು ಪೂಜಿಸುತ್ತಾರೆ. ದಿನ ಕಳೆದಂತೆ ಆ ಕುಟುಂಬದವರು ಶ್ರೀಮಂತರಾಗುತ್ತಾರೆ. ಹೀಗೆ ಕಟ್ಟಿಗೆ ಮಾರುವವನು ಶ್ರೀಮಂತವಾದುದನ್ನು ಕಂಡ ಇತರೆ ಜನರು ತಮಗೆ ಕಷ್ಟ ಬಂದಾಗ ದೇವಿಯ ಹತ್ತಿರ ಬರತೊಡಗುತ್ತಾರೆ. ಕಾಲಕ್ರಮದಲ್ಲಿ ಗುಡಿಗೆ ಬರುವ ಭಕ್ತರ ಸಂಖ್ಯೆ ಹೆಚ್ಚಾದಾಗ ದೇವಿಗೆ ಗುಡಿಯೊಂದನ್ನು ಕಟ್ಟಲಾಗಿದೆ'.[೬]

**ಅಮಲಾಪುರದ ಬಸವೇಶ್ವರ:** "ಕೂಡ್ಲಿಗಿ ತಾಲ್ಲೂಕಿನ ಅಮಲಾಪುರದಲ್ಲಿ ಬಸವೇಶ್ವರ ದೇವಸ್ಥಾನವಿದೆ. ಈ ದೇವಸ್ಥಾನ ಕುರಿತು ಐತಿಹ್ಯ ಹೀಗಿದೆ. ಇಲ್ಲಿಯ ಬಸವಣ್ಣ ವಿಗ್ರಹದ ಶಿರಸ್ಸು ಬಿರುಕು ಕಾಣಿಸಿಕೊಂಡಿತಂತೆ, ಶಿರಸ್ಸು ಕಳಚಿ ಬೀಳುವ ಸ್ಥಿತಿಯಲ್ಲಿತ್ತು. ಅದು ಊರಿಗೆ ಅಪತ್ಕಾಲದ ಸನ್ನಿವೇಶ ಎಂದು ಜನರು ಭಯಗೊಂಡರು. ಗ್ರಾಮದ ಗಣ್ಯರು ಸೇರಿ ಕಾನಮಡುವಿನ ಹತ್ತಿರ ಅದಕ್ಕೆ ಪರಿಹಾರ ಕಂಡುಕೊಳ್ಳಲು ಬಂದರು. ಅವರ ಕೋರಿಕೆಯ ಮೇರೆಗೆ ಶರಣರು ಅಮಲಾಪುರದ ಬಸವೇಶ್ವರ ದೇವಸ್ಥಾನಕ್ಕೆ ಬಂದು, ಬಸವಣ್ಣನ ಗುಡಿಯ ಬಾಗಿಲು ತೆಗೆಯುವುದಕ್ಕೆ ಮೊದಲು ಪೂಜಿಸಿದರು. ಇದರಿಂದ ಬಸವೇಶ್ವರ ಮೂರ್ತಿ ಸರಿಯಾಯಿತು ಎಂದು ಪ್ರತೀತಿ ಇದೆ".[೭]ಐತಿಹ್ಯಗಳು ಜನಸಾಮಾನ್ಯರಿಂದ ರೂಪುಗೊಂಡರೂ ಅವು ಅವರ ಹಿತಾಸಕ್ತಿ ಕಾಪಾಡಲು ಹುಟ್ಟಿಕೊಂಡವುಗಳಲ್ಲ, ಅವು ಲೋಕಗ್ರಹಿಕೆಯಿಂದ ಹುಟ್ಟಿಕೊಂಡವು ಎಂಬುದಕ್ಕೆ ಮೇಲಿನ

ಐತಿಹ್ಯವೇ ನಿರ್ದಶನವಾಗಿದೆ. ಯಾವದೇ ಒಂದು ದೇವಸ್ಥಾನವು ನಿರ್ಲಕ್ಷ್ಯಕ್ಕೆ ಒಳಗಾದರೆ ಆ ಊರಿಗೆ ಅಪತ್ಕಾಲ ಕಾದಿದೆ ಎನ್ನುವದು ಯಾರ ಹಿತಾಸಕ್ತಿಯನ್ನು ಕಾಪಾಡುತ್ತದೆ ಎಂಬುದನ್ನು ಯೋಚಿಸುವ ಅಗತ್ಯವಿದೆ.

**ಕುಮಾರಸ್ವಾಮಿ:** ಸಂಡೂರಿನಿಂದ ಸುಮಾರು ೧೨ಕಿ.ಮೀ ದೂರದಲ್ಲಿ ಕುಮಾರಸ್ವಾಮಿ ದೇವಸ್ಥಾನವಿದೆ. ಈ ದೇವಸ್ಥಾನದಲ್ಲಿ ಮಹಿಳೆಯರಿಗೆ ಪ್ರವೇಶವಿರಲಿಲ್ಲ. ಈ ಪ್ರವೇಶ ನಿರಾಕರಣೆಯ ಕುರಿತ ಕುಮಾರಸ್ವಾಮಿಯ ಐತಿಹ್ಯ ಹೀಗಿದೆ. ಕುಮಾರಸ್ವಾಮಿಯು ಮದುವೆಯ ವಯಸ್ಸಿಗೆ ಬಂದಿದ್ದರಿಂದ ಅವನ ತಾಯಿ ಅವನಿಗೆ ದಕ್ಷಿಣ ದೇಶದ ಕನ್ಯೆಯನ್ನು ನೋಡಿಕೊಂಡು ಬಂದಿದ್ದಳು. ಇದನ್ನು ಮಗನಿಗೆ ಹೇಳಲಾಗಿ, ಅವನು ಹುಡಿಗಿ ಹೇಗಿದ್ದಾಳೆ ಎಂದು ಕೇಳಲು, ಆಕೆಯು ನನ್ನಂತೆ ತುಂಬಾ ಸುಂದರವಾಗಿದ್ದಾಳೆ ಎನ್ನುತ್ತಾಳೆ. ಇದನ್ನು ಕೇಳಿದ ಕುಮಾರಸ್ವಾಮಿ ನಿನ್ನಂತೆ ಇದ್ದಾಳೆ ಎಂದರೆ ಅವಳು ತಾಯಿ ಸಮಾನ ಎನ್ನುತ್ತಾನೆ. ಅವನ ತಾಯಿ ಅವನಿಗೆ ಏನಲ್ಲಾ ರೀತಿಯಿಂದ ಒಪ್ಪಿಸಲು ಪ್ರಯತ್ನಿಸಿದರು ಅವನು ಒಪ್ಪಲಿಲ್ಲ. ಕೊನೆಗೆ ಅವಳು ಅವನನ್ನು ಕುರಿತು ಹೀಗೆ ಹೇಳುತ್ತಾಳೆ. ನಾನು ಹೆತ್ತು, ಹೊತ್ತು, ಎದೆಹಾಲು ಕುಡಿಸಿ ಸಾಕಿ ದೊಡ್ಡವನನ್ನಾಗಿ ಮಾಡಿದ್ದೇನೆ. ನೀನು ನನಗೆ ಕೊಡುವ ಪ್ರತಿಫಲ ಇದೇನಾ ಎಂದು ಹಂಗಿಸುತ್ತಾಳೆ. ಇದನ್ನು ಕೇಳಿದ ಕುಮಾರಸ್ವಾಮಿ ನನಗೆ ನಿನ್ನ ಹಂಗೆ ಬೇಡ ತೆಗದಿಕೊ ಎಂದು ಹಾಲನ್ನು ಕಕ್ಕುತ್ತಾನೆ. ಜೊತೆ ರಕ್ತವು ಹೊರ ಬರುತ್ತದೆ. ಹಾಲಿನ ಭಾಗವೆಲ್ಲಾ ವಿಭೂತಿಯ ಕಣಿವೆಯಾಯಿತು. ರಕ್ತದ ಭಾಗವೆಲ್ಲಾ ಜಾಜಿ ಕಣಿವೆಯಾಯಿತು ಎಂಬ ಐತಿಹ್ಯವಿದೆ. ಇಂದಿಗೂ ಅಲ್ಲಿಯ ವಿಭೂತಿ ತಿಂದರೆ ಒಳ್ಳೆಯದು ಎಂಬ ನಂಬಿಕೆ ಚಾಲ್ತಿಯಲ್ಲಿದೆ. ಕುಮಾರಸ್ವಾಮಿ ಬೆಟ್ಟದ ಮೇಲಿರುವ ಎಂಟು ಶಾಸನಗಳಲ್ಲಿ ಈ ಐತಿಹ್ಯಕ್ಕೆ ಸಂಬಂಧಿಸಿದಂತೆ ಯಾವುದೇ ಉಲ್ಲೇಖವನ್ನು ನೇರವಾಗಿ ಹೇಳುವುದಿಲ್ಲ. ಈ ಶಾಸನಗಳಲ್ಲಿ ಕೆಲವೊಂದು ಈ ದೇವಾಸ್ಥನಕ್ಕೆ ಧಾನ, ದತ್ತಿ ನೀಡಿರುವುದರ ಉಲ್ಲೇಖಗಳಿವ್ ಅದೇ ದೇವಾಲಯದ ಮಂಟಪದಲ್ಲಿರುವ ಶಾಸನ ರಾಷ್ಟ್ರಕೂಟವಂಶವನ್ನು[೧೦] ಪೌರಾಣಿಕವಾಗಿ ವರ್ಣಿಸುತ್ತದೆ. ಹಾಗೆಯೇ ಮುಂದುವರೆದು ಹೊಯ್ಸಳದೊರೆ ವೀರಬಲ್ಲಾಳನ ಆಜ್ಞೆಯಂತೆ ಅವನ ದಂಡನಾಯಕನಾದ ಮಹದೇವ ದಂಡನಾಯಕನು ಹಿಂದೆ ರಾಷ್ಟ್ರಕೂಟ ವಂಶದ ಕೃಷ್ಣರಾಜನು ಕುಮಾರಸ್ವಾಮಿ ದೇವರಿಗೆ ನೀಡಿದ್ದ ಕೆರೆಯಹಳ್ಳಿ ಗ್ರಾಮವನ್ನು ಪುನರ್ದತ್ತಿಯಾಗಿ ನೀಡುವ ವಿಷಯವನ್ನು ಒಳಗೊಂಡಿದೆ. ಆದರೆ ಕೆಲವು ಮಹಿಳೆಯರು ಇಂದಿಗೂ ಕುಮಾರಸ್ವಾಮಿ ಬೆಟ್ಟಕ್ಕೆ ಹೋದರೆ ಅಪಶಕುನವಾಗುತ್ತದೆ ಎಂಬ ನಂಬಿಕೆಯಿಂದ ಪ್ರವೇಶವಿದ್ದರೂ ಅಲ್ಲಿಗೆ ಹೋಗಲು ನಿರಾಕರಿಸುತ್ತಾರೆ. ಜನರಲ್ಲಿ ಶಾಸನ ಉಲ್ಲೇಖಿತ ಅಂಶಗಳಿಗಿಂತ ಐತಿಹ್ಯದಲ್ಲಿರುವ ಸಂಗತಿಗಳೆ ಹೆಚ್ಚು ಪ್ರಭಾವಿಸಿವೆ ಎನ್ನುವುದನ್ನು ಇದು ಧ್ವನಿಸುತ್ತದೆ.

**ಪಾರ್ವತಿ ಪರಮೇಶ್ವರ ದೇವಾಲಯ ಗುಡೇಕೋಟೆ:** ಐತಿಹಾಸಿಕ ಪ್ರಸಿದ್ಧ ಗುಡೇಕೋಟೆಯಲ್ಲಿ ಊರು ಹೊರಗಿರುವ ಈ ದೇವಾಲಯಕ್ಕೆ ಜನಪದರು ಈ ರೀತಿಯ ಐತಿಹ್ಯ ಹೇಳುತ್ತಾರೆ. ಪುರಾಣ ಪ್ರಸಿದ್ಧನಾದ ಭಾಣಾಸುರ ರಾಕ್ಷಸನ ಹುಟ್ಟೂರು ಗುಡೇಕೋಟೆ ಎಂದು ಹೇಳಲಾಗುತ್ತದೆ. ಇಲ್ಲಿ ಬಾಣಾಸುರನು ತಪಸ್ಸು ಮಾಡಿದನು. ಈ ತಪಸ್ಸಿಗೆ ಮೆಚ್ಚಿ ಶಿವನೇ ಆ ಪಟ್ಟಣವನ್ನು ಕಾಯುತ್ತಿದ್ದಾ, ಇದಕ್ಕೆ ಸಾಕ್ಷಿ ಎಂಬಂತೆ ಊರ ಹೊರಗಿರುವ ಶಿವ ಪಾರ್ವತಿಯರ ದೇವಾಲಯವೇ ಸಾಕ್ಷಿ ಎನ್ನುತ್ತಾರೆ.[೧೧]ಈ ಐತಿಹ್ಯವು ಜನಪದರ ನಂಬಿಕೆಯ ಭಾಗವಾಗಿ ಮೂಡಿದಂತಿದೆ. ಶಿವನು ಒಬ್ಬ ರಾಕ್ಷನ ಭಕ್ತಿ ಮತ್ತು ತಪಸ್ಸನ್ನು ಮೆಚ್ಚಿ ಈ ಊರನ್ನು ಕಾಯುತ್ತಾನೆ ಎನ್ನುವ ಅಂಶವು ಭಕ್ತಿ ಮತ್ತು ತಪಸ್ಸಿನ ಮಹತ್ವವನ್ನು ತಿಳಿಸುತ್ತದೆ. ಹಾಗೆಯೇ ಜನಪದರು ಈ ದೇವಸ್ಥಾನವು ಶಿವಪಾರ್ವತಿಯರು ವಾಸಸ್ಥಳವಾಗಿತ್ತು ಎನ್ನುವುದರ ಮೂಲಕ ಈ ಸ್ಥಳದ ಮಹತ್ವವನ್ನು ಪುರಾಣದ ಹಿನ್ನಲೆಯಲ್ಲಿ ಕಟ್ಟಿಕೊಂಡಂತಿದೆ. ಗುಡೇಕೋಟೆಯಲ್ಲಿ ಒಂದು ತ್ರುಟಿತ ಶಾಸನವಿದ್ದು ಅದರಲ್ಲಿ 'ಜಶಿರುವೈಯ ಮಗ ಕಟಿದ ದೇವರ...'[೧೨] ಎನ್ನುವ ಉಲ್ಲೇಖವಿದ್ದರೂ ಈ ಕುರಿತು ಸ್ಪಷ್ಟವಾದ ವಿವರ ದೊರೆಯುವುದಿಲ್ಲ.

**ಮೈಲಾರಲಿಂಗ:** ಕರ್ನಾಟಕದ ಬಳ್ಳಾರಿ, ಕೊಪ್ಪಳ, ಬೀದರ್, ಹಾವೇರಿ ಮುಂತಾದ ಭಾಗಗಳಲ್ಲಿ ಮೈಲಾರಲಿಂಗನ ದೇವಸ್ಥಾನಗಳಿವೆ. ಅಲ್ಲಿ ಈ ದೈವ ಸಂಬಂಧಿ ಆಚರಣೆಗಳು ನಡೆದುಕೊಂಡು ಬಂದಿವೆ ಮತ್ತು ನಡೆಯುತ್ತಿವೆ. ಆದರೆ ಹಡಗಲಿ ತಾಲೂಕಿನಲ್ಲಿರುವ ಮೈಲಾರಲಿಂಗ ತುಂಬ ಪ್ರಸಿದ್ಧಿ ಪಡೆದಿದೆ. ಈ ಮೈಲಾರ ಎನ್ನುವ ಹೆಸರು ಆ ದೈವ ನೆಲೆಸಿರುವ ಸ್ಥಳ. ಈ ಕುರಿತು ಐತಿಹ್ಯವು ಹೀಗಿದೆ. ಮೈಲಾರನು ಮಣಿ ಮತ್ತು ಮಲ್ಲಾಪುರ ಎನ್ನುವ ರಾಕ್ಷಾಸರನ್ನು(ಮಣಿಯನ್ನು ಹರಪನಹಳ್ಳಿಯಲ್ಲಿ, ಮಲ್ಲಾಪುರನನ್ನು ಹಡಗಲಿಯಲ್ಲಿ) ಸಂಹಾರ ಮಾಡಿದ. ಮೈಲಾರ ಅವರನ್ನು ಸಂಹಾರ ಮಾಡಿದನೆಂದು ತಿಳಿದ ಜನರು ಆತನನ್ನು ಮಲ್ಲಯ್ಯ, ಮೈಲಾರ, ಮೈಲಾರಲಿಂಗ ಎಂಬುದಾಗಿ ಹಲವು ನಾಮಗಳಿಂದ ಕರೆಯುತ್ತಾರೆ. ಮಲೆಯ(ಪರ್ವತ)ದ ಒಡೆಯ ಎಂದು ಇದರ ಅರ್ಥ. ಪಶುಪಾಲಕ ವೃತ್ತಿಯನ್ನು ಕೈಗೊಂಡ ಮೈಲಾರಲಿಂಗನು ಬುಡಕಟ್ಟು ಜನರ ಸಾಂಸ್ಕೃತಿಕ ನಾಯಕ. ಶ್ರೇಷ್ಠ ಶಿವನ ಭಕ್ತನಾಗಿದ್ದ ಮೈಲಾರಲಿಂಗನ ಜಾತ್ರೆಯೂ ಪ್ರತಿ ವರ್ಷ ಭಾರತ ಹುಣ್ಣಿಮೆಯೆಂದು ನಡೆಯುತ್ತದೆ. ಈಗಲೂ ಹರಪನಹಳ್ಳಿಯಲ್ಲಿ ಈ ಸಂಬಂಧಿ ಆಚರಣೆಗಳು ನಡೆದ ಮೂರುದಿನಕ್ಕೆ ಹಡಗಲಿಯಲ್ಲಿ ಮೈಲಾರನ ಆಚರಣೆಗಳು ನಡೆಯುತ್ತವೆ. ಮಣಿಯನ್ನು ಸಂಹರಿಸಿದ ಮೂರುದಿನಕ್ಕೆ ಮಲ್ಲಾರನನ್ನು ಸಂಹರಿಸಿದ್ದರ ಜ್ಞಾಪಕಾರ್ಥಕವಾಗಿ ಈ ಆಚರಣೆ ಇಂದಿಗೂ ಬೆಳೆದುಬಂದಿದೆ. ಈ ಕುರಿತು ಬೇರೆ ಬೇರೆ ಭಾಗಗಳಲ್ಲಿ ವಿಭಿನ್ನತೆಯಿಂದ ಕೂಡಿದ ಐತಿಹ್ಯಗಳಿವೆ. ಈ ಐತಿಹ್ಯಗಳಲ್ಲಿ ಹಿಂದೆ ಬ್ರಾಹ್ಮಣ ಸಮುದಾಯವು ಮಾಂಸಹಾರಿಗಳಾಗಿದ್ದು ಯಾಗಯಜ್ಞದಿಗಳಿಗಾಗಿ ಪಶುಗಳನ್ನು

ಬಲಿತೆಗೆದುಕೊಳ್ಳುತ್ತಿದ್ದರು. ಈ ಪರಿಣಾಮದಿಂದಾಗಿ ಬುಡಕಟ್ಟು ಸಮುದಾಯಗಳು ಶೋಷಣೆಗೆ ಒಳಗಾಗುತ್ತಿದ್ದವು. ಇದರ ವಿರುದ್ಧ ಈತನ ಹೋರಾಟವಿತ್ತೆಂದು ತಿಳಿದುಬರುತ್ತದೆ. ಈ ಮೇಲಿನ ಅಂಶವನ್ನು ಗಮನಿಸಿದಾಗ ಮೈಲಾರನು ಬುಡಕಟ್ಟು ಸಮುದಾಯದ ಅನನ್ಯತೆಯ ಭಾಗವಾಗಿ ಕಂಡುಬರುತ್ತಾನೆ. ಪ್ರತಿಯೊಂದು ಸಮುದಾಯಗಳು ಇಂದು ತಮ್ಮ ಆರಾಧ್ಯ ದೈವದ ಮೂಲಕ ತಮ್ಮನ್ನು ಗುರುತಿಸಿಕೊಳ್ಳುವುದು ಕಂಡುಬರುತ್ತದೆ. ಹೀಗೆ ಗುರುತಿಸಿಕೊಳ್ಳುವಾಗ ತಮ್ಮ ಸಮುದಾಯದ ಸಾಂಸ್ಕೃತಿಕ ನಾಯಕನನ್ನು ಪುರಾಣೀಕರಿಸುವುದು ಗೋಚರಿಸುತ್ತವೆ. ಈ ಸಾಂಸ್ಕೃತಿಕ ರಾಜಕಾರಣವು ಎಲ್ಲಾ ಸಮುದಾಯಗಳಲ್ಲೂ ಕಂಡುಬರುತ್ತದೆ. ಹೀಗಾಗಿ ಪ್ರತಿಯೊಂದು ಸಮುದಾಯವು ಜಗತ್ತಿನ ಹುಟ್ಟುವಿಕೆಗೆ ತಮ್ಮ ಸಮುದಾಯವೆ ಮೂಲವೆಂದು ಹೇಳುವ ಐತಿಹ್ಯಗಳು ಸಾಕಷ್ಟಿವೆ. ಇಂದು ಮೈಲಾರದಲ್ಲಿ ಆರು ಶಾಸನಗಳು ಮತ್ತು ಒಂದು ವೀರಗಲ್ಲು ಇದ್ದು ಮೈಲಾರಲಿಂಗನ ಚರಿತ್ರೆಯನ್ನು ಕುರಿತು ಮಾಹಿತಿಯನ್ನು ಉಲ್ಲೇಖಿಸಿಲ್ಲ. ಆದರೆ ಈ ದೇವಸ್ಥಾನದ ಉಲ್ಲೇಖವಿದೆ ಮತ್ತು ಈ ದೇವಾಸ್ಥನಕ್ಕೆ ನೀಡಿದ ದಾನ ದತ್ತಿಯನ್ನು, ಜೀರ್ಣೋದ್ಧಾರ, ಉತ್ಸವವನ್ನು ಕುರಿತ ವಿವರಗಳಿವೆ. ಹಾಗೆಯೇ ಮೈಲಾರಲಿಂಗ ದೇವಾಲಯದ ರಂಗಮಂಟಪದಲ್ಲಿರುವ ಶಾಸನ, ಮೈಲಾರನನ್ನು ಈ ಕೆಳಗಿನಂತೆ ಮಾಲಚೀಪತಿಯೆಂದು ಕರೆಯಲಾಗಿದೆ.

"ಣಾತು ಸ್ಯೋ ಮಾಲಚೀಪತಿರೀಶ್ವ ಮೈಲಾರೇತಿ ಪ್ರಸಿ

ದ್ಧೋಯಂ ಪಾತುವಃಶ್ಚಂದ್ರಸೇಖರಃ ಶ್ರೀ ಶ್ರೀ ಶ್ರೀ"[೧೩]

ಎಲ್ಲಮ್ಮ: ಹಳೇಕೋಟೆಯಲ್ಲಿರುವ ವೀರಭದ್ರ ದೇವಾಲಯ ಕುರಿತು ಐತಿಹ್ಯವು ಹೀಗಿದೆ. ಎಲ್ಲಮ್ಮ ಊರಿನ ದೇವತೆ. ಈ ದೇವತೆಗೆಂದು ಗುಡಿಯನ್ನು ಕಟ್ಟಿಸಿದರಂತೆ. ಒಮ್ಮೆ ಮಳೆಗಾಲದಲ್ಲಿ ಮಳೆ ಬಂದ ಕಾರಣ ವೀರಭದ್ರೇಶ್ವರ ಸ್ವಾಮಿ ಬೆಟ್ಟ(ಗುಡ್ಡ)ದ ಮೇಲಿನಿಂದ ಕೆಳಗೆ ಇಳಿದ. (ಬೆಟ್ಟದಲ್ಲಿ ಚಿಕ್ಕ ವೀರಭದ್ರ ಗುಡಿಯೂ ಇದೆ. ಕೆಳಗೆ ಇಳಿದು ಬಂದ ಎನ್ನುವುದಕ್ಕೆ ಪಾದಗಳ ಗುರುತುಗಳಿವೆ.) ಅಲ್ಲಿಂದ ಎಲ್ಲಮ್ಮನ ಗುಡಿಯೊಳಗೆ ಬರಲು ಎಲ್ಲಮ್ಮನ ಅಪ್ಪಣೆ ಪಡೆದು ಗುಡಿಯೊಳಗೆ ಸೇರಿದನಂತೆ, ಸ್ವಲ್ಪ ಹೊತ್ತಿಗೆ ಗುಡಿತುಂಬ ರುಮಾಲು ಬೆಟ್ಟಗಳನ್ನು ಮಾಡಿದನಂತೆ. ಆಗ ಎಲ್ಲಮ್ಮ ನಾನು ಹೋಗುತ್ತೇನೆ, ಮಂಗಳವಾರ ಮಾತ್ರ ಬರುತ್ತೇನೆ ಎಂದಳಂತೆ. ಪೂರ್ವಾಭಿಮುಖವಾಗಿ ಹೋಗಿ ಆದವಾನಿಯಲ್ಲಿ ನೆಲೆಸಿದಳೆಂದು ಪ್ರತೀತಿ ಇದೆ. ಇಂದು ಸಹ ಆದವಾನಿಯಲ್ಲಿ ಹಳೇಕೋಟೆ ಎಲ್ಲಮ್ಮ ಎಂದೂ ಪೂಜೆ ಸಲ್ಲಿಸುತ್ತಾರೆ. ಇಲ್ಲಿ ಪ್ರತಿ ಮಂಗಳವಾರ ಮಾತ್ರ ವೀರಭದ್ರನನ್ನು ಪಲ್ಲಕ್ಕಿಯಲ್ಲಿಟ್ಟು ಗುಡಿಯನ್ನು ಪ್ರದಕ್ಷಿಸುತ್ತ ಎಲ್ಲಮ್ಮವಾರದಂದು ಆಕೆಯನ್ನು ಪೂಜೆಯ ನೆಪದಲ್ಲಿ ಸ್ಮರಿಸುತ್ತಾರೆ. ಅದೇನೆ ಇರಲಿ ಎಲ್ಲಮ್ಮ ತನಗೆಂದೆ ನಿರ್ಮಿಸಿದ ದೇವಾಸ್ಥಾನದಲ್ಲಿ ವೀರಭದ್ರನ ಅಗಮನದಿಂದಾಗಿ ತನ್ನ ಅಸ್ತಿತ್ವವನ್ನೆ ಕಳೆದುಕೊಳ್ಳುವ ಸಂಕಟಕ್ಕೆ

ಒಳಗಾಗುತ್ತಾಳೆ. ಈಕೆ ಆ ಸಂಕೀರ್ಣ ಸಂದರ್ಭದಲ್ಲಿ ಅಲ್ಲಿಂದ ಹೊರಟು ಹೋದಳು ಎನ್ನುವ ಘಟನೆ, ಮಾತೃ ಪ್ರಧಾನ ವ್ಯವಸ್ಥೆಯಿಂದ ಪಿತೃ ಪ್ರಧಾನ ವ್ಯವಸ್ಥೆಗೆ ಹೇಗೆ ರೂಪುಗೊಂಡಿತು ಎನ್ನುವುದರ ಸಾಂಕೇತಿಕವಾಗಿ ಇಂತಹ ಐತಿಹ್ಯಗಳು ಜನಮಾನಸದಲ್ಲಿ ಬೆಳೆದು ಬಂದಿದೆ ಎನಿಸುತ್ತದೆ.

ಸಮಾಜದಲ್ಲಿ ಜೀವಿಸುವ ಮಾನವರಲ್ಲಿ ಕೆಲವರು ತಮ್ಮ ಸಿದ್ಧಿಸಾಧನೆಗಳಿಂದ ವಿಶಿಷ್ಟ ವ್ಯಕ್ತಿಗಳಾಗಿ ಕಾಣಿಸಿಕೊಳ್ಳುತ್ತಾರೆ. ಅವರು ಪವಾಡಗಳಿಂದ ಮೆರೆಯುವಂತವರು ಆಗಿರುತ್ತಾರೆ. ಜನರು ಇವರನ್ನು ಪುರಾಣೀಕರಿಸಿ ಪೂಜ್ಯಭಾವನೆಯಿಂದ ಕಾಣುವುದನ್ನು ಇಂದಿಗೂ ನೋಡಬಹುದು. ಹೀಗೆ ಸಮಾಜದ ಕಲ್ಯಾಣಕಾರ್ಯಗಳಲ್ಲಿ ತೊಡಗಿದ ಅನೇಕ ಮಹಾನೀಯರ ಕುರಿತು ಐತಿಹ್ಯಗಳು ಹುಟ್ಟಿಕೊಂಡಿವೆ. ಇದನ್ನು ಮುಂದಿನ ಐತಿಹ್ಯಗಳು ದೃಢಪಡಿಸುತ್ತವೆ. ಕಾಡುಸಿದ್ದೇಶ್ವರ ಬಳ್ಳಾರಿಯಿಂದ ತೆಕ್ಕಲಕೋಟೆಗೆ ಬಂದು ನೆಲಸಿದ್ದು, ಇಲ್ಲಿ ಜೀವ ಸಮಾಧಿಯಾದ ಒಬ್ಬ ತಾತ. ಆತ ಅಲ್ಲಿಗೆ ಬಂದಾಗಿನಿಂದ ಸ್ಮಶಾನದಲ್ಲಿ ವಾಸವಾದ, ಕೊನೆಯವರೆಗೆ ಇಲ್ಲಿಯೇ ಕಾಡಿನಲ್ಲಿ ಇದ್ದನಂತೆ. ಆದ್ದರಿಂದ ಆತನಿಗೆ ಕಾಡುಸಿದ್ದೇಶ್ವರ ಎಂದು ಹೆಸರು ಬಂತು. ಈ ಕಾಡು ಸಿದ್ದೇಶ್ವರ ೭೭೫ ವರ್ಷಗಳು ಬದುಕಿದ್ದನೆಂದು ನಂಬಿಕೆ ಇದೆ. ಇದಕ್ಕೆ ೭೭೫ ಬಾವಿಗಳು ತೆಕ್ಕಲಕೋಟೆಯ ಸುತ್ತಮುತ್ತ ಇವೆ ಎಂದು ಹೇಳುತ್ತಾರೆ. ಒಮ್ಮೆ ಒಬ್ಬ ಮುದುಕಿ ಹೀಗೆಂದಳಂತೆ, ಹದ್ದು ಬಾಳಿದಾಂಗ ಬಾಳಿದ ಸಿದ್ದಪ್ಪ ನಿನ್ನ ಸದ್ದು ಅಡಗಲಿಲ್ಲವೋ, ಅದಕ್ಕೆ ಮರುದಿನವೇ ಕಾಡುಸಿದ್ದೇಶ್ವರ ಐಕ್ಯರಾದರಂತೆ ಎಂದು ಸಿದ್ದೇಶ್ವರನ ಬಗ್ಗೆ ವಿವರಣೆ ನೀಡುತ್ತಾರೆ

ಯಶವಂತನಗರದ ಸಿದ್ಧರಾಮೇಶ್ವರ ಮಠವನ್ನು ಕುರಿತ ಐತಿಹ್ಯ ಆ ಮಠದ ಚರಿತ್ರೆಯನ್ನು ಒಳಗೊಂಡಿದೆ. ಸಂಡೂರು ತಾಲೂಕಿನಲ್ಲಿ ಇರುವ ಕಣಿವೆಹಳ್ಳಿ ಗ್ರಾಮವು ದಟ್ಟವಾದ ಬೆಟ್ಟ-ಗುಡ್ಡಗಳಿಂದ ಆವೃತ್ತವಾಗಿತ್ತು. ದೊಡ್ಡ ದೊಡ್ಡ ಸೀಗೆಯ ಪೊದೆಗಳು ಅಲ್ಲಿದ್ದವು. ಊರಿನ ಜನ ಅಲ್ಲಿ ಬೆಟ್ಟ ಗುಡ್ಡಗಳಲ್ಲಿ ದನಕರುಗಳನ್ನು ಮೇಯಿಸುತ್ತಿದ್ದರು. ಒಂದು ದಿನ ವೀರಬಸಪ್ಪ ಎಂಬ ರೈತನು ಬಂಜೆ ಆಕಳು ಸೀಗೆಯ ಪೊದೆಯ ಮರೆಯಲ್ಲಿ ನಿಂತು ಹಾಲು ಕರೆದಿದ್ದನ್ನು ನೋಡಿದ. ಬೆರಗಾಗಿ ಸಮೀಪ ಹೋಗಿ ನೋಡಿದಾಗ ಅಲ್ಲಿ ಶಿವಲಿಂಗದಂತಿರುವ ಮೂರ್ತಿ ಅವನಿಗೆ ಕಂಡಿತಂತೆ. ಬಂಜೆಯಾಗಿದ್ದ ತನ್ನ ಆಕಳು ಇದ್ದಕ್ಕಿದ್ದಹಾಗೆ ಹಾಲು ಕರೆಯಬೇಕಾದರೆ ಇದು ಆ ಸ್ಥಳದ ಮಹಾತ್ಮೆ ಇರಬೇಕೆಂದು ಭಾವಿಸಿ, ಆತ ಆ ಊರಿನ ಮುಖಂಡರಿಗೆ ವಿಷಯ ತಿಳಿಸಿದ. ಆ ವೇಳೆಗೆ ಅಲ್ಲಿಗೆ ಆಗಮಿಸಿದ ಸ್ವಾಮಿಗಳೊಬ್ಬರ ಹಿರಿತನದಲ್ಲಿ ಊರ ಪ್ರಮುಖರೆಲ್ಲ ಸೇರಿ ಆ ಸೀಗೆ ಪೊದೆಯ ಸ್ಥಳದಲ್ಲಿ ಒಂದು ಮಠವನ್ನು ನಿರ್ಮಿಸಿದರಂತೆ. ಅಂದಿನಿಂದ ಸಿದ್ಧರಾಮ ಸ್ವಾಮಿಗಳ ಸನ್ನಿಧಿಯಲ್ಲಿ ಹುಟ್ಟಿದ ಆ ಮಠಕ್ಕೆ ಸಿದ್ಧರಾಮೇಶ್ವರ ಮಠ ಎಂಬ ಹೆಸರು ಬಂತು ಎಂದು ಹೇಳಲಾಗುತ್ತದೆ.

ಐತಿಹ್ಯಗಳನ್ನು ಕಾಲಾನುಕ್ರಮಣಿಕೆಯಲ್ಲಿ ನೋಡಲಾಗುವುದಿಲ್ಲ. ಇವು ಭೂತ ಮತ್ತು ವರ್ತಮಾನದ ಸಮೀಕರಣದೊಂದಿಗೆ ರೂಪುಗೊಂಡವು. ಪರಿವರ್ತಿತ ಸಮಾಜದಲ್ಲಿ ಆಯಾ ಕಾಲದ ಒತ್ತಡದ ಹಿನ್ನಲೆಯಲ್ಲಿ ಕೆಲವು ಅಂಶಗಳನ್ನು ಮೈಗೂಡಿಸಿಕೊಂಡು ಮೌಖಿಕ ಪರಂಪರೆಯಲ್ಲಿ ಬೆಳೆದು ಬಂದಿವೆ. ಹಲವು ಮತ ಧರ್ಮ, ಜನಸಮುದಾಯದಿಂದ ಕೂಡಿದ ಈ ಪ್ರದೇಶದಲ್ಲಿ ಆಯಾ ಧಾರ್ಮಿಕ ಮತಪಂಥಗಳ ಹಿನ್ನಲೆಯಲ್ಲಿ ಅವುಗಳನ್ನು ಪುರಾಣೀಕರಿಸಲಾಗಿದೆ. ಆಯಾ ಧರ್ಮದ ಹಿನ್ನಲೆಯಲ್ಲಿ ಹುಟ್ಟಿಕೊಂಡ ಐತಿಹ್ಯಗಳು ಆಯಾ ಸಮುದಾಯದ ಚಾರಿತ್ರಿಕವಾದ ಸಂಗತಿಗಳನ್ನು ಒಳಗೊಂಡಿದ್ದು, ಸಾಂಸ್ಕೃತಿಕ ಇತಿಹಾಸ ರಚನೆಗೆ ಇವು ಮಹತ್ವದ ಒಳಸುಳಿವುಗಳನ್ನು ನೀಡುತ್ತವೆ ಎಂದು ಒತ್ತಿ ಹೇಳಬೇಕಾಗಿದೆ. ಹೀಗೆಂದ ಮಾತ್ರಕ್ಕೆ ಆಯಾ ಧರ್ಮಕ್ಕೆ ಅವುಗಳು ಸೀಮಿತವಾಗಿಲ್ಲ. ಅವು ಕಾಲವನ್ನು ಮೀರಿದಂತೆ, ಧರ್ಮವನ್ನು, ಜಾತಿಜನಾಂಗವನ್ನು ಮೀರಿದ ದೈವ ಸಂಬಂಧಿ ಐತಿಹ್ಯಗಳಿವೆ. ಇಲ್ಲಿ ನೆಲೆಗೊಂಡಿರುವ ಬಹುಪಾಲು ಐತಿಹ್ಯಗಳು ಪುರಾಣದ ಹಿನ್ನಲೆಯಾಗಿ ಗುರುತಿಸಿಕೊಂಡಿರುವುದು ನಮಗೆ ಅನೇಕ ಆಧಾರಗಳಿಂದ ತಿಳಿದುಬರುತ್ತದೆ. ಅದೇ ಮುಂದೆ ಕಾಲ ಬದಲಾದಂತೆ ಐತಿಹಾಸಿಕ ಘಟನೆಗಳೊಂದಿಗೆ ಸಮೀಕರಿಸಲಾಗುತ್ತದೆ.

**೫.೨ ವ್ಯಕ್ತಿಪ್ರಧಾನ ಐತಿಹ್ಯಗಳು**

ಮಾನವರು ತಮ್ಮ ದಿನನಿತ್ಯದ ಬದುಕಿನಲ್ಲಿ ಅನೇಕ ಸಮಸ್ಯೆಗಳಿಗೆ ತುತ್ತಾಗುತ್ತಾರೆ. ಇಂತಹ ಸಂದರ್ಭದಲ್ಲಿ ತನ್ನೊಂದಿಗೆ ಬದುಕುತ್ತಿರುವ ಸಮಾಜಕ್ಕೆ ಉಂಟಾದ ಸಮಸ್ಯೆಗಳಿಗೂ ಪರಿಹಾರ ಕಂಡುಕೊಳ್ಳಲು ಪ್ರಯತ್ನಿಸುತ್ತಾರೆ. ಪ್ರಯತ್ನಕ್ಕೆ ತಕ್ಕ ಪ್ರತಿಫಲ ದೊರೆತಾಗ ಸಾಮಾನ್ಯ ವ್ಯಕ್ತಿಗಳಿಗಿಂತ ಭಿನ್ನರಾಗುತ್ತಾರೆ. ಕಷ್ಟ ಪರಿಹರಿಸಿದ ವ್ಯಕ್ತಿಗಳನ್ನು ಜನಸಮುದಾಯವು ಪ್ರತ್ಯಕ್ಷದೇವರ ಸ್ವರೂಪದಲ್ಲಿ ಕಾಣುತ್ತಾರೆ. ಇಂತಹ ವಿಶಿಷ್ಟ ವ್ಯಕ್ತಿಗಳ ಸುತ್ತ ಹುಟ್ಟಿಕೊಂಡಿರುವ ಐತಿಹ್ಯಗಳನ್ನು ವ್ಯಕ್ತಿಪ್ರಧಾನ ಐತಿಹ್ಯಗಳೆಂದು ಕರೆಯುತ್ತಾರೆ. ಇವನ್ನು ಮುಂದಿನ ತಲೆಮಾರಿಗೆ ತಿಳಿಸುವುದು ಆ ಮೂಲಕ ಜನರಲ್ಲಿ ಸೇವಾ ಮನೋಭಾವನೆ ಬೆಳೆಯಲು ಸಹಕಾರಿಯಾಗುತ್ತವೆ. ಹಾಗೆಯೇ ಗುರುಹಿರಿಯರಲ್ಲಿ ಭಕ್ತಿ ಭಾವನೆಯನ್ನು ಉಂಟುಮಾಡುವುದರೊಂದಿಗೆ ನೈತಿಕ ಶಿಕ್ಷಣವನ್ನು ನೀಡುವಲ್ಲಿ ಇವುಗಳ ಪಾತ್ರ ಮಹತ್ವದ್ದಾಗಿದೆ. ಐತಿಹ್ಯಗಳು ಯಾವ ಮಾಹಿತಿಯನ್ನು ಹೊತ್ತುಸಾಗುತ್ತವೆ ಎಂಬುದನ್ನು ಕೆಲವು ಐತಿಹ್ಯಗಳ ಹಿನ್ನಲೆಯಲ್ಲಿ ಚರ್ಚಿಸಲಾಗುವುದು

**ಒಪ್ಪತೇಶ್ವರ ಸ್ವಾಮಿ:** ಪ್ರೌಢದೇವರಾಯ ನಿಧನರಾದ ಮೇಲೆ ಆತನೊಂದಿಗೆ ಅನೋನ್ಯತೆಯ ಸಂಬಂಧದಿಂದ ಬೆಳೆದಿದ್ದ ನೂರಾರು ಜನ ವಿರಕ್ತರು ಅವರ ಅಗಲಿಕೆಯಿಂದ ಶೋಕಿತರಾಗಿ ನಾಡಿನೆಲ್ಲಡೆ ಒಬ್ಬೊಬ್ಬರಾಗಿ ಸಂಚಾರ ಹೊರಟರು. ಅವರಲ್ಲಿ ಒಬ್ಬರಾದ ಶ್ರೀ ಗುರು ಒಪ್ಪತ್ತಯ್ಯ

ಎನ್ನುತ್ತಾರೆ. ಇವರನ್ನು ಒಪ್ಪತ್ತಯ್ಯ, ಒಪ್ಪತ್ತಿನ ಅಯ್ಯ ಮುಂತಾದ ಪರ್ಯಾಯ ನಾಮಗಳಿಂದ ಕರೆಯುತ್ತಿದ್ದರು. ಕಲ್ಯಾಣ ಕಾರ್ಯಗಳನ್ನು ಕೈಗೊಂಡು ಅಂದಿನ ಮ್ಯಾಸರಹಟ್ಟಿ ಗ್ರಾಮದಲ್ಲಿ ನೆಲೆಸಿದರು. ಕಥೆ, ವೇದ, ಪುರಾಣ, ಪ್ರವಚನ ಮೂಲಕ ಆಧ್ಯಾತ್ಮಿಕ ಮೌಲ್ಯವನ್ನು ಸಾರಿ, ಸಮಸ್ತ ಜನತೆಗೆ ಐಕ್ಯತೆ ಮತ್ತು ಶಾಂತಿಯನ್ನು ಎಲ್ಲಡೆ ಭಕ್ತಿಯ ಪರಿಸರ ನಿರ್ಮಾಣ ಮಾಡಿದರು. ಜನತೆ ಅವರನ್ನು ಭಕ್ತಿ ಗೌರವದಿಂದ ಕಂಡು ತಮ್ಮ ಬದುಕುನ್ನು ಹಸನಾಗಿಸಿಕೊಂಡರು. ಸುತ್ತಮುತ್ತಲಿನ ಗ್ರಾಮಗಳಿಗೂ ಅವರ ದಿವ್ಯಜ್ಞಾನ ಕೀರ್ತಿ ಹಬ್ಬತೊಡಗಿತು. ಕಾಲಂತರದಲ್ಲಿ ಒಪ್ಪತ್ತಿನ ಅಯ್ಯ ಅಭಯಾರಣ್ಯದಂತಿದ್ದ ಮ್ಯಾಸರಹಟ್ಟಿ ಗ್ರಾಮದಲ್ಲಿ ಜೀವಂತ ಸಮಾಧಿಯಾದರು ಎಂದು ಐತಿಹ್ಯವಿದೆ. ಮೌಖಿಕ ಪರಂಪರೆಯಲ್ಲಿ ಉಳಿದುಬಂದ ಈ ಐತಿಹ್ಯವು ಪ್ರೌಢದೇವರಾಯನು ಶೈವ ಧರ್ಮಕ್ಕೆ ರಾಜ ಮನ್ನಣೆಯನ್ನಿತ್ತು ಅದನ್ನು ರಾಜ ಧರ್ಮವೆಂದು ಘೋಷಿಸಿದ್ದ. ಅನೇಕ ಶೈವ ವಿರಕ್ತರಿಗೆ ಅಧ್ಯತೆ ನೀಡಿದ್ದನು. ಆತನ ಮರಣದ ನಂತರ ವಿರಕ್ತರಿಗೆ ಹಂಪಿಯಲ್ಲಿ ನೆಲೆಯಿಲ್ಲದೆ ಅವರು ದೇಶ ಸಂಚಾರ ಹೊರಟ ವಿಚಾರವನ್ನು ಒಳಗೊಂಡಿವೆ. ಇಲ್ಲಿ ಒಪ್ಪತ್ತೇಶ್ವರನನ್ನು ಸಂಕೇತಿಕವಾಗಿಟ್ಟುಕೊಂಡು ವಿರಕ್ತರ ಸ್ಥಿತಿಗತಿಗಳನ್ನು ಅಭಿವ್ಯಕ್ತಿಸುತ್ತದೆ ಎಂದು ಹೇಳಬಹುದಾಗಿದೆ. ಒಪ್ಪತ್ತೇಶ್ವರ ಪವಾಡ ಸದೃಶದಂತೆ ಕಂಡು ಆತನನ್ನು ದೈವಿಕರಿಸಿ ಇಂದು ಪುರಾಣದ ವ್ಯಕ್ತಿಯಾನ್ನಾಗಿಸಿದ ಈ ಐತಿಹ್ಯವು ಅಂದಿನ ಚರಿತ್ರೆಯ ಮೇಲೆ ಬೆಳಕು ಚೆಲ್ಲುತ್ತದೆ. ಅಂದರೆ ಶೈವ ಮತದ ಅವನತಿ ಮತ್ತು ವೈಷ್ಣವ ಮತದ ಉಗಮವನ್ನು ಈ ಐತಿಹ್ಯ ಸಾಂಕೇತಿಸುತ್ತದೆ ಎಂದು ಹೇಳಬಹುದಾಗಿದೆ.

ಒಪ್ಪತ್ತೇಶ್ವರಸ್ವಾಮಿ ಐಕ್ಯವಾದ ಸ್ಥಳದಲ್ಲಿ ನಂತರ ಆಡಳಿತ ಮಾಡಿದ ಸದಾಶಿವರಾಯನ ಹೆಂಡತಿ ಒಪ್ಪತ್ತೇಶ್ವರ ಮಠವನ್ನು ನಿರ್ಮಿಸಿದ್ದಾರೆ ಎನ್ನುವುದನ್ನು ಕುರಿತು ಐತಹ್ಯವಿದೆ. ವಿಜಯನಗರ ಕಾಲಕ್ಕೆ ಸಂಬಂಧಿಸಿದಂತೆ ಸದಾಶಿವರಾಯನ ದಂಡ ನಾಯಕನಾದ ಮಲ್ಲಣ್ಣ ನಾಯಕನು ಬೇಟೆಗಾಗಿ ಇಲ್ಲಿನ ಅರಣ್ಯಕ್ಕೆ ಬಂದಿದ್ದಾಗ, ಅಲ್ಲಿ ವಿಶಿಷ್ಟವಾದ ಗದ್ದಿಗೆಯನ್ನು ಕಂಡು ಆಕರ್ಷಿತನಾಗಿ ಅರಸನ ಬಳಿ ಹೇಳಿದನು. ಸ್ವತಃ ಸದಾಶಿವರಾಯನು ತನ್ನ ಪತ್ನಿ ನಾಗಲಾದೇವಿ ಮತ್ತು ಪರಿವಾರ ಸಹಿತವಾಗಿ ಬೇಟೆಯಾಡಲು ನಾಗಲಾಪುರ ಪ್ರದೇಶಕ್ಕೆ ಬಂದನು. ಬೇಟೆಯಾಡಿ ಅವರೆಲ್ಲರು ವಿಶ್ರಾಂತಿ ಪಡೆಯುತ್ತಿರಲು, ವಿಶಿಷ್ಟವಾದ ಪ್ರಭೆಯೊಂದು ರಾಣಿಗೆ ಕಂಡುಬಂದಿತು. ರಾಣಿ ಅದನ್ನು ಹಿಂಬಾಲಿಸಿಕೊಂಡು ಹೋಗಲು ಆ ಪ್ರಭೆಯು ಗದ್ದಿಗೆಯಲ್ಲಿ ಲೀನವಾಯಿತು. ಆಗ ಗದ್ದುಗೆಯಲ್ಲಿ ಸಮಾಧಿ ಹೊಂದಿದ ಸಾಧುವೊಬ್ಬನು ಕಾಣಿಸಿಕೊಂಡು ತಾನು ಒಪ್ಪತ್ತೇಶ್ವರಸ್ವಾಮಿಯೆಂದು ಬಹಳ ವರ್ಷಗಳ ಹಿಂದೆ ತಾನಿಲ್ಲಿ ಸಮಾಧಿ ಹೊಂದಿದನೆಂದು ತಿಳಿಸಿ ಅದೃಶ್ಯವಾದನು. ಆಗ ಮೊದಲು ಕಂಡ ಪ್ರಭೆಯು ಪುನಃ ಕಾಣಿಸಿಕೊಂಡು ಆಕೆಯನ್ನು ಯಥಾಸ್ಥಾನಕ್ಕೆ ಕರೆದೊಯ್ಯಿತು. ರಾಣಿಯು ನಡೆದ ಘಟನೆಯನ್ನು ರಾಜನಿಗೆ ಹೇಳಲಾಗಿ ಆಗ

ಇಬ್ಬರೂ ಒಂದು ತೀರ್ಮಾನಕ್ಕೆ ಬಂದು ಆ ಗದ್ದಿಗೆಯ ಎದುರು ಭಾಗದಲ್ಲಿ ದೇವಾಲಯವೊಂದನ್ನು ನಿರ್ಮಿಸಿ ಅದನ್ನು ಒಪ್ಪತೇಶ್ವರ ದೇವಾಲಯವೆಂದು(ಮಠ) ಕರೆದರು. ಮುಂದೆ ನಾಗಲಾದೇವಿಯಿಂದಾಗಿ ಆ ಊರಿಗೆ ನಾಗಲಾಪುರ ಎಂಬ ಹೆಸರು ಪ್ರಾಪ್ತವಾಯಿತೆಂದು ಪ್ರತೀತಿ.

ಹರಿಹರ-ರಾಘವಾಂಕರ ಬಗ್ಗೆ: ಹರಿಹರ-ರಾಘವಾಂಕರು ವಿಜಯನಗರ ಸಾಮ್ರಾಜ್ಯದಲ್ಲಿ ಇದ್ದಂತಹ ಕವಿಗಳು. ಇವರ ಕುರಿತು ಐತಿಹ್ಯ ಹೀಗಿದೆ. ರಾಘವಾಂಕ ಹರಿಶ್ಚಂದ್ರ ಕಾವ್ಯವನ್ನು ಬರೆದು ಹರಿಹರನಿಗೆ ತೋರಿಸಲು, ಅದು ಭೂ ರಮಣನ ಕಥೆಯೆಂದು ಆತ ಒಪ್ಪಿಕೊಳ್ಳದೇ ತಿರಸ್ಕರಿಸುವನು. ಏಕೆಂದು ಶಿಷ್ಯ ರಾಘವಾಂಕ ಕೇಳಲು, ಹರಿಶ್ಚಂದ್ರನಿಗೆ ದೇವರು ಕರುಣಿಸಿದಾಗ ಕೈವಲ್ಯವನ್ನು ಪಡೆಯದೆ ತಿರುಗಿ ಸಾಮ್ರಾಜ್ಯವನ್ನು ಪಡೆದನಲ್ಲ ಆದ್ದರಿಂದ ಆತ ಭಕ್ತನಲ್ಲ ಎನ್ನುವನು. ಆದರೆ ಶಿಷ್ಯ ಸುಮ್ಮನಿರದೆ ಆತ ಸತ್ಯಕ್ಕಾಗಿ ತನ್ನ ಸತಿ-ಸುತರನಲ್ಲದೆ ತನ್ನನ್ನು ಮಾರಗೊಂಡನಲ್ಲ, ಆದ್ದರಿಂದ ಹರಿಶ್ಚಂದ್ರ ದೊಡ್ಡವನು ಎಂದು ಮುಂತಾಗಿ ವಾದಿಸುವನು. ಇದರಿಂದ ಕುಪಿತನಾದ ಹರಿಹರ ತನ್ನ ಮೆಟ್ಟಿಗೆಗಳಿಂದ ರಾಘವಾಂಕನ ಮುಸುಡಿಗೆ ಒಡೆಯುತ್ತಾನೆ. ರಾಘವಾಂಕನ ಹಲ್ಲುಗಳು ಧರೆಗುಳಿದವು. ನಂತರ ಕವಿ ಧಾರ್ಮಿಕ ಕಾವ್ಯಗಳನ್ನು ಬರೆದು ಗುರು ಕಾರಣಕ್ಕೆ ಒಳಗಾಗಿ ಮತ್ತೆ ಹಲ್ಲುಗಳನ್ನು ಪಡೆದನು. ಹರಿಹರ ರಾಘವಾಂಕರ ಕಾವ್ಯಧೋರಣೆಯನ್ನು ಕುರಿತು ಹೇಳುವ ಸಂದರ್ಭದಲ್ಲಿ ಈ ಐತಿಹ್ಯಕ್ಕೆ ಪೂರಕವಾದ ಕತೆಯೊಂದನ್ನು ಸಾಹಿತ್ಯ ಚರಿತ್ರೆಕಾರರು ಉಲ್ಲೇಖಿಸಿದ್ದಾರೆ. ಈ ಐತಿಹ್ಯವೇ ಕತೆಯ ಹುಟ್ಟಿಗೆ ಕಾರಣವಾಯಿತೊ ಅಥವಾ ಕತೆಯೇ ಐತಿಹ್ಯದ ಹುಟ್ಟಿಗೆ ಕಾರಣವಾಯಿತೋ ಎನ್ನುವುದು ಮುಖ್ಯವಲ್ಲ. ಆದರೆ ಈ ಕತೆ ಒಳಗೊಂಡ ಮಾಹಿತಿ ಮತ್ತು ಅದರಿಂದ ಉಂಟಾದ ಪರಿಣಾಮ ಯಾವ ಸ್ವರೂಪದ್ದು ಎನ್ನುವುದು ಬಹಳ ಮುಖ್ಯವಾದದು. ಈ ಮೇಲಿನ ಎರಡು ಅಭಿಪ್ರಾಯಗಳು ಆ ಕಾಲದ ಒತ್ತಾಸೆಗಳನ್ನೆ ಹೇಳುತ್ತವೆ. ಧಾರ್ಮಿಕ ಸಂಘರ್ಷದ ಕಾಲವದು. ಆ ಕಾಲದಲ್ಲಿ ಶೈವ, ವೈಷ್ಣವ, ಜೈನ ಮತಧರ್ಮಗಳ ಮಹತ್ವವನ್ನು ಹೇಳುವುದರ ಕಡೆ ಅಂದಿನ ಕವಿಗಳು ಪ್ರಯತ್ನಿಸುತ್ತಿದ್ದರು. ಅಂತಹ ಸಂದಂರ್ಭದಲ್ಲಿ ರಾಘವಾಂಕ ಹರಿಶ್ಚಂದ್ರ ಕಾವ್ಯ ಬರೆಯುವುದಕ್ಕಿಂತ ಶೈವ ಮತಕ್ಕೆ ಸಂಬಂಧಿಸಿದ ಶಿವಶರಣರನ್ನು ಕುರಿತು ಕಾವ್ಯರಚನೆ ಮಾಡಿ ಆ ಧರ್ಮದ ಅನನ್ಯತೆಯನ್ನು ಕಾಪಾಡಬೇಕೆನ್ನುವ ಹರಹರನ ಧೋರಣೆಯನ್ನು ಇದು ಅಭಿವ್ಯಕ್ತಿಸುತ್ತದೆ. ಪ್ರಸ್ತುತ ಸಂದರ್ಭದಲ್ಲಿ ಆಯಾ ಮತಧರ್ಮದ ಸೃಜನಶೀಲ ಬರಹಗಾರರು, ಅಧ್ಯಯನಕಾರರು, ಚಳುವಳಿಕಾರರು, ಧಾರ್ಮಿಕ ಸುಧಾರಣವಾದಿಗಳು ತಮ್ಮ ಮತಧರ್ಮಗಳ ಚಾರಿತ್ರಿಕ, ಪೌರಾಣಿಕ ವ್ಯಕ್ತಿಗಳನ್ನು ವಸ್ತುವನ್ನಾಗಿಸಿಕೊಂಡು ಕೃತಿ ರಚನೆಗೈದಿರುವುದು ಕಾಣಸಿಗುತ್ತವೆ. ಇದಕ್ಕೆ ಅಂದಿನ ಆ ಕಾವ್ಯಧೋರಣೆಯಂಥ ಸಂಗತಿಗಳು ಇಂದಿನ ಬರಹಗಾರರ ಮೇಲೆ

ಪರಿಣಾಮ ಬೀರಿವೆ ಎಂದು ಹೇಳಬಹುದು. ಇದರಿಂದಾಗಿ ಮತಧರ್ಮಗಳಲ್ಲಿ ಶ್ರೇಷ್ಠ ಮತ್ತು ಕನಿಷ್ಠವೆನ್ನುವ ಧೋರಣೆಯು ಕೋಮುವಾದ ಬೆಳೆಯಲು ಅವಕಾಶ ಮಾಡಿಕೊಡುತ್ತವೆ.

ತಳವಾರಪ್ಪನಕಲ್ಲು: "ಹಂಪಿಯ ವಿರೂಪಾಕ್ಷೇಶ್ವರ ದೇವಸ್ಥಾನದ ಮುಂದಿರುವ ಒಂದು ಕಲ್ಲನ್ನು ತಳವಾರಪ್ಪನ ಕಲ್ಲು ಎಂದು ಕರೆಯುತ್ತಾರೆ. ಇದರ ಕುರಿತು ಐತಿಹ್ಯ ಹೀಗಿದೆ. ಈತನು ಬಟ್ಟೆ ಸ್ವಚ್ಛಗೊಳಿಸುವ ಕಾಯಕವನ್ನು ಮಾಡಿಕೊಂಡಿದ್ದನು. ಹಾಗೆಯೇ ಹಂಪಮ್ಮ ಪಂಪಾಪತಿಯ ಶಯನ ಗೃಹವನ್ನು ಸ್ವಚ್ಛಗೊಳಿಸುವ ಕಾಯಕವನ್ನು ಮಾಡಿಕೊಂಡಿದ್ದ. ಹಂಪಮ್ಮ ಮತ್ತು ಪಂಪಾಪತಿ ಜಾತ್ರೆಯ ಸಂದರ್ಭದಲ್ಲಿ ಮನುಷ್ಯ ರೂಪ ತಾಳಿ ಒಂದುಗೂಡುವರೆಂದು ತಿಳಿದಿದ್ದ ತಳವಾರಪ್ಪನು, ಅವರು ನಿಜರೂಪ ತಾಳುವುದನ್ನು ನೋಡಬೇಕೆಂದು ಶಯನ ಗೃಹದ ಮಂಚದ ಕೆಳಗೆ ಅಡಗಿ ಕುಳಿತನು. ಹಂಪಮ್ಮ ಪಂಪಾಪತಿಯು ಮಧ್ಯರಾತ್ರಿಯಲ್ಲಿ ಮನುಷ್ಯ ರೂಪ ಪಡೆದು ಒಂದುಗೊಳ್ಳುವ ಸಂದರ್ಭದಲ್ಲಿ ಹಂಪಮ್ಮಳಿಗೆ ನರ ಮನುಷ್ಯರು ಅಲ್ಲಿರುವುದು ತಿಳಿದುಬರುತ್ತದೆ. ಅವನನ್ನು ಮಂಚದ ಅಡಿಯಿಂದ ಹೊರಬರುವಂತೆ ಪಂಪಾಪತಿಯು ಹೇಳುತ್ತಾನೆ. ಹೊರಬಂದ ತಳವಾರಪ್ಪನನ್ನು ಯಾಕಾಗಿ ಅಡಗಿ ಕುಳಿತಿರುವೆ ಎಂದು ಕೇಳಲು, ಅವನು ನಿಮ್ಮ ದರ್ಶನಕ್ಕಾಗಿ ಎಂದು ಹೇಳುತ್ತಾನೆ. ಸರಿ ಎಂದು ದರ್ಶನವಿತ್ತು, ನೀನು ಹೋಗು, ಆದರೆ ಹೊಗಬೇಕಾದರೆ ಹಿಂದುರಿಗಿ ನೋಡಬೇಡ, ನೋಡಿದರೆ ಕಲ್ಲಾಗುತ್ತಿಯ ಎಂದು ಎಚ್ಚರಿಕೆಯನ್ನು ಕೊಡುತ್ತಾರೆ. ಆದರೆ ತಳವಾರಪ್ಪನು ಹೋಗಬೇಕಾದರೆ ಹಿಂದುರಿಗಿ ನೋಡುತ್ತಾನೆ. ತಕ್ಷಣ ತಳವಾರಪ್ಪನ ತಲೆ ಸಿಡಿದು ಎರಡು ಹೋಳಾಗುತ್ತದೆ ಮತ್ತು ಆ ಹೋಳುಗಳು ಕಲ್ಲಾಗುತ್ತವೆ. ಆ ಕಲ್ಲನ್ನು ವಿರೂಪಾಕ್ಷಿ ದೇವಸ್ಥಾನದ ಗರ್ಭಗುಡಿಯ ಹೊರಗಡೆ ನಿಲ್ಲಿಸಿದ್ದಾರೆ. ಅಂದಿನಿಂದ ಆ ಕಲ್ಲನ್ನು ತಳವಾರಪ್ಪನ ಕಲ್ಲು ಎಂದು ಕರೆಯುತ್ತಾರೆ. ಇಂದಿಗೂ ಜನಸಾಮನ್ಯರು ಆ ಕಲ್ಲನ್ನು ಪೂಜಿಸುತ್ತಾರೆ".[೧೪] ಸಾಮಾನ್ಯ ಪ್ರಜೆಯಾಗಿದ್ದ ತಳವಾರಪ್ಪನ ವೃತ್ತಿ ಮತ್ತು ಆತನು ದೇವರ ದರ್ಶನವನ್ನು ಪಡೆಯಲು ಪ್ರಯತ್ನಸಿದ ವಿವರವನ್ನು ಈ ಐತಿಹ್ಯ ಒಳಗೊಂಡಿದೆ. ಹಾಗೆಯೇ ತಳವಾರಪ್ಪನು ದೇವರ ದರ್ಶನ ಪಡೆದನಂತರ ಆತ ದೇವರ ಆಜ್ಞೆಯನ್ನು ಮೀರಿ ತನ್ನ ಸಾವನ್ನು ತಾನೆ ತಂದು ಕೊಳ್ಳುತ್ತಾನೆ ಎನ್ನುವುದು, ಗುರುಹಿರಿಯರ ಮಾತಿನಂತೆ ನಡೆಯಬೇಕು ಎನ್ನುವುದನ್ನು ಪುಷ್ಟಿಕರಿಸುತ್ತದೆ.

ವಿಜಯನಗರ ಸಾಮ್ರಾಜ್ಯವು ಸುಲ್ತಾನರೊಂದಿಗೆ ಸೋಲನ್ನು ಅನುಭವಿಸಿದ ನಂತರ ಅನೇಕ ಪಾಳೆಪಟ್ಟುಗಳು ಸ್ವಾತಂತ್ರ್ಯ ಘೋಷಿಸಿಕೊಂಡು ಆಳ್ವಿಕೆ ಆರಂಭಿಸಿದರು. ಅಂಥ ಪಾಳೆಗಾರರ ಆಳ್ವಿಕೆಗೆ ಒಳಪಟ್ಟ ಸಂಸ್ಥಾನಗಳಲ್ಲಿ ಉಚ್ಚಂಗಿದುರ್ಗವು ಒಂದು. ಈ ಉಚ್ಚಂಗಿದುರ್ಗವನ್ನು ಕುರಿತು ಹಲವು ಐತಿಹ್ಯಗಳು ಹುಟ್ಟಿಕೊಂಡಿವೆ. ಈ ಐತಿಹ್ಯಗಳು ವಿಜಯನಗರ ಸಾಮ್ರಾಜ್ಯದ ಉಗಮದ ಮೂಲಕ್ಕೆ ಸಂಬಂಧಿಸಿದಂತೆ ಇರುವ ಚಾರಿತ್ರಿಕ ಅಭಿಪ್ರಾಯವನ್ನು

ಒಳಗೊಂಡಿವೆ. ಅವುಗಳೆಂದರೆ ಹೊಯ್ಸಳ ಸಾಮ್ರಾಜ್ಯದ ಅವನತಿಯ ನಂತರ ಅಲ್ಲಿಯ ಅರಸ ಬಲ್ಲಾಳನು ವಿಜಯನಗರ ಸಾಮ್ರಾಜ್ಯವನ್ನು ಕಟ್ಟಲು ಹಕ್ಕಬುಕ್ಕರಿಗೆ ಪ್ರೇರಣೆಯಾದ ಎನ್ನುವ ಸಂಗತಿ ಮತ್ತು ಮೊಲವು ನಾಯಿಯನ್ನು ಹೋಡಿಸಿಕೊಂಡು ಹೋಯಿತು ಎನ್ನುವ ಸಂಗತಿಗಳನ್ನು ಹೋಲುವಂತೆ ಐತಿಹ್ಯಗಳು ರೂಪುಗೊಂಡಿವೆ. ಹೀಗಾಗಲೇ ವಿಜಯನಗರ ಸಾಮ್ರಾಜ್ಯವು ಅವನತಿ ಹೊಂದಿತ್ತಾದರೂ ಜಗತ್ಪ್ರಸಿದ್ಧಿಯನ್ನು ಪಡೆದುಕೊಂಡಿತ್ತು. ಇಂತಹ ಸಾಮ್ರಾಜ್ಯದೊಂದಿಗೆ ಸಮೀಕರಿಸಿಕೊಳ್ಳುವುದರೊಂದಿಗೆ ತಮ್ಮ ಅನನ್ಯತೆಯನ್ನು ಕಟ್ಟಿಕೊಳ್ಳಲು ಈ ಪಾಳೆಪಟ್ಟುಗಳು ಪ್ರಯತ್ನಿಸಿದಂತಿದೆ. ಅದಕ್ಕೆ ನಿದರ್ಶನವಾಗಿ ಕೆಳಗಿನ ಐತಿಹ್ಯವನ್ನು ನೋಡಬಹುದಾಗಿದೆ. "ಉಚ್ಚಂಗಿದುರ್ಗದಲ್ಲಿ ದಾದಯ್ಯನಾಯಕ ಎಂಬ ಪಾಳೆಗಾರನಿದ್ದನು. ಆತನು ಉಚ್ಚಂಗಿದುರ್ಗವನ್ನು ಕೇಂದ್ರ ಮಾಡಿಕೊಂಡು ಆಳಿದ ಪ್ರಥಮ ಪಾಳೆಗಾರ. ಅವನ ಕುರಿತ ಐತಿಹ್ಯ ಹೀಗಿದೆ. ಬೇಡರ ಮುದ್ದಪ್ಪ ನಾಯಕನಿಗೆ ದಾದಯ್ಯ, ರಂಗಯ್ಯ, ತಿಮ್ಮಯ್ಯ ಮತ್ತು ಓಬಣ್ಣ ಎಂಬ ನಾಲ್ಕು ಮಂದಿ ಮಕ್ಕಳಿದ್ದರು. ಅದರಲ್ಲಿ ದಾದಯ್ಯನಿಗೆ ಸ್ವಪ್ನವಾಯಿತಂತೆ. ಅದರಂತೆ ತುಂಗಭದ್ರ ನದಿಯನ್ನು ಮೊದಲಗಟ್ಟಿಯ ಬಳಿ ದಾಟಿ ಕಾನಹಳ್ಳಿಯಲ್ಲಿ ನೆಲೆಸಿದ್ದಾರೆಂದು, ನಂತರದಲ್ಲಿ ಬಾಗಳಿಗೌಡರ ಪರಿಚಯದೊಂದಿಗೆ ಒಂದು ಕತ್ತಿಯ ವಿಷಯವು ತಿಳಿಯುತ್ತಿದಂತೆ, ಆ ಕತ್ತಿಯು ಹೊಯ್ಸಳ ವಿಷ್ಣುವರ್ಧನನದೆಂದು, ಅದನ್ನು ವಿಷ್ಣುವರ್ಧನನೇ ಒಂದು ಗುಡಿಯಲ್ಲಿ ಹೂಳಿದನೆಂದು ನಂತರ ವಿಷ್ಣುವರ್ಧನ ಸಮೀಪದ ಬೆಟ್ಟದಲ್ಲಿ ಅಡಗಿಕೊಂಡಿದ್ದನಂತೆ(ಇಂದಿಗೂ ಕತ್ತಿಗುಂಡಿ, ಬೆಟ್ಟದ ಮರಡಿ ಇವೆ) ಆ ಕತ್ತಿಯನ್ನು ಗೌಡರ ಮನೆಯಿಂದ ಪಡೆದು ದಾದಯ್ಯನು ನೀಲುಗುಂದದ ಅಡವಿಯಲ್ಲಿ ಬೇಟೆಯಾಡಿದ, ನಂತರ ವಿಶ್ರಾಂತಿ ಪಡೆಯುವಾಗ ಇವನಲ್ಲಿ ಮೇಲ್ಬಾಗದಲ್ಲಿ ಸರ್ಪ ಇದ್ದ ವಿಷಯವನ್ನು ಕಾಮಭಟ್ಟರಿಂದ ತಿಳಿದು ಅವರ ಹೇಳಿಕೆಯಂತೆ ಒಂದು ರಾಜ್ಯ ಕಟ್ಟಿದನಂತೆ ಅದೇ ಹರಪುರವಾಯಿತೆಂಬ ಪ್ರತೀತಿ ಇದೆ. ಆದರೆ ದಾದಯ್ಯನಾಯಕನ ಹರಪನಹಳ್ಳಿಯ ಪಾಳೆಗಾರಿಕೆ ಮಾಡುವುದಕ್ಕೂ ಮೊದಲೇ ಹರಪುರ(ಹರಪನಹಳ್ಳಿ) ಗುರುತಿಸುವ ಪ್ರಮುಖ ಊರಾಗಿರಬೇಕು ಎಂಬುದಾಗಿ ಈ ಐತಿಹ್ಯದಿಂದ ತಿಳಿದು ಬರುತ್ತದೆ".[೧೫]

**ಹೊನ್ನಾನಾಗತಿ:** ಹರಪನಹಳ್ಳಿ ತಾಲೂಕಿನ ಉಚ್ಚಂಗಿ ದುರ್ಗವನ್ನು ಕೇಂದ್ರ ಮಾಡಿಕೊಂಡು ಆಳಿದ ದಾದಯ್ಯ ಪಾಳೆಗಾರನ ಹೆಂಡತಿ ಹೊನ್ನನಾಗತಿ. ಈಕೆಯ ಕುರಿತು ಐತಿಹ್ಯ ಹೀಗಿದೆ. ದಾದಯ್ಯ ನಾಯ್ಕನ ಧರ್ಮಪತ್ನಿ ಶ್ರೀಮತಿ ಹೊನ್ನಾನಾಗತಿ. ಈಕೆಯ ತವರುಮನೆ ಚಿತ್ರದುರ್ಗ. ಚಿತ್ರದುರ್ಗದ ಪಾಳೆಗಾರರಿಗೂ ಮತ್ತು ದಾದಯ್ಯನಿಗೂ ಕದನ ನಡೆಯಿತು. ಈ ಕದನದಲ್ಲಿ ದಾದಯ್ಯ ಪಾಳೆಗಾರನಿಗೆ ಸೋಲಾಯಿತು. ಇದಕ್ಕೆ ಹೊನ್ನಾನಾಗತಿ ತನ್ನ ತವರುಮನೆಯವರಿಗೆ ನೀಡಿದ ಒಳಸುಳಿವುಗಳು ಕಾರಣವೆಂದು ಅವಳಿಗೆ ರಾಜ್ಯದ್ರೋಹ ಅಪರಾಧದ ಪಟ್ಟಕಟ್ಟಿ

ಹೊನ್ನಾನಾಗತಿಯನ್ನು ಉಚ್ಚಂಗಿ ಬೆಟ್ಟದ ಮೇಲಿನ ಕಿಟಕಿಯ ಮೂಲಕ ಹೊರತಳ್ಳಿ ಸಾಯಿಸುವ ಮರಣ ದಂಡನೆಯನ್ನು ದಾದಯ್ಯ ನಾಯ್ಕ ತನ್ನ ಸೇವಭಟ್ಟರಿಗೆ ಅಜ್ಞಾಪಿಸಲು, ಅವರು ಆಕೆಯನ್ನು ಅಲ್ಲಿಂದ ಕೆಳತಳ್ಳಿದರು. ಹೊನ್ನಾನಾಗತಿಯನ್ನು ಬೆಟ್ಟದಿಂದ ನೂಕಿದ ಸ್ಥಳಕ್ಕೆ ಹೊನ್ನಾನಾಗತಿ ಝುರಿ ಎಂದು ಕರೆಯುತ್ತಾರೆ. ಇಂದಿಗೂ ಉಚ್ಚಂಗಿದುರ್ಗದ ಕೋಟೆಯಲ್ಲಿ ಒಂದು ಕಿಟಕಿಯಿದೆ. ಕಿಟಕಿಯಿಂದ ಇಣಿಕಿನೋಡಿದರೆ ಒಂದು ಉದ್ದನೆಯ ಸಾಲನ್ನು ಹೋಲುವ ಝುರಿ ಕಾಣಿಸುತ್ತದೆ. ಆ ಝುರಿಯು ಕೆಳಗಿನ ಕೊಂಡದವರೆಗೂ ಇದೆ. ಈ ಐತಿಹ್ಯವನ್ನು ಗಮನಿಸಿದಾಗ ಸಂಸ್ಥಾನದಲ್ಲಿ ಯಾರೇ ತಪ್ಪುಮಾಡಿದರೂ ಅವರಿಗೆ ಕಠಿಣ ಶಿಕ್ಷೆಯಿದೆ ಎನ್ನುವುದನ್ನು ಸಂಕೇತಿಸುತ್ತದೆ. ಹಾಗೆಯೇ ಆ ಪಾಳೆಪಟ್ಟುವಿನಲ್ಲಿ ತಪ್ಪುಮಾಡಿದವರಿಗೆ ಎಂತ ಉಗ್ರಶಿಕ್ಷೆಗಳು ಕಾದಿತ್ತು ಎನ್ನುವುದನ್ನು ಸ್ಪಷ್ಟಪಡಿಸುತ್ತದೆ.

**ಕಂಪಣ್ಣ:** ಹಿಂದೆ ಕಂಪಣ್ಣ ಎಂಬುವವನು ಒಬ್ಬನಿದ್ದನು. ಅವನ ಊರಿನಲ್ಲಿ ಜಾತಿ ಇಲ್ಲದ ಜಾತಿಯವನೊಬ್ಬನಿದ್ದ. ಅವನ ಹೆಸರು ಒಕ್ಕಲು ಮುದ್ದೇಗೌಡ. ಮುದ್ದೇಗೌಡನ ಹೆಂಡತಿ ಗೌರಮ್ಮ. ಈ ದಂಪತಿಗಳಿಗೆ ಏಳುಜನ ಮಕ್ಕಳು. ಆರನೆಯವನು ಹಳವೇಗೌಡ ಮತ್ತು ಏಳನೆಯವಳು ಸತ್ಯವಂತಿ. ಕಂಪಣ್ಣ ರಾಜನ ಮಗನು ಸತ್ಯವಂತಿಯ ಮೇಲೆ ಕಣ್ಣಿಡುತ್ತಾನೆ. ಕೋಪಗೊಂಡ ಕಂಪಣ್ಣನು ಮಗನ ತಲೆ ಕತ್ತರಿಸುತ್ತಾನೆ. ಜಾತಿ ಇಲ್ಲದ ಜಾತಿಯವರನ್ನು ಕಾವೇರಿ ದೇಶಕ್ಕೆ ಓಡಿಸುತ್ತಾನೆ. ಆ ಸಂದರ್ಭದಲ್ಲಿ ಉಕ್ಕಿ ಹರಿಯುತ್ತಿರುವ ಹಂಪಿ ಹೊಳೆಯು ಸತ್ಯವಂತಿಗೆ ದಾರಿ ಬಿಡುತ್ತದೆ. ಆದರೆ ಕಂಪಣ್ಣ ರಾಜನನ್ನು ತಡೆಯುತ್ತದೆ.[೧೬] ಅಂದಿನ ಸಾಮಾಜಿಕ ವ್ಯವಸ್ಥೆಯಲ್ಲಿ ಜಾತಿ ಎಷ್ಟು ಭದ್ರವಾಗಿ ಬೇರೂರಿತ್ತು ಎನ್ನುವುದನ್ನು ಇದು ಹೇಳುತ್ತದೆ. ಕಂಪಣ್ಣನ ಮಗ ಜಾತಿ ಹೀನಳಾದ ಸತ್ಯವಂತಿಯನ್ನು ಮದುವೆಯಾಗಲು ಇಚ್ಚಿಸುತ್ತಾನೆ. ಆ ಕಾರಣಕ್ಕಾಗಿಯೇ ಆತನನ್ನು ಮರಣದಂಡನೆಗೆ ಒಳಪಡುಸುತ್ತಾರೆ. ಜಾತಿಯನ್ನು ಮೀರಿದವರು ಎಂಥ ಕ್ರೂರಶಿಕ್ಷೆಗೆ ಒಳಗಾಗುತ್ತಿದ್ದರು ಎನ್ನುವುದನ್ನು ಇದು ಸಂಕೇತಿಸುತ್ತದೆ. ಆದರೆ ಸತ್ಯವತಿಗೆ ಪ್ರಕೃತಿಯೇ(ಹಂಪಿಹೊಳೆ) ಸಹಾಯಮಾಡುತ್ತದೆ ಎಂಬುದು ಆಕೆ ಉತ್ತಮ ಶೀಲಚಾರಿತ್ರ್ಯ ಹೊಂದಿದವಳು ಮತ್ತು ದೋಷಮುಕ್ತಳು ಎನ್ನುವುದಕ್ಕೆ ಸಾಕ್ಷಿಯಾಗಿದೆ. ಆದರೂ ಸಂಸ್ಥಾನದಿಂದ ಹೊರನಡೆಯಬೇಕಾದ ಅನಿವಾರ್ಯತೆ ಉಂಟಾದದ್ದು ಆಕೆಯು ಜಾತಿ ಹೀನಳು ಎನ್ನುವುದಾಗಿದೆ. ಈ ಹಿನ್ನಲೆಯಲ್ಲಿ ಹೇಳುವುದಾದರೆ ಜಾತಿ ಎನ್ನುವುದು ಸಮಾಜದಲ್ಲಿನ ಅಮಾಯಕರನ್ನು ಹೇಗೆ ಬಲಿತೆಗೆದು ಕೊಳ್ಳುತ್ತದೆ ಎನ್ನುವುದನ್ನು ಈ ಐತಿಹ್ಯವು ಎತ್ತಿತೋರಿಸುತ್ತದೆ.

**ಉದ್ದಾನವೀರಭದ್ರ;** ಬಳ್ಳಾರಿ ಪರಿಸರದಲ್ಲಿ ಬರುವ ಏಕಶಿಲಾ ವಿಗ್ರಹಗಳಲ್ಲಿಯೆ ಮಹತ್ವವೆನಿಸಿದ ಉದ್ದಾನ ವೀರಭದ್ರ ದೇವರ ಎತ್ತರ ೧೦ ಅಡಿಗಳು. ವಿಜಯನಗರವು

ದಾಳಿಗೆ ತುತ್ತಾದಾಗ ಈ ವಿಗ್ರಹವು ಯಾವುದೇ ದಕ್ಕೆಗೆ ಗುರಿಯಾಗದೇ ಇರುವುದರಿಂದ ದಿನವು ಪೂಜೆ ಮಾಡಲ್ಪಡುತ್ತದೆ. ಈ ಕುರಿತು ಐತಿಹ್ಯ ಹೀಗೆ ಹೇಳುತ್ತದೆ. 'ದಕ್ಷನ ಮಿತಿಮೀರಿದ ಅಹಮ್ಮನ್ನು ಸಹಿಸದ ಶಿವನು ತನ್ನ ಬೇವರಿನಿಂದ ವೀರಭದ್ರನನ್ನು ಸೃಷ್ಟಿಸಿದನು. ಲೋಕಪಾಲಕ ವೀರಭದ್ರ ಶಿವನಾಜ್ಞೆಯನ್ನು ಪಾಲಿಸಿ ದಕ್ಷಬ್ರಹ್ಮನ ತಲೆತೆಗೆದು, ಪ್ರಸೂತಿ ದೇವಿಯ ಭಕ್ತಿಯ ಮನವಿಯನ್ನು ಮನ್ನಿಸಿ ಯಜ್ಞ ಕುಂಡದ ಹತ್ತಿರ ಬಿದ್ದ ಕುರಿ ತಲೆಯನ್ನು ದಕ್ಷ ಬ್ರಹ್ಮನಿಗೆ ಇಟ್ಟು ಜೀವದಾನ ಮಾಡಿದನೆಂದು ಐತಿಹ್ಯವಿದೆ'. ಈ ಐತಿಹ್ಯವು ವೀರಭದ್ರ ದೇವರು ಹುಟ್ಟುವುದಕ್ಕೆ ಕಾರಣವೇನು ಎನ್ನುವ ವಿಷಯವನ್ನು ಒಳಗೊಂಡಿದೆ. ಸಂಪೂರ್ಣ ಪೌರಾಣಿಕ ಹಿನ್ನಲೆಯನ್ನು ಹೊಂದಿದ್ದು, ಅಲೌಕಿಕ ಸಂಗತಿಗಳ ಮೇಲೆ ನಿಂತುಕೊಂಡಿದೆ. ಈ ಹಿನ್ನಲೆಯಿಂದಾಗಿ ಇಂದಿಗೂ ವೀರಭದ್ರನನ್ನು ಉಗ್ರದೇವರೆಂದು ಕರೆಯಲಾಗುತ್ತದೆ.

**ಗುಲಗಂಜಿ ಮಾಧವರಾಯ:** ಹಂಪಿ ವಿರೂಪಾಕ್ಷ ದೇವಾಲಯದ ಹಿಂಭಾಗಕ್ಕೆ ಒಂದು ಸಣ್ಣ ದೇವಸ್ಥಾನವಿದೆ. ಅದರ ಹೆಸರು ಗುಲಗಂಜಿ ಮಾಧವರಾಯ. ಅದರ ಕುರಿತು ಐತಿಹ್ಯ ಹೀಗಿದೆ. ಹಂಪಿಗೆ ದಕ್ಷಿಣ ಕಾಶಿ ಎಂದು ಹೆಸರಿರುವುದು ಸತ್ಯ. ಉತ್ತರಕಾಶಿಗಿಂತ ಇಲ್ಲಿ ಹೆಚ್ಚಿನ ರೀತಿಯ ಗುಡಿ-ಗೋಪುರಗಳನ್ನು ಕಟ್ಟಿಸಿದರಂತೆ, ಧಾನ-ಧರ್ಮ ಮಾಡಿದರಂತೆ, ಈ ರೀತಿಯ ವಾದವು ದಕ್ಷಿಣ ಮತ್ತು ಉತ್ತರದವರೆಗೆ ನಡೆಯಲು, ಒಂದು ದಿನ ಎರಡೂ ಪುಣ್ಯಕ್ಷೇತ್ರಗಳನ್ನು ತಕ್ಕಡಿಯಲ್ಲಿ ಹಾಕಿ ತೂಗಿದರಂತೆ. ಆಗ ಕಾಶಿಕ್ಷೇತ್ರ ಒಂದು ಗುಲಗಂಜಿಯಷ್ಟು ಹೆಚ್ಚಾದಾಗ ಹಂಪಿಯ ಜನಕ್ಕೆ ಚಿಂತೆಯಾಯಿತು. ಚಿಂತಿತರಾದ ಜನರು ವಿರೂಪಾಕ್ಷಿ ಗುಡಿಯ ಹಿಂಬದಿಯಲ್ಲಿ ಒಂದು ಗುಲಗಂಜಿ ತೂಕದಷ್ಟು ಗುಡಿಯೊಂದನ್ನು ಕಟ್ಟಿದರು. ಮತ್ತೆ ಎರಡು ಕ್ಷೇತ್ರಗಳನ್ನು ತುಗಲಾಗಿ ಅವುಗಳು ಸಮಾನವಾಗಿ ಕಂಡುಬಂದವು ಎಂದು ಐತಿಹ್ಯ. ಭಾರತವೆಂದು ಗುರುತಿಸುವ ಪ್ರದೇಶಗಳಲ್ಲಿ ಹಲವಾರು ಪುಣ್ಯಕ್ಷೇತ್ರಗಳಿವೆ. ಅಂತಹ ಪುಣ್ಯಕ್ಷೇತ್ರಗಳಲ್ಲಿ ಹಂಪಿಯೂ ಒಂದಾಗಿದೆ. ಹಂಪಿಯಲ್ಲಿ ಏಕೆ ಇಷ್ಟು ದೇವಾಲಯಗಳು ನಿರ್ಮಾಣವಾದವು ಎನ್ನುವ ಪ್ರಶ್ನೆ ಉದ್ಭವವಾಗುವುದು ಸಹಜ. ಇಂತಹ ಪ್ರಶ್ನೆಗಳಿಗೆ ಮೇಲಿನ ಐತಿಹ್ಯವು ಕೆಲವು ಮಹತ್ವದ ಒಳಸುಳಿವುಗಳನ್ನು ನೀಡುತ್ತದೆ. ಗಂಗಾನದಿಯ ದಂಡೆಯ ಮೇಲಿರುವ ಕಾಶಿಯು ಪುಣ್ಯಕ್ಷೇತ್ರವೆಂದು ಪ್ರಸಿದ್ಧಿಪಡೆದಿದೆ. ಆದರೆ ದಕ್ಷಿಣ ಭಾರತದಲ್ಲಿ ಇಂತಹ ಯಾವುದೇ ಪುಣ್ಯಕ್ಷೇತ್ರಗಳು ಇರಲಿಲ್ಲ. ಅಂತಹ ಸಂದರ್ಭದಲ್ಲಿ ತುಂಗಭದ್ರ ನದಿಯ ದಂಡೆಯ ಮೇಲೆ ಉದಯಿಸಿದ ವಿಜಯನಗರ ಸಾಮ್ರಾಜ್ಯವು ಸಕಲ ಧರ್ಮಗಳಿಗೆ ಪ್ರೋತ್ಸಾಹವನ್ನು ಕೊಟ್ಟಿತ್ತು. ಹೀಗಾಗಿ ಇಲ್ಲಿ ದೇವಸ್ಥಾನಗಳು, ಮಸೀದಿ ಮಂದಿರಗಳು ನಿರ್ಮಾಣಗೊಂಡವು. ಹೀಗಾಗಿ ಎಲ್ಲಾ ಧರ್ಮಿಯರ ಪುಣ್ಯಕ್ಷೇತ್ರವಾಗಿ ರೂಪುಗೊಂಡಿತು. ಇದಕ್ಕೆ ಮೂಲ ಪ್ರೇರಣೆ ಎಂದರೆ ಕಾಶಿಯಂತೆ ಹಂಪಿಯನ್ನು ಪ್ರಸಿದ್ಧ ಪುಣ್ಯಕ್ಷೇತ್ರವನ್ನಾಗಿ ಮಾಡುವ ಒತ್ತಡದ ದೇವಾಲಯಗಳ ನಿರ್ಮಾಣಕ್ಕೆ ಕಾರಣವಾಯಿತು.

### ೫.೩. ಸ್ಥಳಪ್ರಧಾನ ಐತಿಹ್ಯಗಳು

ಪ್ರಸಿದ್ಧ ಸ್ಥಳಗಳನ್ನಾಧರಿಸಿ ಹುಟ್ಟಿಕೊಂಡ ಐತಿಹ್ಯಗಳನ್ನು ಸ್ಥಳಪ್ರಧಾನ ಐತಿಹ್ಯಗಳೆಂದು ಕರೆಯಲಾಗುತ್ತದೆ. ಇವು ಭಾರತದ ಪ್ರತಿಯೊಂದು ಪುಣ್ಯಕ್ಷೇತ್ರಗಳು ಅಲ್ಲಿಯ ಪ್ರದೇಶದ ಸ್ಥಳಮಹಾತ್ಮೆಯನ್ನು ಕುರಿತು ಹೇಳುತ್ತವೆ. ಇದಕ್ಕೆ ಬಳ್ಳಾರಿ ಪರಿಸರವು ಹೊರತಾಗಿಲ್ಲ. "ಬಳ್ಳಾರಿ ಪರಿಸರದ ಇತಿಹಾಸ ಕಿ.ಪೂ. ೩೫೦೦ರಿಂದ ಕಿ.ಪೂ. ೧೦೦೦ದ ಅವಧಿಯಲ್ಲಿ ಬದುಕಿದ್ದ ಹಳೆಯ ಶಿಲಾಯುಗದ ಜನರಿಂದ ಪ್ರಾರಂಭವಾಗುತ್ತದೆ. ಇಂತಹ ಪ್ರಾಚೀನ ಇತಿಹಾಸವನ್ನುಳ್ಳ ಬಳ್ಳಾರಿ ಪ್ರದೇಶದಲ್ಲಿ ಪ್ರತಿಯೊಂದು ಊರು, ಪ್ರತಿಯೊಂದು ಸ್ಥಳ ಕುರಿತು ಐತಿಹ್ಯಗಳಿವೆ".[೨] ಒಂದು ಸ್ಥಳಕ್ಕೆ ಒಂದೇ ಐತಿಹ್ಯ ಇರುವುದಿಲ್ಲ. ಕೆಲವು ಸಲ ಹಲವಾರು ಐತಿಹ್ಯಗಳಿರುವುದು ಕಾಣಸಿಗುತ್ತದೆ. ಯಾವುದೇ ಸ್ಥಳಕ್ಕೆ ಒಂದು ನಿರ್ದಿಷ್ಟ ಹೆಸರು ರೂಪುಗೊಳ್ಳಲು ಹಲವಾರು ಅಂಶಗಳು ಕಾರಣವಾಗಿವೆ. ಕೆಲವು ಸ್ಥಳಗಳು ಪೌರಾಣಿಕ ವ್ಯಕ್ತಿಗಳ ವಾಸಸ್ಥಾನವಾಗಿದ್ದವು ಎನ್ನುವ ಕಾರಣಕ್ಕಾಗಿ ಅವರ ಹೆಸರುಗಳಿಂದ ಪ್ರಸಿದ್ಧಪಡೆದಿವೆ. ಕೆಲವು ದಾನ ಧರ್ಮಗಳನ್ನು ಮಾಡಿದವರ ಹೆಸರನ್ನು ಆ ಸ್ಥಳಕ್ಕೆ ನಾಮಕರಣ ಮಾಡಲಾಗಿದೆ. ಇನ್ನು ಕೆಲವು ಕಡೆಗಳಲ್ಲಿ ತಪಸ್ಸನ್ನಾಚರಿಸಿದ ಸಿದ್ಧಪುರುಷರ ಹೆಸರುಗಳಿವೆ. ಹಾಗೆಯೇ ನಿಸರ್ಗದತ್ತವಾಗಿಯೇ ಕೆಲವೊಂದು ಸ್ಥಳಗಳು ಪ್ರಾಮುಖ್ಯತೆಯನ್ನು ಪಡೆದುಕೊಂಡಿವೆ. ಇಲ್ಲಿರುವ ಕೆಲವೊಂದು ಐತಿಹ್ಯಗಳು ಸ್ಥಳಮಹಾತ್ಮೆಯನ್ನು ಹೇಗೆ ನಿರೂಪಿಸುತ್ತವೆ ಎನ್ನುವ ಹಿನ್ನಲೆಯಲ್ಲಿ ಸ್ಥಳಪ್ರಧಾನ ಐತಿಹ್ಯಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**ವಾಲಿಭಂಡಾರ:** ಹಂಪಿ ಸುತ್ತಮುತ್ತಲಿನ ಪ್ರದೇಶವನ್ನು ರಾಮಾಯಣದಲ್ಲಿ ಬರುವ ಕಿಷ್ಕಿಂದೆ ಪ್ರದೇಶವೆಂದು ಕರೆಯಲಾಗುತ್ತದೆ. ರಾಮಾಯಣದಲ್ಲಿ ಬರುವ ಪಾತ್ರಗಳಾದ ವಾಲಿ ಸುಗ್ರೀವರಿಗೆ ಸಂಬಂಧಿಸಿದ ಸ್ಥಳಸಂಬಂಧ ಐತಿಹ್ಯಗಳು ಈ ಭಾಗದಲ್ಲಿವೆ. ಪಂಪಾಸರೋವರಕ್ಕೆ ಹೋಗುವ ಮಾರ್ಗದಲ್ಲಿ ಎಡಭಾಗಕ್ಕೆ ದುರ್ಗಾದೇವಿಯ ಬೆಟ್ಟದ ತುದಿಯೊಂದು ಕಂಡುಬರುತ್ತದೆ. ಇದನ್ನು ವಾಲಿಭಂಡಾರ ಎಂದು ಕರೆಯುವರು. ಇದರ ಕುರಿತಾದ ಐತಿಹ್ಯ ಹೀಗಿದೆ. ಈ ವಾಲಿ ಭಂಡಾರಕ್ಕೆ ಪ್ರವೇಶ ದ್ವಾರಗಳಿಲ್ಲ. ವಾಲಿಯು ತನ್ನ ಸಕಲ ಸಂಪತ್ತನ್ನು ಕೂಡಿ ಇಲ್ಲಿಯೇ ಬಚ್ಚಿಟ್ಟಿದ್ದಾನೆ ಎಂದು ನಂಬಿಕೆ ಇದೆ. ಹೀಗೆ ಕೂಡಿ ಬಚ್ಚಿಟ್ಟ ಗುಹೆಯ ಬಾಗಿಲಿಗೆ ವಾಲಿ ದೊಡ್ಡ ಬಂಡೆಯನ್ನು ಇರಿಸಿದ್ದಾನಂತೆ. ವಾಲಿಯೆಷ್ಟೇ ಬಲಶಾಲಿಯಾದ ಇನ್ನಾರೋ ಒಬ್ಬ ಆ ಕಲ್ಲಿಗೆ ಒದ್ದಾಗ ಮಾತ್ರ ಆ ಬಂಡೆ ಪಕ್ಕಕ್ಕೆ ಸರಿದುಕೊಂಡರೆ ಮಾತ್ರ ಸಂಪತ್ತು ಕಾಣುತ್ತದೆ ಎಂದು ಐತಿಹ್ಯ. ಈ ಐತಿಹ್ಯವು ಹಿಂದೆ ವಾಲಿಯ ಸಂಪತ್ತನ್ನು ಸಂಗ್ರಹಿಸುವ ಗುಹೆಯಾಗಿತ್ತು ಎನ್ನುವುದು ಜನಪದರ ನಂಬಿಕೆಯಾಗಿದೆ. ಗುಪ್ತನಿಧಿಯ ಐತಿಹ್ಯಗಳನ್ನು ಕುರಿತು ಬಸವರಾಜ ಪೋಲಿಸ್ ಪಾಟೀಲ ಅವರು "ಗುಪ್ತನಿಧಿ ಐತಿಹ್ಯಗಳು ಎಲ್ಲಡೆ

ವ್ಯಾಪಿಸಿಕೊಂಡು ಬಂದಿವೆ. ಇವು ಪ್ರಾಚೀನ ಹಣಕಾಸು ಪದ್ಧತಿಯ ಮೇಲೆ ಬೆಳಕು ಚೆಲ್ಲುತ್ತವೆ. ಹಿಂದೆ ಕಳ್ಳಕಾರರ ಭಯ ಹೆಚ್ಚು. ಯಾವಾಗ ಮನೆ ಹೊಕ್ಕು ಹಣ ದೋಚುವರೋ ಎಂದು ಹೆದರಿದ ಜನ ಅದನ್ನು ಹೊಲ, ಹಗೆ, ಬಳಚ, ದೇವರ ಜಗುಲಿಯ ಕೆಳಗೆ–ಹೀಗೆ ಮುಚ್ಚಿಟ್ಟವನಿಗೆ ಮಾತ್ರ ಗೊತ್ತಾಗುವ ಸ್ಥಳದಲ್ಲಿ ಹುಗಿದುಡುತ್ತಿದ್ದರು. ಅಲ್ಲದೆ ಕೆಲವು ಸಂಕೇತಗಳನ್ನು ಬಳಸಿಕೊಂಡು ಧನ ಬಚ್ಚಿಟ್ಟು ಕಾಪಾಡಿಕೊಳ್ಳುವ ರೂಢಿ ಜಾರಿಯಲ್ಲಿತ್ತು, ಗುಡಿಯ ಗೋಪುರ, ಮನೆಯ ಕುಂಬಿ, ಗಿಡದ ನೆರಳಿನ ತುದಿಯ ಭಾಗ ಹಣ ಹುಗಿದಿಡುವ ಸಮಯಕ್ಕೆ ಯಾವ ಸ್ಥಳದಲ್ಲಿರುವುದೊ ಅಲ್ಲಿಟ್ಟು ತಮಗೆ ಬೇಕಾದಾಗ ಅದೇ ಸಮಯಕ್ಕೆ ಅಲ್ಲಿ ಅಗೆದು ಪಡೆಯುತ್ತಿದ್ದರು. ಈ ಸಂಕೇತಗಳು ಮುಚ್ಚಿಟ್ಟವನಿಗೆ ಮಾತ್ರ ಗೊತ್ತಾಗುತ್ತಿರುತ್ತಿತ್ತು. ಮುಂದೆ ಯಾವುದೋ ಕಾರಣದಿಂದ ಆತ ಮರಣ ಹೊಂದಿದಾಗ ಆ ನಿಧಿ ಗುಪ್ತವಾಗಿ ಉಳಿದುಬಿಡುತ್ತಿತ್ತು. ಅಲ್ಲದೇ ಅರಸರ ಆಳ್ವಿಕೆಯ ಪರಿಣಾಮದಿಂದ ಜನ ಕ್ಷಣದಲ್ಲಿಯೇ ಮರಣವನ್ನಪ್ಪುತ್ತಿದ್ದರು. ಹೀಗಾಗಿ ಧನ ಬಚ್ಚಿಟ್ಟ ವಿಷಯ ಮನೆಯವರಿಗೆ ಹೇಳುವ ಅವಕಾಶ ದೊರೆಯದೇ ಹೋಗುತ್ತಿತ್ತು. ಮುಂದೆ ಈ ಸಂಕೇತಗಳ ಮರ್ಮ ತಿಳಿದ ವ್ಯಕ್ತಿ ಗುಪ್ತ ನಿಧಿ ವಶಪಡಿಸಿಕೊಳ್ಳುತ್ತಾನೆ”.[೧೮]ಎಂದಿದ್ದಾರೆ. ಇಂತಹ ನಂಬಿಕೆಯಿಂದಾಗಿ ಇಂದು ಅನೇಕ ಜನರು ಕೆಲವು ಸಂಕೇತಗಳನ್ನು ಗಮನಿಸಿ ಇಲ್ಲಿ ನಿಧಿ ಇದೆ ಎಂದು ಭಾವಿಸಿ ಅದನ್ನು ಪಡೆಯಲು ವಾಮ ಮಾರ್ಗಗಳನ್ನು ಅನುಸರಿಸುತ್ತಿದ್ದಾರೆ. ಹೀಗಾಗಿ ನಮ್ಮ ಸಂಸ್ಕೃತಿಯ ಅನನ್ಯತೆಯನ್ನು ಕಾಪಾಡುವ ಪ್ರಾಚೀನ ಕಾಲದ ಸ್ಮಾರಕಗಳು ಇಂಥವರಿಗೆ ಬಲಿಯಾಗುತ್ತಿವೆ. ನರಬಲಿಯಂಥ ಅನಿಷ್ಟ ಪದ್ಧತಿಗಳಿಗೆ ಐತಿಹ್ಯಗಳು ಪ್ರೇರಣೆಯನ್ನು ಒದಗಿಸುತ್ತವೆ. ಕೆಲವು ಐತಿಹ್ಯಗಳು ಚರಿತ್ರೆಯ ರಚನೆಗೆ ಒಳಸುಳಿವುಗಳನ್ನು ನೀಡುವುದರೆ ಜೊತೆ ಜೊತೆಗೆ ಜನಸಾಮಾನ್ಯರ ಮೇಲೆ ದುಷ್ಪಪರಿಣಾಮವನ್ನು ಉಂಟುಮಾಡುತ್ತವೆ.

ಮೇಲಿನಂತೆ ಹಂಪಿಯ ಪರಿಸರದಲ್ಲಿ ಹಲವಾರು ಗುಹೆಗಳಿದ್ದು, ಅದರಲ್ಲಿ ಸುಗ್ರೀವ ಗುಹೆಗೆ ವಿಶೇಷ ಸ್ಥಾನವಿದೆ. ರಾಮ–ಲಕ್ಷ್ಮಣರ ಗುಡಿಯಿಂದ ವಿಜಯವಿಠಲ ದೇವಾಲಯದ ಕಡೆಗೆ ಪ್ರಯಾಣ ಬೆಳೆಸಿದರೆ ಮಾರ್ಗಮಧ್ಯದಲ್ಲಿ ಸುಗ್ರೀವ ಗುಹೆಯು ಕಂಡುಬರುತ್ತದೆ. ಈ ಗುಹೆಯ ಒಳಗೆ ರಾಮ–ಲಕ್ಷ್ಮಣರ ಸೀತೆಯರ ಉಬ್ಬು ಚಿತ್ರಗಳನ್ನು ಕೆತ್ತಲಾಗಿದೆ. ಸುಗ್ರೀವನು ಈ ಗುಹೆಯಲ್ಲಿ ವಾಸವಾಗಿದ್ದನೆಂದು ಈ ಕಾರಣದಿಂದ ಇದಕ್ಕೆ ಸುಗ್ರೀವ ಗುಹೆ ಎಂದು ಕರೆಯುತ್ತಾರೆ. ಹಾಗೆಯೇ ವಾಲಿಯು ಕೆಲವು ಕಾಲ ಈ ಗುಹೆಯಲ್ಲಿದ್ದನೆಂದು ಅದರಿಂದ ವಾಲಿಸುಗ್ರೀವರ ಗುಹೆ ಎಂದು ಸಹ ಹೇಳುತ್ತಾರೆ.[೧೯]ಈ ಮೇಲಿನ ಐತಿಹ್ಯವು ಈ ಸ್ಥಳದಲ್ಲಿ ವಾಲಿಸುಗ್ರಿವರು ವಾಸವಾಗಿದ್ದರಿಂದ ಈ ಪ್ರದೇಶಕ್ಕೆ ಅವರ ಹೆಸರಿನಿಂದ ಕರೆಯಲಾಗುತ್ತದೆ. ಹಾಗೆಯೇ ತುಂಗಭದ್ರ ನದಿಯ ದಂಡೆಯ ಮೇಲೆ ಪಂಪಾಂಬಿಕೆ ತಪಸ್ಸುಮಾಡಿದ್ದರಿಂದಾಗಿ ಈ ನದಿಗೆ ಹಂಪಿ ಹೊಳೆ ಪಂಪಾಸರೋವರ ಎಂದು ಹೆಸರುಗಳು ಬಂದಿವೆ. ಇದಕ್ಕೆ

ಪೌರಾಣಿಕ ಹಿನ್ನಲೆಯೆ ಕಾರಣವೆಂದು ಹೇಳಬಹುದಾಗಿದೆ. ಪಂಪಾಸರೋವರ ಕುರಿತು ಐತಿಹ್ಯವನ್ನು ನಿದರ್ಶನವಾಗಿ ನೋಡಬಹುದಾಗಿದೆ. ವಿಜಯ ವಿಠಲನ ಗುಡಿಯ ಪಕ್ಕದಲ್ಲಿ ಹರಿಯುತ್ತಿರುವ ಹಂಪಿ ಹೊಳೆಯ ಎಡದಂಡೆಯ ಮೇಲಿರುವ ಘಟ್ಟಿಕೋಟೆ ಮತ್ತು ಅಂಜನಾದ್ರಿ ಪರ್ವತಗಳ ಮಧ್ಯೆ ಈ ಪಂಪಾಸರೋವರ ಇದೆ. ಇಲ್ಲಿ ಪಂಪಾಂಬಿಕೆಯು ಶಿವನಿಗೋಸ್ಕರ ತಪಸ್ಸು ಮಾಡಿದಳಂತೆ. ಆ ಪಂಪಾಂಬಿಕೆ ತಪಸ್ಸು ಮಾಡಿದುದರಿಂದಾಗಿ ಈ ಸರೋವರಕ್ಕೆ ಪಂಪಾಸರೋವರವೆಂದು ಕರೆಯುವರು. ಇಂಥ ಅಂಶಗಳ ಪರಿಣಾಮದಿಂದಾಗಿ ಕೆಲವು ಅಸಾಮಾನ್ಯವ್ಯಕ್ತಿಗಳು, ತಪಸ್ಸು ಮಾಡಿದ ಸ್ಥಳಗಳಿಗೂ ಅವರ ಹೆಸರಿನಿಂದ ಕರೆಯುವುದು ಕಾಣಸಿಗುತ್ತದೆ. ದೊರೆ ಮುಮ್ಮಡಿಸಿಂಗ ನಾಯಕನು ತನಗೆ ಪುತ್ರಸಂತಾನವಾಗಲು ಸೋಮೇಶ್ವರ ದೇವರಿಗೆ ಅರಕೆ ಹೊತ್ತುಕೊಂಡನು. ದೇವರ ದಯೆಯಿಂದ ಅವನಿಗೆ ಪುತ್ರ ಸಂತಾನವಾಗುತ್ತದೆ. ಅವನು ತನ್ನ ಮಗನಿಗೆ ಕಂಪಿಲರಾಯ ಎಂದು ನಾಮಕರಣ ಮಾಡುವ ಸಂದರ್ಭದಲ್ಲಿ ಊರನ್ನು ಕಟ್ಟಿ ಆ ಊರಿಗೆ ಕಂಪ್ಲಿ ಎಂದು ನಾಮಕರಣ ಮಾಡುತ್ತಾನೆ. ಇನ್ನೊಂದು ಐತಿಹ್ಯದ ಪ್ರಕಾರ ಹಿಂದೆ ಇಲ್ಲಿ ಕಪಿಲ ಎಂಬ ಋಷಿ ತಪಸ್ಸು ಮಾಡಿದ್ದನೆಂದು ಮುಂದೆ ಈ ಪ್ರದೇಶವನ್ನಾಳಿದ ಕಂಪಿಲರಾಯ ಆ ಋಷಿಯ ನೆನಪಿಗೋಸ್ಕರ ಕಂಪಿಲಿ ಎಂದು ಹೆಸೆರಿಟ್ಟಿದ್ದಾನೆ ಎಂದು ಐತಿಹ್ಯವಿದೆ.

ನಮ್ಮ ಪರಂಪರೆಯನ್ನು ಅವಲೋಕಿಸಿದಾಗ ರಾಮಾಯಣ ಮತ್ತು ಮಹಾಭಾರತ ಮಹಾಕಾವ್ಯಗಳು ಜನಮಾನಸದಲ್ಲಿ ಅಚ್ಚಳಿಯದೆ ಉಳಿದುಕೊಂಡು ಬಂದಿವೆ. ಹೀಗಾಗಿ 'ಸೀತೆ ಸ್ನಾನ ಮಾಡದ ಕೊಳಗಳಿಲ್ಲ, ಪಾಂಡವರು ವಾಸಮಾಡದ ಗುಹೆಗಳಿಲ್ಲ' ಎನ್ನುವ ಮಾತು ಹುಟ್ಟುಕೊಂಡಿವೆ. ಅನೇಕ ಕಡೆಗಳಲ್ಲಿ ಕಂಡುಬರುವ ರಾಮಾಯಣ ಮತ್ತು ಮಹಾಭಾರತಕ್ಕೆ ಸಂಬಂಧಿಸಿದ ಹೆಸರುಗಳಿದ್ದರೆ ಇಲ್ಲಿಗೆ ಪಾಂಡವರು ಬಂದಿದ್ದರು ಅಥವಾ ಇಲ್ಲಿ ವಾಸವಾಗಿದ್ದರು ಇಲ್ಲವೆ ತಮ್ಮ ಶಸ್ತ್ರಾಸ್ತ್ರಗಳನ್ನು ಇಲ್ಲಿ ಬಚ್ಚಿಟ್ಟಿದ್ದರು ಎನ್ನುವಂತ ಐತಿಹ್ಯಗಳು ಹುಟ್ಟಿಕೊಂಡಿವೆ. ಉದಾಹರಣೆಗೆ ಮುಂದಿನ ಐತಿಹ್ಯಗಳನ್ನು ನೋಡಬಹುದು. ಬಲ್ಕುಂದಿ ಗ್ರಾಮವು ಸಿರುಗುಪ್ಪ ತಾಲೂಕಿನಲ್ಲಿದೆ. ಐತಿಹಾಸಿಕ ಪುರಾವೆಯೆಂತೆ ಬಲ್ಕುಂದಿ 'ಕುಂತಳಪುರ' ಎನಿಸಿದ್ಧ ಇತಿಹಾಸ ಪ್ರಸಿದ್ಧ ಸ್ಥಳ. ಇಲ್ಲಿ ಮಹಾಕಾಳಮ್ಮ ದೇವಸ್ಥಾನವಿದೆ. ದೇವಾಲಯದ ಮುಂದೆ ಬನ್ನಿ ವೃಕ್ಷವಿದೆ. ಇಲ್ಲಿಯೇ "ಪಾಂಡವರು ತಮ್ಮ ಅಜ್ಞಾತವಾಸದ ಕಾಲದಲ್ಲಿ ಶಾಸ್ತ್ರಾಸ್ತ್ರಗಳನ್ನಿರಿಸಿದ್ದಾರೆಂದು ಐತಿಹ್ಯ" ಹೇಳುತ್ತದೆ.[೨೦]ಬನ್ನಿ ವೃಕ್ಷದ ಯಾವುದಾದರೊಂದು ದಿಕ್ಕಿನ ಟೊಂಗೆ ಬಾಗಿದ್ದರೆ, ಆ ದಿಕ್ಕಿನ ಪ್ರದೇಶಕ್ಕೆ ಕ್ಷಾಯ ಅಥವಾ ಕಠಿಣ ದಿನಗಳು ಕಾದಿವೆ ಎಂಬ ಭಾವನೆ ಇಂದಿಗೂ ಇದೆ. ಮುಂದುವರೆದು ಅನಂತಶಯನ ಗುಡಿಯಿಂದ ಸುಮಾರು ೫ಕಿ. ಮೀ ಉತ್ತರಕ್ಕೆ ಧರ್ಮದಗುಡ್ಡವಿದೆ. ಇದರ ಕುರಿತು ಐತಿಹ್ಯ ಹೀಗಿದೆ. ಪಾಂಡವರು ವನವಾಸದ ಕಾಲದಲ್ಲಿ

ಈ ಪ್ರದೇಶಕ್ಕೆ ಬಂದು ಸ್ವಲ್ಪ ಕಾಲ ಇಲ್ಲಿಯೇ ನೆಲೆಸಿದ್ದರು. ಈ ಸಮಯದಲ್ಲಿ ಹಂಪಿ ಹೊಳೆಯು ತುಂಬಿ ಹರಿಯುತ್ತಿತ್ತು. ಪಾಂಡವರಿಗೆ ಹೊಳೆ ದಾಟಿ ಹೋಗಲು ತುಂಬಾ ಕಷ್ಟವಾಯಿತು. ಆಗ ಧರ್ಮರಾಯನು ತಮ್ಮಂದಿರನ್ನು ಹಿಂದಿನಿಂದ ಸಾಲಾಗಿ ಬರುವಂತೆ ಹೇಳಿ, ಧರ್ಮದ ಗುಡ್ಡದ ಬುಡದಲ್ಲಿರುವ ಒಂದು ಗವಿಯ ಮೂಲಕ ಸುರಂಗ ಮಾರ್ಗ ಮಾಡಿಕೊಂಡು ನದಿಯ ಇನ್ನೊಂದು ದಡದಲ್ಲಿನ ಗುಡ್ಡದ ಬುಡದಲ್ಲಿನ ಗುಹೆಯ ಮೂಲಕ ಹೊರಬಂದ. ಹೀಗಾಗಿ ಧರ್ಮರಾಯ ಬಂದು ನೆಲೆಸಿದ್ದ ಈ ಗುಡ್ಡಕ್ಕೆ ಧರ್ಮದಗುಡ್ಡ ಎಂದು ಹೆಸರಾಯಿತು. ಈಗಲೂ ಸಹ ಧರ್ಮರಾಯನ ಗವಿಗೆ ಯುಗಾದಿ ಹಬ್ಬದಂದು ಪೂಜೆ ನಡೆಯುತ್ತದೆ. ಹಾಗಯೇ ಸೀತೆಯನ್ನು ಕಳೆದುಕೊಂಡ ರಾಮನು ಹುಡಿಕಿಕೊಂಡು ಕಡ್ಡಿರಾಂಪುರಕ್ಕೆ ಬಂದಾಗ ಚಿಂತೆಯಿಂದ ಸೊರಗಿ ಕಡ್ಡಿಂಯಂತಾಗಿದ್ದರಿಂದ ಈ ಊರಿಗೆ ಕಡ್ಡಿರಾಮಪುರ>ಕಡ್ಡಿರಾಂಪುರ ಎಂಬ ಹೆಸರು ಬಂದಿತೆಂದು ಹೇಳುತ್ತಾರೆ. ಮತ್ತೊಂದು ಐತಿಹ್ಯದ ಪ್ರಕಾರ ವಿಜಯನಗರ ಕಾಲದಲ್ಲಿ ಇಲ್ಲಿ ಖಡ್ಗಗಳನ್ನು ತಯಾರಿಸುತ್ತಿದ್ದರಂತೆ. ಖಡ್ಗರಾಮಪುರ ಎಂಬುದರಿಂದ ಕಡ್ಡಿರಾಮಪುರ ಎಂಬ ಹೆಸರು ಬಂದಿದೆ ಎಂದು ಇಲ್ಲಿನ ಜನವಾಸಿಗಳು ಹೇಳುತ್ತಾರೆ.

**ನೆಲದೋಣಿ:** ಸಂಡೂರಿನಿಂದ ಸುಮಾರು ೪೦ಕಿ. ಮೀ ದೂರದಲ್ಲಿರುವ ಜಾಲಿಪೇಟೆ ಎಂಬ ಹಾಳಾದ ಗ್ರಾಮದಲ್ಲಿ ಕಾಣಸಿಗುವುದು ನೆಲದೋಣಿ. ಮಹಾಭಾರತದ ಕಾಲಕ್ಕೆ ಪಾಂಡವರು ಈ ಪ್ರದೇಶದಲ್ಲಿ ಬಂದಿದ್ದರು. ಅವರು ಊಟ ಮಾಡಿ ಎಂಜಲನ್ನು ಚೆಲ್ಲಿದರಂತೆ. ಅದರಲ್ಲಿದ್ದ ಭತ್ತವು ಬೆಳೆಯುತ್ತಿದ್ದರಿಂದ ಆ ಸ್ಥಳಕ್ಕೆ ನೆಲದೋಣಿ ಎಂದು ಪ್ರತೀತಿ ಇದೆ.[೨೧]

**ಕುಡತಿನಿ:** ಬಳ್ಳಾರಿ ಮತ್ತು ಹೊಸಪೇಟೆ ಮಾರ್ಗಮಧ್ಯದಲ್ಲಿ ಕುಡತಿನಿ ಗ್ರಾಮವಿದೆ. 'ಈ ಪ್ರದೇಶವು ಈ ಹಿಂದೆ ಕಾರ್ತಿಕೇಯ ತಪೋವನಕ್ಕೆ ಸೇರಿದ ಪವಿತ್ರ ಸ್ಥಳವಾಗಿತ್ತು. 'ಪಾತಾಳ ಲೋಕದ ಗೃಹದಲ್ಲಿ ಕುಳಿತುಕೊಳ್ಳುತ್ತೇನೆ ಎಂದು ಕುಮಾರ ಸ್ವಾಮಿ ಹೇಳಿ ಕುಳಿತ'. ಆ ಗ್ರಾಮವೇ ಕುಡತಿನಿ ಆಗಿರಬೇಕು'. ಎಂ.ಎಂ.ಕಲಬುರ್ಗಿಯವರು ಕರ್ನಾಟಕ ಕೈಫಿಯತ್ತುಗಳಲ್ಲಿ ಇದೇ ಐತಿಹ್ಯವನ್ನು ಕುರಿತು ಉಲ್ಲೇಖಿಸಿದ್ದಾರೆ. "ಕುಮಾರಸ್ವಾಮಿ ಬಂದು ಕುಳಿತ ಸ್ಥಳವಾದ ಕುಡತಿನಿಯಲ್ಲಿ ಕಾರ್ತಿಕೇಯ ತಪೋವನ ಇತಿಹಾಸ ಪೂರ್ವಕಾಲದಿಂದಲೇ ಪ್ರಸಿದ್ಧಿಯಾಗಿತ್ತು. ಚೋಳ ಮಹಾರಾಜರು ಋಷಿಗಳನ್ನು ಬೇಟಿಯಾಗಿ ಸ್ಥಳದ ಮಹಾತ್ಮೆಯನ್ನು ಅರಿತಿದ್ದು ಇಲ್ಲಿಯೇ ಎಂದು ಅಭಿಪ್ರಾಯಿಸುತ್ತಾರೆ. ಕಾರ್ತಿಕೇಯ ತಪೋವನಾಧಿಪತಿಯನ್ನು ಉಲ್ಲೇಖಿಸುವ ಮೊದಲ ಶಾಸನ (S.I.I., vol IX pt.1. 197) ಕುಡುತಿನಿ ಗ್ರಾಮದಲ್ಲಿದೆ."[೨೨] ಇಲ್ಲಿರುವ ಐತಿಹ್ಯವು ಶಾಸನದಲ್ಲಿರುವ ದಾಖಲೆಗಳಿಗೆ ಪೂರಕವಾಗಿವೆ.

ಕೆಲವು ಸ್ಥಳಪ್ರಧಾನ ಐತಿಹ್ಯಗಳು ಆ ಊರಿಗೆ ಸಂಬಂಧಿಸಿದಂತೆ ನಡೆದಿರುವ ಪ್ರಮುಖ ಘಟನೆಗಳ ಸುತ್ತ ಏಣೆಯಲ್ಪಟ್ಟಿವೆ. ಪೌರಾಣಿಕ ಅಂಶಗಳ ಹಿನ್ನಲೆಯನ್ನು ಹೊಂದಿದ್ದ ಇವುಗಳು ಈ ಸ್ಥಳ ಪವಿತ್ರವೆನ್ನುವ ಸಾಂಕೇತಿಕ ಹಿನ್ನಲೆಯಲ್ಲಿ ಮೈದಳೆದಿವೆ. ಸಾಮಾನ್ಯವಾಗಿ ಇವು ರಚನೆಯಲ್ಲಿ ಚಿಕ್ಕವು ಮತ್ತು ಸರಳವು ಆಗಿರುತ್ತವೆ. ಅವು ಈ ಮುಂದಿನಂತಿವೆ.

**ಕಮಲಾಪುರ:** ಹಿಂದೆ ಮಾಧವಭಟ್ಟರೆಂಬ ಬ್ರಾಹ್ಮಣರು ದಾರಿದ್ರ್ಯ ನಿರ್ವಹಣೆಗಾಗಿ ತಪ್ಪಸ್ಸು ಮಾಡಲು ಸ್ಥಳವನ್ನು ಹುಡಿಕಿಕೊಂಡು ಬಂದಾಗ ಪಂಪಾ ಸರೋವರಕ್ಕೆ ಪಶ್ಚಿಮ ಭಾಗದಲ್ಲಿ ಕಮಲಾದೇವಿಯೆಂಬ ದುರ್ಗಾದೇವಸ್ಥಾನವನ್ನು ಕಂಡು ತಪ್ಪಸ್ಸು ಮಾಡಿ ಸಿದ್ಧಿಯನ್ನು ಪಡೆದನು. ಅದಕ್ಕಾಗಿ ಆ ಸ್ಥಳವನ್ನು ಕಮಲಾಪುರವೆಂದು ಕರೆಯುತ್ತಾರೆ.[೨೩] ಮತ್ತೊಂದು ಐತಿಹ್ಯದ ಪ್ರಕಾರ ಈಗಿನ ಕಮಲಾಪುರ ಕೆರೆಯಲ್ಲಿ ಈ ಹಿಂದೆ ಕಮಲದ ಹೂಗಳು ತುಂಬ ಇರುತ್ತಿದ್ದವು. ಆ ಹೂವಿನಿಂದ ಈ ಗ್ರಾಮಕ್ಕೆ ಕಮಲಾಪುರ ಎಂದು ಹೆಸರು ಬಂತು ಎಂದು ಜನಸಾಮಾನ್ಯರು ಹೇಳುತ್ತಾರೆ.

**ಕುರುಗೋಡು:** ಒಂದು ಸಣ್ಣಗ್ರಾಮದಲ್ಲಿ ಗೌಡನ ದನಗಳನ್ನು ಕಾಯುವುದಕ್ಕೆ ಒಬ್ಬ ದನಗಾಯಿ ಇದ್ದನಂತೆ. ಪ್ರತಿನಿತ್ಯವು ದನಗಳನ್ನು ಕಾಡಿನಲ್ಲಿ ಅಂದರೆ ಗುಡ್ಡಗಾಡುಗಳಲ್ಲಿ ಮೇಯಿಸಿಕೊಂಡು ಬರುತ್ತಿದ್ದ. ಒಂದು ದಿನ ಹಸು ಹಾಲು ಇಂಡಲಿಲ್ಲದ ಕಾರಣ ಗೌಡರ ಮನೆಯವರು ದನಗಾಯಿಯನ್ನು ಬೈದರಂತೆ, ದನಗಾಯಿಗೆ ಚಿಂತೆಯಾಯಿತು. ಅವನು ಮರುದಿನ ಹಸುವಿನ ಕಡೆ ಗಮನ ಹರಿಸಿಕೊಂಡು ಇದ್ದನು. ಹೀಗಿರುವಾಗ ಹಸು ಎಂದಿನಂತೆ ಗುಡ್ಡದ ಸಂದಿಗೆ ಹೋಯಿತು. ಅದನ್ನು ದನಗಾಯಿ ಹಿಂಬಾಲಿಸಿ ನೋಡುತ್ತಾ ಹೋದನು. ಅಲ್ಲಿ ಹಾಲು ಕೊಡುತ್ತಿರುವುದು ಕಂಡು ಮನೆಗೆ ಬಂದು ಗೌಡರಿಗೆ ವಿಷಯ ತಿಳಿಸಿದ. ಗೌಡರು ಊರಿನ ಎಲ್ಲ ಗಣ್ಯರನ್ನು ಕರೆದುಕೊಂಡು ಹೋಗಿ ನೋಡಲಾಗಿ ಅಲ್ಲಿ ನಿತ್ಯವೂ ಹಸುವಿನ ಹಾಲು ಕುಡಿದು ಬಸವೇಶ್ವರ ಬೆಳೆಯುತ್ತಿದ್ದದ್ದನ್ನು ಕಂಡರು. ಊರಿನಲ್ಲಿ ಸಂಭ್ರಮದಿಂದ ಉದ್ಭವಗೊಂಡ ಬಸವೇಶ್ವರನನ್ನು ತಂದು ಪ್ರತಿಷ್ಠಾಪಿಸಿದರು. ಆ ಬಸವೇಶ್ವರನ ವಿಗ್ರಹದ ಕೋಡುಗಳು ಅತ್ಯಂತ ಕಿರಿದಾಗಿದ್ದರಿಂದ ಈ ಊರಿಗೆ ಕಿರಿಗೋಡು ಎಂದು ಹೆಸರಾಗಿ ಕಾಲ ಕ್ರಮೇಣ ಕುರುಗೋಡು ಎಂದು ಪ್ರಚಲಿತಗೊಂಡಿದೆ ಎಂಬುದಾಗಿ ಹೇಳುತ್ತಾರೆ.

**ಮಾಸ್ಲಯ್ಯನ ಗುಡ್ಡ:** ಮಾಸ್ಲಯ್ಯನ ಗುಡ್ಡವು ನವಶಿಲಾಯುಗದ ನೆಲೆಯಾಗಿದ್ದರಿಂದ ಅಲ್ಲಿ ಮಾಸ್ಲಯ್ಯ ಎಂಬ ವ್ಯಕ್ತಿಯು ಹೆಚ್ಚಾಗಿ ಓಡಾಡುತ್ತಿದ್ದರಿಂದ ಆ ಗುಡ್ಡಕ್ಕೆ ಮಾಸ್ಲಯ್ಯನ ಗುಡ್ಡವೆಂದು ಕರೆಯುತ್ತಾರೆ. ಇಂದಿನ ಹೇಮಕೂಟ ಹಾಗೂ ರತ್ನಕೂಟದ ಗುಡ್ಡದ ಬಳಿಯಲ್ಲಿ ಸುತ್ತಾಡಿ ಕೊಂಡಿದ್ದನಂತೆ.[೨೪]

**ಅಂಜನಾದ್ರಿ;** ಗಂಗಾವತಿ ತಾಲೂಕಿನ ಹನುಮನಹಳ್ಳಿ ಗ್ರಾಮದಿಂದ ೧ಕಿ. ಮೀ ಅಂತರದಲ್ಲಿ ತುಂಗಭದ್ರ ನದಿಯ ಕಾಲುವೆ ಎಡಬದಿಯ ಗುಡ್ಡದ ಮೇಲೆ ಈ ಗುಡಿ ಕಟ್ಟಲಾಗಿದೆ. ಇದರ ಕುರಿತು ಐತಿಹ್ಯ ಹೀಗಿದೆ. ಹನುಮಂತನ ತಾಯಿ ಅಂಜನಾದೇವಿಯು ಈ ಪರ್ವತದಲ್ಲಿ ವಾಸವಾಗಿದ್ದಳು. ಇದರಿಂದ ಈ ಪರ್ವತಕ್ಕೆ ಅಂಜನಾದ್ರಿ, ಅಂಜನಾದ್ರಿ ಪರ್ವತ ಎಂದು ಹೆಸರು ಬಂದಿತೆಂದು ಐತಿಹ್ಯವಿದೆ.[೨೫]

**ಇಂಗಳಿಗೆ:** ಈ ಗ್ರಾಮಕ್ಕೆ ಸಂಬಂಧಿಸಿದಂತೆ, ಹಿಂದೆ ಆನೆಗೊಂದಿ ಮಹಾರಾಜರು ಪರಿವಾರ ಸಮೇತರಾಗಿ ಈ ಪ್ರದೇಶಕ್ಕೆ ಬೇಟೆಗಾಗಿ ಬರುತ್ತಿದ್ದರಂತೆ. ಹಾಗೆ ಬಂದಾಗ ಬೆಳಗಿನ ಹೊತ್ತು ಊರಿನ ಹೆಂಗಳೆಯರು ಹಾಲು, ಮೊಸರು, ಕಡೆಯುವ ಸದ್ದು ಕೇಳಿಸುತ್ತಿತ್ತು. ಇದರಿಂದ ಆ ಊರಿಗೆ ಹೊನ್ನಿಂಗಿಳಿಗೆ ಎಂದು ಕರೆದರು. ಮುಂದೆ ಅದೇ ಇಂಗಿಳಿಗೆ ಎಂದು ಪ್ರಸಿದ್ಧವಾಯಿತು.

**ಕೋಟೆ ಆಂಜನೇಯ:** ಹಿಂದೆ ಹೊಳೆತೀರದಲ್ಲಿ ಮಗುಚಿ ಬಿದ್ದ ಕಲ್ಲೊಂದರಲ್ಲಿ ಅಗಸರು ಬಟ್ಟೆ ಒಗೆಯುತ್ತಿದ್ದರು. ಹೀಗಿರುವಲ್ಲಿ ಅಗಸನೊಬ್ಬನ ಕನಸಿನಲ್ಲಿ ಬಟ್ಟೆ ಹೊಗೆಯುತ್ತಿರುವ ಕಲ್ಲಿನ ಅಡಿಭಾಗದಲ್ಲಿ ಆಂಜನೇಯನ ಮೂರ್ತಿ ಕಾಣಿಸಿಕೊಂಡಿತು. ಅದರಂತೆ ಮರುದಿನ ಹೊರಳಿಸಿ ನೋಡಿದಾಗ ಸ್ವಪ್ನ ನಿಜವಾಯಿತಂತೆ. ಅನಂತರ ಈಗಿನ ಕಂಪ್ಲಿ ಕೋಟೆಯ ಪ್ರದೇಶದಲ್ಲಿ ಅದನ್ನು ಪ್ರತಿಷ್ಠಾಪಿಸಿ ಗುಡಿ ಕಟ್ಟಿದರೆಂದು ಐತಿಹ್ಯವಿದೆ.

**ನಂದಿಬಂಡೆ:** ನಂದಿಬಂಡೆಗೆ ಸಂಬಂಧಿಸಿದಂತೆ ಒಂದು ಐತಿಹ್ಯವಿದೆ. ಈ ಊರಿನ ಆಕಳೊಂದು ಮುಂಡರಗಿಗೆ ಹೋಗಿ ಕದ್ದು ಮೇಯುತ್ತಿದ್ದು ಅಲ್ಲಿನ ಜನರು ಅದರ ತಲೆ ಕಡಿದಾಗ, ಅದರ ರುಂಡ(ತಲೆ) ಅಲ್ಲಿ ಉಳಿದು ಮುಂಡ(ದೇಹ) ಮಾತ್ರ ಈ ಊರಿಗೆ ಬಂದಿತು. ಹಾಗಾಗಿ ಈ ಊರಿಗೆ ನಂದಿಬಂಡೆ ಎಂದು ಹೆಸರಾಯಿತು.

**ಹೂವಿನ ಹಡಗಲಿ:** ಹೂವಿನ ಹಡಗಲಿ ಪ್ರಾಚೀನ ಕಾಲದಿಂದಲೂ ಹೂ ಗಳಿಗೆ ಪ್ರಸಿದ್ಧವಾಗಿತ್ತು. ವಿಜಯನಗರ ಕಾಲಕ್ಕೆ ಬುಟ್ಟಿ-ಬುಟ್ಟಿ ತುಂಬ ಹೂಗಳನ್ನು ರಾಜಧಾನಿಗೆ ತುಂಗಭದ್ರ ನದಿಯ ಮೂಲಕ ಸಾಗಿಸುತ್ತಿದ್ದರಂತೆ. ಹೀಗೆ ವಿಜಯನಗರ ಸಾಮ್ರಾಜ್ಯ ಆಳ್ವಿಕೆಯ ಸಂದರ್ಭದಲ್ಲಿ ಹೂವನ್ನು ಶ್ರೀ ವಿರೂಪಾಕ್ಷನ ಪೂಜೆಗೆ ತುಂಗಭದ್ರ ನದಿಯಲ್ಲಿ ಹಡಗಿನ ಮೂಲಕ ಕಳುಹಿಸುತ್ತಿದ್ದ ಊರಿಗೆ ಹೂವಿನ ಹಡಗಲಿ ಎಂದು ಹೆಸರು ಬಂದಿದೆ.

**ಹಿಪ್ಪತ್ತೇರಿ ಗ್ರಾಮ:** ಹೊಸೂರಿಗೆ ಸೇರಿರುವ ಹಿಪ್ಪತೇರಿ ಗ್ರಾಮದಲ್ಲಿ ನೀಲಮ್ಮ ಎಂಬ ಶಿವಶರಣೆ ಕುರುಗೋಡಿನಿಂದ ಬಂದವಳು. ಕುರುಗೋಡು ದೊಡ್ಡ ಬಸಪ್ಪನ ಹೆಂಡತಿಯೇ ನೀಲಮ್ಮ. ಇವಳು ಟಿಪ್ಪುವಿನ ಧರ್ಮಾಂಧತೆಯನ್ನು ಕಂಡು ಅವನೊಂದಿಗೆ ಮಾತನಾಡಬಾರದೆಂದು

ಹಿಪ್ಪತೇರು ಗ್ರಾಮಕ್ಕೆ ಬಂದು ನೆಲೆಸಿದಳೆಂದು ಐತಿಹ್ಯವಿದೆ. ಏಕೆಂದರೆ ಟಿಪ್ಪು ಹಿಂದು ದೇವರ ಮೂರ್ತಿಗಳನ್ನು ಭಗ್ನಗೊಳಿಸುತ್ತಿದ್ದನು. ಅವುಗಳು ಮಾತನಾಡಲು ಭಾರದವು ಎಂದು ಹೀಯಾಳಿಸುತ್ತಿದ್ದನು. ಬಳ್ಳಾರಿ ಪರಿಸರದಲ್ಲಿ ಭಿನ್ನವಾಗಿ ನಿಂತಿರುವ ಅನೇಕ ಮೂರ್ತಿಗಳು ತಾಳಿಕೋಟೆ ಕದನದಲ್ಲಿ ಜಯಗಳಿಸಿದ ನಂತರ ಸುಲ್ತಾನರು ಮಾಡಿದ ಅನಾಹುತವನ್ನು ಚಿತ್ರಿಸುವ ಅಂಶವನ್ನು ಇದು ನಿದರ್ಶಿಸುತ್ತದೆ. ಆದರೆ ಈ ಐತಿಹ್ಯದಲ್ಲಿ ಉಲ್ಲೇಖಿವಿರುವಂತೆ ಟಿಪ್ಪುವಿನಂದೊಗೆ ಇದನ್ನು ಹೋಲಿಸಿನೋಡುವುದು ಅಸಮಂಜಸವೆನಿಸುತ್ತದೆ

**ಡಣಾಯಕನ ಕೆರೆ:** ಈ ಗ್ರಾಮಕ್ಕೆ ಸಂಬಂಧಿಸಿದಂತೆ ಲಭ್ಯವಿರುವ ಐತಿಹ್ಯಗಳು ಈ ಕೆಳಕಂಡಂತಿವೆ. ಮೊದಲನೆಯದಾಗಿ ಕೂಡ್ಲಿಗಿ ತಾಲೂಕು ಜರಮಲೆಯಲ್ಲಿ ಬರಗಾಲ ಬರಲಾಗಿ, ಅಲ್ಲಿನ ಬಾರಿಕರ ಹೆಣ್ಣು ಮಗಳಾದ ಗಂಗಮ್ಮನು ತನ್ನ ಎಳೆಯ ಮಗುವಾದ ಮುದ್ದನೊಂದಿಗೆ ಬಿದಿರ ಹಳ್ಳಿಗೆ ಬಂದಳು. ಆಗ ಆ ಊರಿನಲ್ಲಿ ಜಕ್ಕಪ್ಪಚಾರ್ಯ ಮತ್ತು ಜಯಲಕ್ಷ್ಮಮ್ಮ ಎಂಬ ಬ್ರಾಹ್ಮಣ ದಂಪತಿಗಳಿದ್ದರು. ಅವರ ಆಶ್ರಮದಲ್ಲಿ ಗಂಗಮ್ಮ ಮತ್ತು ಮುದ್ದ ಬೆಳೆದರು. ದನಕಾಯಲು ಹೋಗಿದ್ದ ಮುದ್ದನು ನಿದ್ದೆ ಮಾಡಲಾಗಿ ಆತನ ಕನಸಿನಲ್ಲಿ ಸರ್ಪವೊಂದು ಕಾಣಿಸಿಕೊಂಡು ನಿಧಿ ಇರುವ ಏಳು ಸ್ಥಳಗಳನ್ನು ತೋರಿಸಿತು. ಅದನ್ನು ದೊರಕಿಸಿಕೊಂಡ ಮುದ್ದನು ಏಳು ಕೆರೆಗಳನ್ನು ಕಟ್ಟಿಸಿದನು. ಈ ರೀತಿ ಪ್ರಸಿದ್ಧನಾದ ಮುದ್ದನು ಏಳು ಅರಸರ ಗಮನಕ್ಕೆ ಬರಲಾಗಿ, ಆ ಪ್ರದೇಶದ ದಂಡನಾಯಕನಾಗುತ್ತಾನೆ. ಬಿದಿರ ಹಳ್ಳಿಯಲ್ಲಿ ದಂಡನಾಯಕನಾದ ಮುದ್ದನು ಕೆರೆ ಕಟ್ಟಿಸಿದನು. ಕೆರೆಯನ್ನು ದಂಡನಾಯಕನ ಕೆರೆ ಎಂದು ಬಿದಿರೆ ಹಳ್ಳಿಯನ್ನು ಸಹ ಅದೇ ಹೆಸರಿನಿಂದ ಕರೆಯತೊಡಗಿದರು. ಎರಡನೆಯ ಐತಿಹ್ಯವೆಂದರೆ ಕೆರೆಯಲ್ಲಿರುವ ಕನ್ನೆಮೀರಾಂಬ ದೇವತೆಯನ್ನು ಕುರಿತಾದ್ದಾಗಿದೆ. ಮುದ್ದ ದಂಡನಾಯಕನು ಕೆರೆಯನ್ನು ಕಟ್ಟಿಸಿ ಅದಕ್ಕೆ ಏಳು ಮದಗಗಳನ್ನು (ಏಳು ಬಲಿ ಮತ್ತು ಐದು ಆಹುತಿ) ಏಳನೆಯ ಮದಗದ ಬಳಿ ಬಂದಾಗ ಅದು ಬುಕ್ಕಪ್ಪಚಾರ್ಯರ ಮಗಳು ವೀರಮ್ಮಳನ್ನು ಬಲಿಕೊಡುವಂತೆ ಕೇಳುತ್ತದೆ. ಅವರ ಮನೆಯಲ್ಲಿ ಉಪ್ಪುಂಡು ಬೆಳೆದ ಮುದ್ದನು ಇದರಿಂದ ದಂಗಾಗುತ್ತಾನೆ. ಇದನ್ನು ತಿಳಿದ ವೀರಮ್ಮ ಸ್ವತಃ ಬಲಿಯಾಗಲು ಮುಂದೆ ಬರುತ್ತಾಳೆ. ಅದರಂತೆ ವೀರಮ್ಮಳನ್ನು ಏಳನೆಯ ತೂಬಿನಲ್ಲಿ ಜೀವಂತ ಸಮಾಧಿಗೊಳಿಸಲಾಯಿತು. ಆಕೆಯನ್ನು ಕನ್ನೆವಿರಾಂಬ ಹೆಸರಿನಲ್ಲಿ ಪೂಜಿಸಲಾಗುತ್ತದೆ. ಕೆರೆಯ ನಿರ್ಮಾಣದ ಹಿನ್ನಲೆಯನ್ನು ಒಳಗೊಂಡ ಈ ಐತಿಹ್ಯವು ದೈವಿನೆಲೆಯಲ್ಲಿ ನಿರೂಪಿತಗೊಂಡಿದೆ. ಇಲ್ಲಿ ಗಮನಿಸಬೇಕಾದ ಸಂಗತಿಯೆಂದರೆ ಊರಿನ ಹಿತಕ್ಕಾಗಿ ಈರಮ್ಮ ಬಲಿಯಾದದ್ದು. ಸ್ತ್ರೀ ತ್ಯಾಗವನ್ನು ಸಾಮಾಜಿಕ ಮೌಲ್ಯವೆಂಬ ಮಾಹಿತಿಯನ್ನು ಇದು ರವಾನಿಸುತ್ತದೆ. ಆದರೆ ಕೆರೆಯನ್ನು ಸ್ತ್ರೀಯರಿಗೆ ಹೋಲಿಸಿದ ನಮ್ಮ ಪರಂಪರೆಯಲ್ಲಿ ಸ್ತ್ರೀಯರನ್ನು ಬಲಿಕೊಟ್ಟ ನಿದರ್ಶನಗಳು ಸಾಕಷ್ಟಿವೆ. ಇವು ಪುರುಷ ಪ್ರಧಾನ ವ್ಯವಸ್ಥೆಯ ಕ್ರೂರತೆಗೆ ಹಿಡಿದ ಕನ್ನಡಿಯಂತಿವೆ.

**ಜೋಳದ ರಾಶಿ:** ಒಬ್ಬ ರೈತ ಒಂದು ವಿಶಾಲವಾದ ಕಣವನ್ನು ಕಟ್ಟಿಕೊಂಡು ಅದರಲ್ಲಿಯೇ ಮನೆಯೊಂದನ್ನು ಕಟ್ಟಿ ಜೀವನ ಸಾಗಿಸುತ್ತಿದ್ದನಂತೆ, ಸುತ್ತಲೂ ಕಾಡಿನಿಂದ ಕೂಡಿತ್ತು. ಒಮ್ಮೆ ಅವನ ಒಕ್ಕಲುತನದ ದುಡಿಮೆಯ ಫಲವಾಗಿ ತನ್ನ ಹೊಲದಲ್ಲಿ ಬಾರೀ ಪ್ರಮಾಣದಲ್ಲಿ ಜೋಳವನ್ನು ಬೆಳೆದಿದ್ದ. ಕಣದಲ್ಲಿ ಜೋಳವನ್ನು ತುಳಸಿ, ಮೂರು ಜೋಳದ ರಾಶಿಯನ್ನು ಮಾಡಿದನಂತೆ. ಒಂದು ಕಂಕಿರಾಶಿ, ಇನ್ನೊಂದು ಜೋಳದ ರಾಶಿ, ಮತ್ತೊಂದು ಸುಂಕ(ಕುನಿ) ಇರುವ ರಾಶಿ. ಹೀಗೆ ಮಾಡಿರುವ ಕಣದಲ್ಲಿ ಒಬ್ಬ ಶಿವಭಕ್ತ ಬಂದನಂತೆ. ಶಿವಕೊರಣ್ಯದಲ್ಲಿ ಭಿಕ್ಷೆ ಎಂದು ಬೇಡಿದನಂತೆ. ಕಣದೊಡೆಯ ಶಿವಭಕ್ತನಿಗೆ ಕಾಳನ್ನು(ಭಿಕ್ಷೆ) ನೀಡದೇ ಮುಂದೆ ಹೋಗು ಎಂದು ಅಲಕ್ಷದಿಂದ ನುಡಿದನಂತೆ. ಮತ್ತೊಮ್ಮೆ ಭಿಕ್ಷೆಯನ್ನು ಬೇಡಿದಾಗ ಕಣದಿಂದ ಆಚೆಗೆ ಬೀಳುವಂತೆ ಹೊರದಬ್ಬಿದನಂತೆ. ಕೋಪಗೊಂಡ ಶಿವಭಕ್ತ, ನಿನ್ನ ಜೋಳದ ಎಲ್ಲಾ ರಾಶಿಗಳು ಮಣ್ಣಾಗಲಿ ಎಂದು ಶಾಪಕೊಟ್ಟು ಹೊರಟು ಹೋದನಂತೆ. ಕಣದಲ್ಲಿನ ಜೋಳದ ರಾಶಿಗಳು ಮಣ್ಣಾದವು ಎಂಬುದಾಗಿ ಹೇಳುತ್ತಾರೆ. ಇಂದಿಗೂ ಸಾಲಾಗಿ ಮೂರು ಗುಡ್ಡಗಳು ಜೋಳದ ರಾಶಿಯ ರೀತಿಯಲ್ಲಿವೆ. ಈ ಸ್ಥಳವನ್ನು ಜೋಳದ ರಾಶಿಯೆಂದು ಕರೆಯುತ್ತಾ, ಇಂದು ಸಹ ಇಲ್ಲಿನ ಜನರು ಪೂರ್ವದ ನೆನಪಿನ ಕಾಣಿಕೆಯಾಗಿ ಊರ ಮಧ್ಯೆ ಇರುವ ತಾಯಮ್ಮವ್ವನಿಗೆ ಜೋಳದ ತೆನೆಯನ್ನು ತಂದು ಮಠಕ್ಕೆ ಕಟ್ಟುವ ಪದ್ಧತಿಯೂ ಇದೆ.[೨೬] ದಾನವನ್ನು ಕುರಿತು ಹೇಳುವ ಈ ಐತಿಹ್ಯವು ಯಾರಿಗೆ ದಾನ ಮಾಡುವ ಗುಣವಿಲ್ಲವೂ ಅವರು ಶಾಪಕ್ಕೆ ಗುರಿಯಾಗುತ್ತಾರೆ ಎನ್ನುವ ಸಂಗತಿಯನ್ನು ಒಳಗೊಂಡಿದೆ. ಇದು ದಾನವನ್ನು ಸಾಮಾಜಿಕ ಮೌಲ್ಯವೆಂದು ಗ್ರಹಿಸುತ್ತದೆ. ಇದನ್ನು ಗಮನಿಸಿದಾಗ ಇದು ಪುರೋಹಿತಶಾಹಿಯ ದೃಷ್ಟಿಕೋನದ ಹಿನ್ನಲೆಯಲ್ಲಿ ರೂಪುಗೊಂಡಿದೆ ಎಂದು ಹೇಳಬಹುದು.

**ತೆಕ್ಕಲಕೋಟೆ:** ಬಳ್ಳಾರಿಯಿಂದ ಸುಮಾರು ೪೪ಕಿ. ಮೀ ಅಂತರದಲ್ಲಿದೆ. ಈ ಊರಿನ ಅಮರೇಶ್ವರ ದೇವಸ್ಥಾನದ ಶಾಸನ ಪ್ರಕಾರ ತೆಕ್ಕಲಕೋಟೆಯನ್ನು ೧೫೧೧ರಲ್ಲಿ ಜಕ್ಕರಾಯನೆಂಬುವನು ಶ್ರೀಕೃಷ್ಣದೇವರಾಯನ ಗೌರವಾರ್ಥ ಕಟ್ಟಿಸಿದನೆಂದು ತಿಳಿದುಬರುತ್ತದೆ. ಆದರೆ ಈ ಊರಿನ ಕುರಿತು ಐತಿಹ್ಯ ಹೀಗಿದೆ. ತೆಂಕನಾಯ್ಕನೆಂಬ ಪಾಳೇಗಾರನಿದ್ದ. ಅವನು ಸುತ್ತೆಲ್ಲಾ ಹಳ್ಳಿಗಳನ್ನು ಆಳಿದನಂತೆ. ನಿಜಾಮರ ಹಾವಳಿ ತಡೆಯಲು ತಮ್ಮ ಊರಿನ ಸುತ್ತ ಕೋಟೆ ಕಟ್ಟಿಸಿದನಂತೆ. ಕೋಟೆಯನ್ನು ಕಟ್ಟಿಸಿದ ನಾಯಕನ ಹೆಸರಿನಲ್ಲಿ ಈ ಊರಿಗೆ ತೆಂಕನಕೋಟೆ ಎಂದು ಹೆಸರು. ಏಳು ಅಗಸಿಗಳನ್ನು ಹೊಂದಿರುವುದು ಈ ತೆಂಕನಕೋಟೆ ಎಂಬುದು ಕರೆಯುತ್ತಾ ಮುಂದೆ ಇದು ತೆಕ್ಕಲಕೋಟೆಯಾಗಿದೆ.[೨೭]

ಈ ಮೇಲಿನ ಎರಡು ಆಕರಗಳನ್ನು ಗಮನಿಸಿದಾಗ ಎರಡು ಕೂಡ ಒಂದಕ್ಕೊಂದು ಪೂರಕವಾಗಿಲ್ಲದಿರುವುದು ಕಂಡುಬರುತ್ತದೆ. ಏಕೆಂದರೆ ಶಾಸನ ಜಕ್ಕಾರಾಯನೆಂಬ ಪಾಳೇಗಾರ

ಕಟ್ಟಿಸಿದ ಎಂದು ಹೇಳಿದರೆ, ಐತಿಹ್ಯವೇ ಬೇರೆ ಹೇಳುತ್ತದೆ. ಆದರೂ ಐತಿಹ್ಯವೂ ಕೂಡ ಚರಿತ್ರೆಯಲ್ಲಿ ಬಂದಂತಹ ಪಾಳೇಗಾರನಿಂದ ಈ ಕೋಟೆ ನಿರ್ಮಾಣವಾಯಿತು ಎಂದು ಹೇಳುತ್ತದೆ. ಇದರಿಂದ ಕೃಷ್ಣದೇವರಾಯನ ನೆನಪಿಗಾಗಿ ಈ ಕೋಟೆಯನ್ನು ಕಟ್ಟಿಸಿದ್ದು ವಿಜಯನಗರ ಅವನತಿಯ ನಂತರ ಸ್ವತಂತ್ರ್ಯಗೊಂಡು ಪಾಳೇಗಾರರು ಮತ್ತೆ ಅದನ್ನು ಜೀರ್ಣೋದ್ಧಾರಮಾಡಿರಬಹುದು ಎಂಬುದನ್ನು ಈ ಐತಿಹ್ಯವು ಸೂಚಿಸುತ್ತದೆ.

**ರಾಮಗಡ:** ಕಂಪಿಲರಾಯನ ಮೊದಲನೇ ಹೆಂಡತಿಯ ಮಗನಾದ ಕುಮಾರರಾಮನನ್ನು ಅವನ ಮಲತಾಯಿಯಾದ ರತ್ನಾಜಿಯು ಮೋಹಿಸುತ್ತಾಳೆ. ಆದರೆ ಇದನ್ನು ಕುಮಾರರಾಮ ತಿರಸ್ಕರಿಸುತ್ತಾನೆ. ಇದರಿಂದ ಕುಪಿತಗೊಂಡ ರತ್ನಾಜಿ ಕಂಪಿಲರಾಯನ ಬಳಿ ಇವನ ವಿರುದ್ಧ ಸಲ್ಲದ ಆರೋಪ ಮಾಡುತ್ತಾಳೆ. ಇವಳ ಮಾತನ್ನು ಕೇಳಿದ ಕಂಪಿಲರಾಯನು ಕುಮಾರರಾಮನನ್ನು ಶಿರಚ್ಛೇದ ಮಾಡುವಂತೆ ಮಂತ್ರಿ ಬೈಚಪ್ಪನಾಯಕನಿಗೆ ಆದೇಶಿಸುತ್ತಾನೆ. ಆಗ ಬೈಚಪ್ಪನಾಯಕನು ಸತ್ಯ ಸಂಗತಿಯನ್ನು ತಿಳಿದು ಕುಮಾರರಾಮನನ್ನು ರಾಮಗಡಕ್ಕೆ ತಂದು ಬಚ್ಚಿಡುತ್ತಾನೆ. ಈ ಕಾರಣದಿಂದ ಆ ಗುಡ್ಡಕ್ಕೆ ರಾಮಗಡವೆಂದು ಹೆಸರು. ಕುಮಾರರಾಮನ ಆಗಮನದಿಂದ ಈ ಊರಿಗೆ ರಾಮಗಡ ಎನ್ನುವ ಹೆಸರು ಬಂದಿತು ಎನ್ನುವುದರೊಂದಿಗೆ ಅಂದಿನ ರಾಜ್ಯಾಡಳಿತದ ಚರಿತ್ರೆಯನ್ನು ಒಳಗೊಂಡಿದೆ. ಒಂದು ಸಾಮ್ರಾಜ್ಯದ ಯಶಸ್ಸು ರಾಜನೊಬ್ಬನನ್ನೆ ಅವಲಂಬಿಸಿರುವುದಿಲ್ಲ. ಒಟ್ಟಾರೆ ಆ ರಾಜ್ಯದ ಇಡೀ ಆಡಳಿತ ನಿರ್ವಾಹಣ ವ್ಯವಸ್ಥೆಯನ್ನು ಅವಲಂಬಿಸಿರುತ್ತದೆ. ರಾಜನು ಹಲವು ಆಡಾಳಿತಾತ್ಮಕ ನಿರ್ಧಾರ ತೆಗೆದು ಕೊಳ್ಳುವ ಸಂದರ್ಭದಲ್ಲಿ ಅವಘಡ ಸಂಭವಿಸುವ ಸಾಧ್ಯತೆವಿರುತ್ತದೆ. ಅಂತಹ ಸಂದರ್ಭದಲ್ಲಿ ರಾಜಮಾತ್ಯರು, ಸಲಹೆಗಾರರಾಗಿರುವವರು ರಾಜನ ನಿರ್ಧಾರವನ್ನು ಮತ್ತೊಮ್ಮೆ ಪರೀಶಿಲಿಸಿದರೆ ಆಗುವ ಆನಾಹುತಗಳನ್ನು ತಡೆಗಟ್ಟುಬಹುದೆಂಬುದನ್ನು ಸೂಚಿಸುತ್ತದೆ. ಕುಮಾರರಾಮನ ಸ್ಮರಣಾರ್ಥ ಮಂತ್ರಿ ಬೈಚಪ್ಪನಾಯಕ ರಾಮನ ಗುಡಿಯನ್ನು ಕಟ್ಟಿಸಿದ್ದನು. "ಕಾಲಾಂತರದಲ್ಲಿ ಪಾಳು ಬಿದ್ದಾಗ ವಿಜಯನಗರ ಅರಸ ಕೃಷ್ಣದೇವರಾಯ ಆ ದೇವಲಾಯವನ್ನು ದುರಸ್ತಿ ಮಾಡಿಸಿದ ಶಿಲಾಶಾಸನವಿದೆ"[೨೮] ಎಂದಿದ್ದಾರೆ

**ಸಂಡೂರು:** ಬಳ್ಳಾರಿ ಜಿಲ್ಲೆಯ ತಾಲೂಕು ಕೇಂದ್ರವಾದ ಸಂಡೂರು, ಸುಮಾರು ೪೫ಕಿ. ಮೀ ದೂರದಲ್ಲಿದೆ. ಸಂದುಗಳಿಂದ, ಕಿರಿದಾದ ಓಣಿಗಳಿಂದ ಕೂಡಿರುವುದರಿಂದ ಈ ಊರಿಗೆ ಸಂಡೂರು ಎಂಬ ಹೆಸರು ಬಂದಿದೆ ಎನ್ನುತ್ತಾರೆ. ಅಲ್ಲದೇ ಇದಕ್ಕೆ 'ಸ್ಕಂದಪುರಿ' ಎಂಬ ಹೆಸರಿದ್ದು ಮುಂದೇ ಆದೇ ಸಂಡೂರು ಆಯಿತೆಂದು ಹೇಳುತ್ತಾರೆ. ಇನ್ನೊಂದು ಐತಿಹ್ಯದ ಪ್ರಕಾರ ಕಣಿವೆಗಳ ಮೂಲಕ ಪ್ರವೇಶವಿರುವುದರಿಂದ ಸಂಡೂರು ಎಂಬ ಹೆಸರು ಬಂದಿದೆ. ಇನ್ನೂ ಒಂದು ಅಭಿಪ್ರಾಯವನ್ನು ನಾಗಯ್ಯನವರು ವ್ಯಕ್ತಪಡಿಸಿದ್ದಾರೆ. ಇಲ್ಲಿನ ಪಾರ್ವತಿ

ದೇವಾಲಯ ಬಹು ಪ್ರಾಚೀನವಾದದು, ಇದು ಚಂಡಿ ಎಂಬ ಹೆಸರಿನಿಂದಾಗಿ ಚಂಡಿ+ಊರು=ಚಂಡಿಯೂರು= ಚಂಡೂರು, ಸಂಡೂರು ಆಗಿರಬೇಕೆಂದು ಊಹಿಸಿದ್ದಾರೆ.[೨೯]

**ಮಾತಂಗಪರ್ವತ:** ಹಂಪಿಯ ವಿರೂಪಾಕ್ಷಿ ದೇವಾಲಯದ ಎದುರಿಗಿರುವ ಎಮ್ಮೆ ಬಸಪ್ಪನ ಬಲಭಾಗಕ್ಕೆ ಕಂಡುಬರುವ ಎತ್ತರವಾದ ಬೆಟ್ಟವನ್ನು ಮಾತಂಗಪರ್ವತ, ಮಾತಂಗಿಪರ್ವತ ಎಂಬ ಎರಡು ಹೆಸರುಗಳಿಂದ ಗುರುತಿಸಲಾಗುತ್ತದೆ. ಸಾಮಾಜಿಕ ವ್ಯವಸ್ಥೆಯಲ್ಲಿ ಮೇಲ್‌ಸಮುದಾಯಕ್ಕೆ ಸೇರಿದ ಜನರು ಈ ಪರ್ವತದಲ್ಲಿ ಮಾತಂಗ ಎಂಬ ಋಷಿಯು ವಾಸವಾಗಿದ್ದನು, ಆದ್ದರಿಂದ ಈ ಬೆಟ್ಟಕ್ಕೆ ಮಾತಂಗ ಬೆಟ್ಟವೆಂದು, ಮಾತಂಗಪರ್ವತವೆಂತಲೂ ಕರೆಯುವುದು ರೂಢಿಯಲ್ಲಿದೆ ಎಂದು ಅಭಿಪ್ರಾಯಪಡುತ್ತಾರೆ. ಆದರೆ ತಳಸಮುದಾಯಕ್ಕೆ ಸೇರಿದ ಜನರು ಈ ಬೆಟ್ಟದಲ್ಲಿ ಮಾತಂಗಿ ಇದ್ದಳು, ಆದುದರಿಂದ ಮಾತಂಗಿ ಪರ್ವತವೇ ಹೊರತು ಮಾತಂಗ ಪರ್ವತ ಅಲ್ಲವೆಂದು ಅಭಿಪ್ರಾಯಪಡುತ್ತಾರೆ. ಸಮಾಜದಲ್ಲಿ ಜನರು ತಮ್ಮ ಅನನ್ಯತೆಯನ್ನು ಹೇಳಲು ದೈವದೊಂದಿಗೆ ಸಮೀಕರಿಸಿಕೊಳ್ಳುವುದನ್ನು ಈ ಐತಿಹ್ಯಗಳು ಒಳಗೊಂಡಿವೆ. ಅಲ್ಲದೆ 'ಮಾತಂಗಿ ವಿಗ್ರಹ ಪೂರ್ವದಲ್ಲಿತ್ತು. ಅದನ್ನು ಬೇರೆ ಕಡೆಗೆ ಸ್ಥಳಾಂತರಿಸಲಾಯಿತು ಎಂಬ ವಿಷಯ ತಿಳಿಸುತ್ತಾ ಮಾತಂಗಿಯು ಮಾದಿಗರ ಆದಿ ದೇವತೆಯು ಹೌದು. ಹೀಗಾಗಿ ಇಂದು ಸಹ ಮಾತಂಗಿ ಪರ್ವತ ಮಾದಿಗರಿಗೆ ಪವಿತ್ರ ಸ್ಥಳವೆಂದು' ಪ್ರವಾಸಿ ಮಾರ್ಗದರ್ಶಕರು ಅಭಿಪ್ರಾಯ ಪಡುತ್ತಾರೆ.

**ಕೋಟಿಲಿಂಗ:** ಹಂಪಿಯ ಕೋದಂಡರಾಮ ದೇವಾಲಯದ ಎದುರಿನಲ್ಲಿ ಕಂಡುಬರುವ ಚಕ್ರತೀರ್ಥದ ತೀರದಲ್ಲಿ ವಿಶಾಲವಾದ ಬಂಡೆಯೊಂದರ ಮೇಲೆ ಕೆತ್ತಲ್ಪಟ್ಟ ಸಣ್ಣ ಸಣ್ಣ ನೂರಾರು ಲಿಂಗಗಳನ್ನು ಕೋಟಿ ಲಿಂಗವೆಂದು ಕರೆಯುತ್ತಾರೆ. ಈ ಬಗೆಯ ಲಿಂಗಗಳನ್ನು ಬಹು ದಿನಗಳ ಹಿಂದೆ ಕೋತಿಗಳು ಪೂಜಿಸುತ್ತಿದ್ದವಂತೆ ನದಿಯಿಂದ ಬಾಯಿಯಲ್ಲಿ ನೀರು ತಂದು ಲಿಂಗದ ಮೇಲೆ ಹಾಕಿ ಸುತ್ತಲಿನ ವಿವಿಧ ಹೂ ಪತ್ರೆಗಳನ್ನು ತಂದು ಚೆಲ್ಲಿ ಪೂಜಿಸುತ್ತಿದ್ದವಂತೆ. ಆದ್ದರಿಂದ ಇದಕ್ಕೆ ಕೋತಿಲಿಂಗ ಎಂಬ ಹೆಸರು ಬಂತು ಎಂಬುದಾಗಿ ಹೇಳುತ್ತಾರೆ. ಇದು ಕೋಟಿಲಿಂಗವೆಂದು ಇತ್ತಿಚಿಗೆ ರೂಢಿಯಾಗಿದೆ. ಈ ಸ್ಥಳಕ್ಕೆ ಸಂಬಂಧಿಸಿದಂತೆ ಕೋದಂಡ ರಾಮಸ್ವಾಮಿ ದೇವಾಲಯದ ಎದುರಿಗೆ ಇರುವ ಕೋಟಿಲಿಂಗದ ಹತ್ತಿರ ಇರುವ ವಿಶಾಲವಾದ ಬಂಡೆಯ ಮೇಲೆ 'ಶ್ರೀ ಕೋಟಿಶಂಕ್ಕರ ಅಷ್ಟೋತ್ತರ ಶತಲಿಂಗಾಯ ನಮಃ', 'ಕೋಟಿ ಶಂಕರ', 'ಕೋಟಿ ಲಿಂಗ' ಎಂದು ಬರೆದಿದೆ.[೩೦]ಇನ್ನೊಂದು ಐತಿಹ್ಯದ ಪ್ರಕಾರ, "ದಕ್ಷಪ್ರಜಾಪತಿ ಎಂಬ ರಾಜನಿದ್ದ. ಅವನಿಗೆ ಅರವತ್ತು ಮಂದಿ ಹೆಣ್ಣು ಮಕ್ಕಳಿದ್ದರು, ಆದರೆ ಒಂದು ಗಂಡು ಮಗುವಿಲ್ಲವೆಂದು ರಾಜನಿಗೆ ತುಂಬಾ ದುಖಃವಾಯಿತು. ಹೀಗಿರುವಾಗ ಒಮ್ಮೆ ಇವನ ರಾಜಧಾನಿಯು ಕ್ಷಾಮಕ್ಕೆ ತುತ್ತಾಯಿತು. ಇಬ್ಬರು ಅಣ್ಣತಮ್ಮಂದಿರು ತಮ್ಮ ತಂದೆ

ತಾಯಿಗಳನ್ನು ಕಳೆದುಕೊಂಡರು. ಅವರಲ್ಲಿ ಕಿರಿಯವನು ಸಹ ತೀರಿಕೊಂಡ. ಆಗ ಹಿರಿಯ ಅಣ್ಣ ಗೊತ್ತು ಗುರಿಯಿಲ್ಲದೆ ತಮ್ಮನ ಹೆಣವನ್ನು ಹೆಗಲಮೇಲೆರಿಸಿಕೊಂಡು ಅಲೆದಾಡುತ್ತಿದ್ದನು. ಒಮ್ಮೆ ಶಿವಪಾರ್ವತಿಯರು ಆಕಾಶ ಮಾರ್ಗವಾಗಿ ಹೋಗುತ್ತಿರುವಾಗ ಪಾರ್ವತಿಯು ಈ ದೃಶ್ಯವನ್ನು ನೋಡುತ್ತಾಳೆ. ಅವಳಿಗೆ ಅಣ್ಣನ ಮೇಲೆ ಕರುಣೆ ಬರುತ್ತದೆ. ಸತ್ತ ತಮ್ಮನನ್ನು ಬದುಕಿಸಿ ಕೊಡುವಂತೆ ಶಿವನಲ್ಲಿ ಪ್ರಾರ್ಥಿಸುತ್ತಾಳೆ. ಶಿವ ಆಕೆಯ ಮಾತಿಗೆ ಒಪ್ಪಿ ಸಮ್ಮತಿಸುತ್ತಾನೆ. ಅದರಂತೆ ತಮ್ಮನಿಗೆ ಜೀವದಾನ ಮಾಡುತ್ತಾನೆ. ಸತ್ತು ಬದುಕಿದ ತಮ್ಮನನ್ನು ದಕ್ಷಪತಿಗೆ ನೀಡುತ್ತಾನೆ. ದಕ್ಷಪತಿಯು ಅವನಿಗೆ ದಕ್ಷಮುನಿಯೆಂದು ಹೆಸರಿಡುತ್ತಾನೆ. ಅನಂತರ ಮತ್ತೊಂದು ಕಡೆ ಜಾಂಬುಮುನಿ ದಕ್ಷಮುನಿಯನ್ನು ದೇವತೆಗಳ ಕಾವಲಿಗಾಗಿ ಕಾಣಿಕೆಯಾಗಿ ಕೊಡುವಂತೆ ಕೇಳುತ್ತಾನೆ. ಆಗ ಶಿವನು ಆ ತಮ್ಮನು ದಕ್ಷಪ್ರಜಾಪತಿಯೊಡನೆ ದೇವತೆಗಳ ಸೇವೆ ಮಾಡಲಿ ಎಂದು ಹೇಳುತ್ತಾನೆ. ಹೀಗೆ ದಕ್ಷಮುನಿ ದಕ್ಷಪತಿಯೊಡಗೂಡಿ ಮಾಡಿದ ದೇವತೆಗಳ ಸೇವೆಯ ಕುರುಹಾಗಿ ಕೋಟಿಲಿಂಗ ಎಂಬ ಕಲ್ಪನೆ ಮೂಡಿದೆ"[೩೧]ಎಂದು ಅಭಿಪಾಯಿಸುತ್ತಾರೆ.

**ಚಿಲಕನಹಟ್ಟಿ:** ಚಿಲಕನಹಟ್ಟಿ ಕುರಿತು ಐತಿಹ್ಯ ಹೀಗಿದೆ. ಚಿಲಕನಹಟ್ಟಿಯು ಹಂಪಿಯ ವಿರೂಪಾಕ್ಷನ ಹೆಂಡತಿಯಾದ ಹಂಪಮ್ಮನ ತವರು ಮನೆಯಂತೆ. ಹಂಪಿಯಲ್ಲಿ ನಡೆಯುವ ಫಲ ಪೂಜೆಯ ಸಂದರ್ಭದಲ್ಲಿ ಹಂಪಮ್ಮ ಪಂಪಾಪತಿಯರ ಲಗ್ನದ ನಿಶ್ಚಿತಾರ್ಥ ನಡೆಯುತ್ತದೆ. ಈ ನಿಶ್ಚಿತಾರ್ಥಕ್ಕೆ ಚಿಲಕನಹಟ್ಟಿಯಿಂದ ಹಂಪಮ್ಮ ಹೊರಟು ಬರಬೇಕು. ಹಂಪಿ ಹೊಳೆ ಬದಿಯಲ್ಲಿರುವ ಕೋದಂಡರಾಮನ ದೇವಸ್ಥಾನದ ಅಂಗಳದಲ್ಲಿ ನಿಶ್ಚಿತಾರ್ಥ ನಡೆಯುತ್ತದೆ. ಈ ನಿಶ್ಚಿತಾರ್ಥದ ದಿವಸ ಚಿಲಕನಹಟ್ಟಿಯಲ್ಲಿ ಜನರಿಗೆ ಬಾರೀ ಸಂಭ್ರಮ. ಅವರು ಹೆಣ್ಣಿನ ಕಡೆಯವರೆಂದು ಭಾವಿಸಿಕೊಂಡು ಹಂಪಮ್ಮನನ್ನು ಚೆನ್ನಾಗಿ ಅಲಂಕರಿಸುತ್ತಾರೆ. ಅನಂತರ ಗುಡಿಯೊಳಗೆ ಆಕೆಯನ್ನು ಕೂಡಿಹಾಕಿ ಇಡೀ ರಾತ್ರಿ ಹಾಡು ಕುಣಿತಗಳಲ್ಲಿ ಮಗ್ನರಾಗುತ್ತಾರೆ. ಈ ಮಧ್ಯೆ ಹಂಪಮ್ಮ ತನ್ನ ನಿಶ್ಚಿತಾರ್ಥಕ್ಕಾಗಿ ಹಂಪಿಗೆ ಹೊರಡುತ್ತಾಳೆ. ಗುಡಿಯ ಚಿಲಕವನ್ನು ತಾನೇ ತೆಗೆದು ಆಕೆ ಹೊರಬರುತ್ತಾಳೆ. ಚಿಲಕವನ್ನು ತೆಗೆಯುವಾಗ ಶಬ್ಧವಾಗುತ್ತದೆ. ಆಗ ಪೂಜಾರಿ ಓ ಹಂಪಮ್ಮ ಹಂಪಿಗೆ ಹೋದಳು ಎನ್ನುತ್ತಾನೆ. ಜನರೆಲ್ಲಾ ಸಂಭ್ರಮದಿಂದ ತಮ್ಮ ಮನೆಗಳಿಗೆ ಹಿಂದಿರುಗುತ್ತಾರೆ. ಹೀಗೆ ಹಂಪ್ಪಮ್ಮನ ಗುಡಿಯಲ್ಲಿ ಚಿಲಕ ತೆಗೆಯುವಾಗ ಶಬ್ಧ ಕೇಳುವುದರಿಂದ ಆ ಗುಡಿಯಿರುವ ಹಳ್ಳಿಗೆ ಚಿಲಕನಹಟ್ಟಿ ಎಂಬ ಹೆಸರು ಬಂದಿತೆಂದು ಐತಿಹ್ಯ ಇಂದಿಗೂ ಸಹ ಆಚರಣೆಯಲ್ಲಿರುವ ಫಲಪೂಜೆಯನ್ನು ಸಾಂಕೇತಿಸುವ ಈ ಐತಿಹ್ಯವು ಹಂಪಮ್ಮ ಪಂಪಾಪತಿಯನ್ನು ಅಲೌಕಿಕ ನೆಲೆಯಲ್ಲಿ ನೋಡದೆ ಲೌಕಿಕ ನೆಲೆಯಲ್ಲಿ ನೋಡಲು ಇದು ಒತ್ತಾಯಿಸುತ್ತದೆ.

**ಬಳ್ಳಾರಿ:** ಜಿಲ್ಲಾ ಕೇಂದ್ರವಾದ ಬಳ್ಳಾರಿ ಸ್ಥಳದ ಬಗ್ಗೆ ಹಲವಾರು ಐತಿಹ್ಯಗಳು ಇವೆ. ಈ ಪ್ರದೇಶಕ್ಕೆ ಸಂಬಂಧಿಸಿದಂತೆ ಹಲವಾರು ಶಾಸನಗಳು ದೊರೆತಿವೆ. ಬಳ್ಳಾರಿ ಎಂಬ ಹೆಸರು ಒಬ್ಬ ದುಷ್ಟ ವ್ಯಕ್ತಿಯ ನಾಮವನ್ನು ಹೊತ್ತು ನಿಂತಿದೆ ಎಂಬುದಾಗಿ ವಿದ್ವಾಂಸರಾದ ಎಂ.ಎಂ. ಕಲುಬುರ್ಗಿಯವರು ವಿವರಣೆ ನೀಡುತ್ತಾರೆ. ಬಳ್ಳಾರಿ ನಾಮ ಮಹಾಭಾರತದ ಕಥೆಯನ್ನು ಹಿನ್ನಲೆಯಾಗಿಸಿಕೊಂಡಿದೆ. ಹಸ್ತಿನಾವತಿಯನ್ನು ಧರ್ಮರಾಯನು ಆಳುತ್ತಿದ್ದ ಸಮಯದಲ್ಲಿ ಕುಂತಳ ನಗರವನ್ನು ಚಂದ್ರಹಾಸರಾಯನು ಆಳುತ್ತಿದ್ದನು. ಆಗ ಆ ಪ್ರದೇಶ ಅರಣ್ಯವಾಗಿತ್ತು. ಅಲ್ಲಿರುವ ಗುಡ್ಡದಲ್ಲಿ 'ಬಳಾಸುರ' ನೆಂಬ ರಾಕ್ಷಸನು ಜೀವಕೋಟಿಗಳಿಗೆ ಉಪದ್ರವ ಮಾಡುತ್ತಾ ಇರುವಾಗ ಸ್ವರ್ಗಲೋಕದ ದೇವಕನ್ನಿಕೆಯರು ಭೂ ಲೋಕದ ಸ್ಥಳದಲ್ಲಿ ಇಚ್ಛ ವಿಹಾರದಲ್ಲಿ ಇರುವಾಗ ಬಳಾಸುರನು ದೇವಕನ್ನಿಕೆಯರಿಗೆ ಕಾಮಾತುರದಿಂದ ಉಪದ್ರವ ಕೊಟ್ಟಿದ್ದರಿಂದ, ದೇವೇಂದ್ರನು ಇದನ್ನು ಕೇಳಿ ಒದೆ ಮಾಡುವ ನಿಮಿತ್ತ ಭೂ ಲೋಕಕ್ಕೆ ಬಂದು ವಜ್ರಾಯುಧದಿಂದ ಸಂಹಾರ ಮಾಡಿದ್ದರಿಂದ ಆ ಗುಡ್ಡಕ್ಕೆ ಬಳ್ಳಾರಿಯೆಂದು ನಾಮ ಪ್ರಸಿದ್ಧಿಯಾಯಿತು ಎಂದು ಉಲ್ಲೇಖಿಸಿದ್ದಾರೆ. ಇನ್ನೊಂದು ಅಭಿಪ್ರಾಯವನ್ನು ಎಂ.ಎಂ. ಕಲುಬುರ್ಗಿಯವರು ತಮ್ಮ ಕರ್ನಾಟಕ ಕೈಫಿಯತ್ತು ಕೃತಿಯಲ್ಲಿ ವ್ಯಕ್ತಪಡಿಸಿದ್ದಾರೆ. ಬಳಹರಿ ನಾಮವು ಕಲಿಯುಗದಲ್ಲಿ ಬಳ್ಳಾಳರಾಯನ ವಂಶಸ್ಥನಾದ ಸಿಂದು ಬಳ್ಳಾಳರಾಯನು ಇಲ್ಲಿ ರಾಜ್ಯಭಾರ ಮಾಡುತ್ತಾ ಇರುವ ವೇಳೆಯಲ್ಲಿ ಚತುರಂಗ ಬಲ ಸಮೇತರಾಗಿ ಬೇಟೆಗೆ ಹೊರಟು ಅರಣ್ಯದಲ್ಲಿ ವ್ಯಾಘ್ರ ಮುಂತಾದ ಕ್ರೂರ ಮೃಗಗಳನ್ನು ಸಂಹಾರ ಮಾಡುತ್ತಾ ಈ ಪರ್ವತ ಪ್ರದೇಶಕ್ಕೆ ಬಂದು ಈ ಪರ್ವತದ ಮೇಲೆ ಇರುವ ನಿರ್ಮಲ ಲೋಕ ಪೂರಿತವಾಗಿರುವ ದಿವ್ಯದೇವಖ್ಯಾತರಗಳನ್ನು ಕಂಡು ಈ ಸ್ಥಳ ಗ್ರಾಮಕಟ್ಟಲಿಕ್ಕೆ ಯೋಗ್ಯವಾಗಿದೆಯೆಂದು ತಿಳಿದು ಅರಣ್ಯವನ್ನು ಛೇದಿಸಿ ಇದಕ್ಕೂ ಈ ಪರ್ವತದ ಉತ್ತರ ಭಾಗಕ್ಕೆ ಸಮೀಪವಾಗಿರುವ ಬಾಲಗುಡ್ಡಕ್ಕೆ ಮಧ್ಯದಲ್ಲಿ ಭೂಮಿಯು ಸಮಾನಾಗಿದ್ದು ಈ ಸ್ಥಳದಲ್ಲಿ ಪಟ್ಟಣವನ್ನು ಕಟ್ಟಿಸಿ ಬಳಿಹರಿ ಎಂಬ ನಾಮ ಇಟ್ಟು ವ್ಯವಹರಿಸಿಕೊಂಡನು ಎಂಬುದಾಗಿ ಅಭಿಪ್ರಾಯಿಸುತ್ತಾರೆ.

**ಉಚ್ಚಂಗಿಕ್ಷೇತ್ರ:** ಉಚ್ಚಂಗಿ ಬೆಟ್ಟದ ಶಾಸನದಲ್ಲಿ ಉಚ್ಚಂಗಿಯಮ್ಮನನ್ನು ಒಳಗೊಂಡು ಮೂವರು ಬ್ರಾಹ್ಮಣ ಕನ್ಯೆಯರು ಈಶ್ವರನನ್ನು ಕುರಿತು ತಪಸ್ಸು ಮಾಡಿದ ಪವಿತ್ರ ಕ್ಷೇತ್ರವಾಗಿದೆ ಎನ್ನುವ ಉಲ್ಲೇಖವನ್ನೊಳಗೊಂಡಿದೆ.[೨] ಉಚ್ಚಂಗಿದುರ್ಗವು ಇಂದಿನ ದಾವಣಗೆರೆ ಜಿಲ್ಲೆಯ ಹರಪನಹಳ್ಳಿ ತಾಲೂಕಿನಲ್ಲಿರುವ ಒಂದು ಹೋಬಳಿ. ಹಿಂದೆ ಇದು ಪಾಂಡ್ಯರು, ಹೊಯ್ಸಳರು, ವಿಜಯನಗರ ಸಾಮ್ರಾಜ್ಯ, ಹರಪನಹಳ್ಳಿ ಪಾಳೆಗಾರರ ಆಡಳಿತಕ್ಕೆ ಒಳಪಟ್ಟಿತ್ತು. ಇದರ ಕುರಿತು ಐತಿಹ್ಯವನ್ನು ಎಂ. ಕೊಟ್ರೇಶ ಅವರು ತಮ್ಮ ಐತಿಹಾಸಿಕ ಧಾರ್ಮಿಕ ಶ್ರೀ ಕ್ಷೇತ್ರ ಉಚ್ಚಂಗಿದುರ್ಗ ಕೃತಿಯಲ್ಲಿ ಹೀಗೆ ಹೇಳಿದ್ದಾರೆ. ಕಾಡು ಸಿದ್ದರು ಒಮ್ಮೆ ಗಾಂಜಾ ಬೆರೆಸಿದ ಆಹಾರ ಸೇವಿಸಿ

ಉಚ್ಚಶೃಂಗದ ಮೇಲೆ ಹೆಣ್ಣೊಬ್ಬಳನ್ನು ಮೋಹಿಸಲು ಪ್ರಯತ್ನಿಸುತ್ತಾರೆ. ಉಚ್ಚಂಗೆಮ್ಮಳು ಅವರನ್ನು ತಾನು ಮೂತ್ರ ಒಯ್ಯುವುದರ ಮೂಲಕ ಅಲ್ಲಿಂದ ಕೆಳಗೆ ಬೀಳುವಂತೆ ಮಾಡುತ್ತಾಳೆ. ಹೀಗೆ ಮಾಡುವುದರಿಂದ ಕಾಡು ಸಿದ್ದರು ಇಂದಿಗೂ ಆ ಬೆಟ್ಟದ ಮೇಲೆ ವಸತಿ ಮಾಡುವುದಿಲ್ಲವೆಂದು ಐತಿಹ್ಯವಿದೆ ಎನ್ನುತ್ತಾರೆ. ಈ ಮೇಲಿನ ಉಲ್ಲೇಖಗಳನ್ನು ಗಮನಿಸಿದಾಗ ಎರಡು ಅಭಿಪ್ರಾಯಗಳಲ್ಲಿ ಸಾಮ್ಯತೆವಿದೆ. ಶಾಸನದಲ್ಲಿ ಮತ್ತು ಐತಿಹ್ಯಗಳಲ್ಲಿ ಉಚ್ಚಂಗಿದುರ್ಗದ ಸ್ಥಳದ ಪಾವಿತ್ರತೆಯನ್ನು ಕುರಿತು ಹೇಳುತ್ತದೆ. ಈ ಅಂಶವು ವೈಧಿಕ ಪುರಾಣಗಳ ಪ್ರಕಾರ ಗೋಮೂತ್ರದಿಂದ ಸೂತಕವನ್ನು ಬಿಡಿಸಬಹುದು ಎಂಬ ನಂಬಿಕೆ ಇದೆ. ಅದನ್ನು ಐತಿಹ್ಯವು ಸಾಂಕೇತಿಸುತ್ತದೆ. ಹಾಗೆಯೇ ಶಾಸನಕಾರರು ಬ್ರಾಹ್ಮಣ ಕನ್ಯೆಯರು ತಪಸ್ಸುಮಾಡಿದ ಸ್ಥಳವೆಂದು ಹೇಳುವ ಮೂಲಕ ಆ ಸ್ಥಳದ ಮತ್ತು ಬ್ರಾಹ್ಮಣರ ಮಹತ್ವವನ್ನು ಹೇಳಲು ಪೌರಾಣಿಕ ಹಿನ್ನಲೆಯನ್ನು ಬಳಸಿಕೊಂಡಿದ್ದಾರೆ. ಆದರೆ ಜನಪದರಲ್ಲಿ ಉಚ್ಚಂಗಿಯಮ್ಮನ ಮೂತ್ರದಿಂದ ಆ ಸ್ಥಳವು ಪವಿತ್ರಗೊಳ್ಳುತ್ತದೆ ಎಂಬ ನಂಬಿಕೆ ಇದೆ. ಆದರೆ ಐತಿಹ್ಯದಲ್ಲಿ ಉಚ್ಚಂಗಿಯಮ್ಮನನ್ನು ಜಾತಿ ಮೀರಿದ ದೇವತೆಯನ್ನಾಗಿ ಸಂಕೇತಿಸುತ್ತಾರೆ.

**ಉಜ್ಜನಿ:** ಕೂಡ್ಲಿಗಿ ತಾಲೂಕಿನ ಉಜ್ಜನಿ ಗ್ರಾಮವು ಈ ಹಿಂದೆ ಶಂಭುಮುನಿ ಶಿವಚಾರ್ಯರು ಮಧ್ಯಪ್ರದೇಶದ ಉಜ್ಜನಿಯ ಪೀಠಾಚಾರ್ಯರಾಗಿದ್ದರು. ಅಲ್ಲಿ ವೀರಸೇನನೆಂಬುವ ದೊರೆಯು ಬಹಳ ಮತಾಂಧನಾಗಿದ್ದು, ಅವನು ಜೈನ ಮತದವನಾಗಿದ್ದನು. ಅನ್ಯಧರ್ಮವೆಂದರೆ ಸದಾ ಈರ್ಪೆಯಿಂದ ನೋಡುತ್ತಿದ್ದನಂತೆ. ಒಂದು ದಿನ ವೀರಶೈವ ಧರ್ಮಿಯರನ್ನು ಮತ್ತು ಅವರ ಮಠಗಳನ್ನು ನಾಶ ಮಾಡಬೇಕೆಂದು ಯುದ್ಧ ಸಾರಿದ. ಯುದ್ಧದಲ್ಲಿ ವೀರಶೈವರಿಗೆ ಗೆಲುವಾಯಿತು. ಆದರೆ ಯುದ್ಧದಲ್ಲಾದ ಅನಾಹುತ ಕಗ್ಗೊಲೆಗಳನ್ನು ನೋಡಿ ಶಂಭುಮುನಿಶಿವಾಚಾರ್ಯನಿಗೆ ಅಪಾರ ವ್ಯಥೆಯಾಯಿತು. ಗೆದ್ದ ರಾಜ್ಯವನ್ನು ವೀರಸೇನರಿಗೆ ಹಿಂದುರಿಗಿಸಿದನು. ತಮ್ಮ ಪಟ್ಟದ ಶಿಷ್ಯರಾದ ಮರುಳಾಧ್ಯಶಿವಾಚಾರ್ಯರೊಡಗೂಡಿ ದೇಶ ಸಂಚಾರ ಕೈಗೊಂಡರು. ಉಜ್ಜನಿ ಬಳಿ ತಪಸ್ಸನ್ನಾಚಾರಿಸುತ್ತಿರುವಾಗ ಪಾಂಡ್ಯರಾಜ ಅಲ್ಲಿಗೆ ಬಂದು ತನ್ನ ಕೃತಜ್ಞತೆಯನ್ನು ಅರ್ಪಿಸಿದ. ಕಾರಣ ಪಾಂಡ್ಯರಾಜ ಪೀಠಾಚಾರ್ಯರ ಅಶೀರ್ವಾದದಿಂದ ಸಂತಾನ ಪಡೆದಿದ್ದ. ನಂತರ ಶ್ರೀಗಳವರ ಅಭೀಪ್ಸೆಯಂತೆ ಪಾಂಡ್ಯರಾಜ ಅಲ್ಲಿಯೇ ಬಂದು ಸದ್ಧರ್ಮ ಸಿಂಹಾಸನ ಮಠವನ್ನು ಕಟ್ಟಿಕೊಟ್ಟನು. ಮರುಳಾಧ್ಯರು ತಮ್ಮ ಮೂಲ ಸ್ಥಳದ ಹೆಸರನ್ನು ಈಗಿನ ಉಜ್ಜನಿಗೆ ನಾಮಕರಣ ಮಾಡಿದರು. ಇಂದಿನ ಉಜ್ಜನಿಗೆ ಈ ಹೆಸರು ಬರಲು ಕಾರಣವೇನು ಎನ್ನುವುದನ್ನು ಹೇಳುವುದು ಇಲ್ಲಿನ ಮುಖ್ಯವಾದ ಉದ್ದೇಶವಾದರೂ ಇದು ಹಿಂಸೆಯಿಂದ ಉಂಟಾಗುವ ಪರಿಣಾಮಗಳ ಸ್ವರೂಪವನ್ನು ವ್ಯಕ್ತಪಡಿಸುತ್ತದೆ. ಅಹಿಂಸೆಯೂ ಆದರ್ಶ ಸಮಾಜ ನಿರ್ಮಾಣಕ್ಕೆ ದಾರಿಮಾಡಿಕೊಡುತ್ತದೆ ಎನ್ನುವ ಮಹತ್ವದ ಸಂಗತಿಯನ್ನು ಅಭಿವ್ಯಕ್ತಿಸುತ್ತದೆ.

ಲೋಕದೆಲ್ಲಡೆ ಐತಿಹ್ಯವನ್ನು ನಂಬುವ ಜನರಿದ್ದಾರೆ. ಅವುಗಳಲ್ಲಿ ಜಳ್ಳು ಸುಳ್ಳುಗಳೆ ಅಧಿಕ ಪ್ರಮಾಣದಲ್ಲಿರಬಹುದು. ಕೆಲವು ಮಂತ್ರ, ಮಾಟ ಸಂಸ್ಕಾರಗಳಿಗೆ ಸಂಬಂಧಿಸಿದವು, ನೈಸರ್ಗಿಕ ಕ್ರಿಯೆ ಅಥವಾ ಘಟನೆಗಳನ್ನು ವಿವರಿಸಲು ಹೆಣೆದವು ಕೆಲವು; ಆ ವಿವರಣೆಗಳಲ್ಲಿ ಅಷ್ಟಿಷ್ಟದರೂ ಚಿರಂತನ ಸತ್ಯಗಳಿವೆ ಎಂಬುದನ್ನು ಮರೆಯುವಂತಿಲ್ಲ. ಕೆಲವು ಐತಿಹ್ಯಗಳಿಗೆ ಪೌರಾಣಿಕ ಮತ್ತು ಚಾರಿತ್ರಿಕ ಘಟನೆಗಳು ಆಧಾರವಾಗಿದ್ದರಬಹುದು. ಒಟ್ಟಿನಲ್ಲಿ ಮಾನವ ವಿಕಾಸ ಚರಿತ್ರೆಯನ್ನು ಗುರುತಿಸಲು ಅವು ತುಂಬ ಸಹಕಾರಿಯಾಗುತ್ತವೆ. ಜನ ಸಮುದಾಯದ ಮನೋಧರ್ಮದ ಮುದ್ರೆಯನ್ನೊತ್ತಿಕೊಂಡು ಹುಟ್ಟಿದ ಐತಿಹ್ಯಗಳು ಜನಸಾಂಸ್ಕೃತಿಕ ಬದುಕಿನ ಮೇಲೆ ಮಹತ್ತರವಾದ ಪರಿಣಾಮಗಳನ್ನು ಬೀರಿವೆ. ಮೊದಲು ಪುರಾಣಗೊಂಡಂತ ಅಂಶಗಳನ್ನು ಹಿಟ್ಟುಕೊಂಡು ರಚನೆಯಾದವು. ತದನಂತರ ಪ್ರಕೃತಿ, ಸ್ಥಳ, ವ್ಯಕ್ತಿ, ದೈವ ಪರಿಕಲ್ಪನೆಯಿಂದ ವ್ಯಕ್ತಿ–ವ್ಯಕ್ತಿಗಳಿಂದ, ಸಮಾಜ–ಸಮಾಜಗಳಿಂದ ಪ್ರಸರಿಸಲ್ಪಟ್ಟವು.

ಐತಿಹ್ಯ, ಪುರಾಣ ಮತ್ತು ಮತಧರ್ಮಗಳಿಗೆ ಅವಿಭಾಜ್ಯ ಸಂಬಂಧವಿದೆ. ದೇವರ ಕಲ್ಪನೆ ತತ್ವ ಮತ್ತು ಆಚಾರಗಳಷ್ಟೆ ಒಂದು ಕೈ ಅವುಗಳಿಗಿಂತ ಮಿಗಿಲಾಗಿಯೇ ಇವುಗಳಿಗೆ ಮಹತ್ವವುಂಟು. ಮತೀಯ ಕ್ಷೇತ್ರದಲ್ಲಿ ಅದರ ಪಾತ್ರ ಬಹು ವ್ಯಾಪಕವಾದುದು. ದೇವರನ್ನು ಸೃಷ್ಟಿಸಿದ್ದು ಅದು, ತತ್ವಗಳನ್ನು ಕಲ್ಪಿಸಿದ್ದು ಅದು, ಆಚಾರಗಳನ್ನು ತೋರಿಸಿದ್ದು ಅದೇಯೆ. ಆದರೆ ಅವೆಲ್ಲವು ವಸಾಹತು ಕಾಲಕ್ಕೆ ಅವುಗಳ ಮಹತ್ವ ಕಡಿಮೆಯಾಯಿತು. ಆದೇನೆ ಇದ್ದರೂ ಯಾವ ವ್ಯಕ್ತಿಯೇ ಆಗಲಿ, ಘಟನೆಯೇ ಆಗಲೀ ಮತದ ಮುದ್ರೆಯನ್ನು ಪಡೆಯಿತೆಂದರೆ, ನಾಯಕ ನಾಯಿಕೆಯರಾಗಿ, ದೇವತ್ವಕ್ಕೇರಿದರೆಂದರೆ ಪುರಾಣದ ಮಟ್ಟಕ್ಕೇರಿದಂತಾಗುತ್ತದೆ. ಮೌಖಿಕ ಪರಂಪರೆಯಲ್ಲಿ ಉಳಿದು ಬಂದ ಚರಿತ್ರೆಯೇ ಪುರಾಣ, ಐತಿಹ್ಯವೆಂದು ಹೇಳಬಹುದು. ಒಟ್ಟಿನಲ್ಲಿ ಹೇಳುವುದಾದರೆ ಪುರಾಣಕ್ಕೆ ಪೂರಕವಾಗಿ ಐತಿಹ್ಯಗಳು ಬೆಳೆದು ಬಂದಿವೆ. ಹೀಗಾಗಿ ಪೌರಾಣಿಕ ಅಂಶಗಳ ಹಿನ್ನಲೆಯಲ್ಲಿ ಐತಿಹ್ಯಗಳು ಮೈದಳೆದಿವೆ.

**ಅಡಿಟಿಪ್ಪಣಿಗಳು**

೧. ಪುರುಷೋತ್ತಮ ಬಿಳಿಮಲೆ., ಕರಾವಳಿ ಜಾನಪದ ಕೃತಿಯಲ್ಲಿ ಪುಟ. ೭೩-೮೫.

೨. ಜಿ.ಶಂ.ಪ., ಜನಪದ ಸ್ವರೂಪ ಸಾಹಿತ್ಯ, ಪುಟ.೪೫.

3. Standard dictionary of folkore, mythology and legends p. ೭೭೮.

೪. ಭಟ್‌ಸೂರಿ ಕೆ.ಜಿ(ಸಂ)., ಕರ್ನಾಟಕ ಶಾಸನ ಸಂಶೋಧನೆ, ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಲೇಖಕರು, ಸಿ. ನಾಗಭೂಷಣ, ಸಂಪಾದಕರು., ಪುಟ. ೧೩೨.

5. sii., vol iv, ಪುಟ: ೨೬೦.

೬. ಕರಿಬಸಪ್ಪ ಎ., ಬಳ್ಳಾರಿ ಜಿಲ್ಲೆಯ ಐತಿಹ್ಯಗಳು, ಅಪ್ರಕಟಿತ ಪಿಎಚ್.ಡಿ ಪ್ರಬಂಧ, ಪುಟ. ೧೫೮.

೭. ಸುಬ್ಬಣ ರೈ., ಗಾಳೆಮ್ಮ, ಪುಟ. ೧೨.

೮. ಕರಿಬಸಪ್ಪ ಎ., ಬಳ್ಳಾರಿ ಜಿಲ್ಲೆಯ ಐತಿಹ್ಯಗಳು, ಅಪ್ರಕಟಿತ ಪಿಎಚ್.ಡಿ ಪ್ರಬಂಧ, ಪುಟ. ೧೪೪.

೯. ದೇವರಕೊಂಡಾರೆಡ್ಡಿ, ಕಲವೀರ ಮನ್ವಾಚಾರ, ಪರಮಶಿವಮೂರ್ತಿ, ಭಟ್‌ಸೂರಿ(ಸಂ)., ಸಂಡೂರು ತಾಲೂಕು, ಶಾಸನ ಸಂಖ್ಯೆ ೧, ೨, ೩, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೧.

೧೦. ದೇವರಕೊಂಡಾರೆಡ್ಡಿ, ಕಲವೀರ ಮನ್ವಾಚಾರ, ಪರಮಶಿವಮೂರ್ತಿ, ಭಟ್‌ಸೂರಿ(ಸಂ)., ಸಂಡೂರು ತಾಲೂಕು, ಶಾಸನ ಸಂಖ್ಯೆ. ೭, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೧.

೧೧. ಕರಿಬಸಪ್ಪ ಎ., ಬಳ್ಳಾರಿ ಜಿಲ್ಲೆಯ ಐತಿಹ್ಯಗಳು, ಅಪ್ರಕಟಿತ ಪಿಎಚ್.ಡಿ ಪ್ರಬಂಧ, ಪುಟ. ೧೫೮.

೧೨. ದೇವರಕೊಂಡಾರೆಡ್ಡಿ, ಕಲವೀರ ಮನ್ವಾಚಾರ, ಪರಮಶಿವಮೂರ್ತಿ, ಭಟ್‌ಸೂರಿ(ಸಂ)., ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೩, ಹಂಪಿ ಶಾಸನಗಳು, ಗುಡೇಕೋಟೆ ಶಾ.ಸಂ ೩೩.

೧೩. ದೇವರಕೊಂಡಾರೆಡ್ಡಿ, ಕಲವೀರ ಮನ್ವಾಚಾರ, ಪರಮಶಿವಮೂರ್ತಿ, ಭಟ್‌ಸೂರಿ (ಸಂ)., ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೧, ಬಳ್ಳಾರಿ ಜಿಲ್ಲೆ, ಹಡಗಲಿ ಶಾ.ಸಂ.೩೧.

೧೪. ಹಂಪಿ ಜಾನಪದದಲ್ಲಿ ಇರುವ ಐತಿಹ್ಯವನ್ನು ಯಥವತ್ತಾಗಿ ಬಳಸಿಕೊಳ್ಳಲಾಗಿದೆ. ಪುರುಷೋತ್ತಮ ಬಿಳಿಮಲೆ, ಚೆಲುವರಾಜು., ಹಂಪಿ ಜಾನಪದ, ಪುಟ.

೧೫. ಕರಿಬಸಪ್ಪ ಎ., ಬಳ್ಳಾರಿ ಜಿಲ್ಲೆಯ ಐತಿಹ್ಯಗಳು, ಅಪ್ರಕಟಿತ ಪಿಎಚ್.ಡಿ ಪ್ರಬಂಧ, ಪುಟ. ೧೨೮.

೧೬. ಕರಿಬಸಪ್ಪ ಎ., ಬಳ್ಳಾರಿ ಜಿಲ್ಲೆಯ ಐತಿಹ್ಯಗಳು., ಅಪ್ರಕಟಿತ ಪಿಎಚ್.ಡಿ ಪ್ರಬಂಧ, ಪುಟ. ೧೨೯.

೧೭. ನಾಗಯ್ಯ ಜೆ.ಎಂ., ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ, ಪುಟ.೧.

೧೮. ಬಸವರಾಜ ಪೋಲಿಸ್ ಪಾಟೀಲ., ಜಾನಪದ ಚಿಂತನ, ಅಮರ ಪ್ರಕಾಶನ, ಕಲಬುರ್ಗಿ.

೧೯. ಪುರುಷೋತ್ತಮ ಬಿಳಮಲೆ ಮತ್ತು ಚೆಲುವರಾಜು., ಹಂಪಿ ಜಾನಪದ, ಪುಟ. ೭೨.

೨೦. ರಾಘವೇಂದ್ರ ಎಂ., ಸಿರುಗುಪ್ಪ ತಾಲೂಕು ದರ್ಶನ, ಪುಟ. ೧೩.

೨೧. ಕರಿಬಸಪ್ಪ ಎ., ಬಳ್ಳಾರಿ ಜಿಲ್ಲೆಯ ಐತಿಹ್ಯಗಳು, ಅಪ್ರಕಟಿತ ಪಿಎಚ್.ಡಿ ಪ್ರಬಂಧ, ಪುಟ. ೧೦೬.

೨೨. ಉದೃತ: ವಾಸುದೇವ ಬಡಿಗೇರ., ಸಂಡೂರು ಪರಿಸರದ ಕಾರ್ತಿಕೇಯ ತಪೋವನ, ಚಾರಿತ್ರಿಕ ಅಧ್ಯಯನ, ಪುಟ.೩೩.

೨೩. ಕಲುಬುರ್ಗಿ ಎಂ.ಎಂ.., ಕರ್ನಾಟಕದ ಕೈಫಿಯುತ್ತುಗಳು, ಪುಟ. ೧೩೬.

೨೪. ಪುರುಷೋತ್ತಮ ಬಿಳಿಮಲೆ, ಚೆಲುವರಾಜು., ಹಂಪಿ ಜಾನಪದ, ಪು. ೭೬.

೨೫. ಪುರುಷೋತ್ತಮ ಬಿಳಮಲೆ, ಚೆಲುವರಾಜು., ಹಂಪಿ ಜಾನಪದ ಪುಟ. ೭೪.

೨೬. ಕರಿಬಸಪ್ಪ ಎ., ಬಳ್ಳಾರಿ ಜಿಲ್ಲೆಯ ಐತಿಹ್ಯಗಳು, ಅಪ್ರಕಟಿತ ಪಿಎಚ್.ಡಿ ಪ್ರಬಂಧ, ಪುಟ. ೧೦೧.

೨೭. ರಾಘವೇಂದ್ರ ಎಂ., ಸಿರುಗುಪ್ಪ ತಾಲೂಕು ದರ್ಶನ ಪುಟ. ೧೨.

೨೮. ಉದೃತ: ಸೋಮನಾಥ ಕಾಮತ್., (ಸಂ)ವಿ.ಕೃಷ್ಣಮೂರ್ತಿ, ಇತಿಹಾಸ ದರ್ಶನ, ಅಧ್ಯಕ್ಷೀಯ ಭಾಷಣ.

೨೯. ನಾಗಯ್ಯ ಜೆ.ಎಂ., ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ, ಪುಟ. ೩೯.

೩೦. ದೇವರಕೊಂಡಾರೆಡ್ಡಿ, ಕಲವೀರ ಮನ್ವಾಚಾರ, ಪರಮಶಿವಮೂರ್ತಿ, ಭಟ್‌ಸೂರಿ(ಸಂ)., ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೩, ಹಂಪಿ ಶಾಸನಗಳು, ಶಾಸನ ಸಂಖ್ಯೆ ೧೪೫, ೧೬೬, ೧೭೪, ೧೯೧, ೧೬೪.

೩೧. ಪುರುಷೋತ್ತಮ ಬಿಳಿಮಲೆ, ಚೆಲುವರಾಜು., ಹಂಪಿ ಜಾನಪದ, ಪುಟ. ೬೭.

೩೨. ದೇವರಕೊಂಡಾರೆಡ್ಡಿ, ಕೆ.ಜಿ.ಭಟ್‌ಸೂರಿ, ಕಲವೀರ ಮನ್ವಾಚಾರ, ಪರಮಶಿವಮೂರ್ತಿ (ಸಂ)., ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ. ೧, ಬಳ್ಳಾರಿ ಜಿಲ್ಲೆ, ಹರಪನಹಳ್ಳಿ, ತಾ, ಶಾ.ಸಂ.೬

## ಅಧ್ಯಾಯ – ಆರು

## ಸಮಾರೋಪ

## ಅಧ್ಯಾಯ – ಆರು

# ಸಮಾರೋಪ

ಇತಿಹಾಸ ಪ್ರಸಿದ್ಧವಾದ ಬಳ್ಳಾರಿ ಜಿಲ್ಲೆ ಬೇರೆ ಬೇರೆ ಕಾರಣಗಳಿಂದ ಸಾಕಷ್ಟು ಜನಪ್ರಿಯತೆಯನ್ನು ಪಡೆದುಕೊಂಡಿದೆ. ಇತಿಹಾಸ ತಜ್ಞರಿಗೆ ಇಲ್ಲಿಯ ಹಂಪಿ ಪ್ರದೇಶ ವಿಜಯನಗರದಂಥ ಸಾಮ್ರಾಜ್ಯದ ರಾಜಧಾನಿಯಾಗಿ ಕಾಣಿಸಿಕೊಂಡರೆ, ಪುರಾತತ್ವ ಶಾಸ್ತ್ರಜ್ಞರಿಗೆ ಇಲ್ಲಿಯ ಬೂದಿಗುಡ್ಡ, ಸಂಗನಕಲ್ಲು, ನಿಡೇಗೋಳು, ನಿಟ್ಟೂರು ಅತಿಪ್ರಾಚೀನಕಾಲದ ಜನ ವಸತಿಯ ಕೇಂದ್ರವಾಗಿ ಆಕರ್ಷಣೀಯವಾಗಿದೆ. ಪುರಾಣ ಪ್ರಿಯರಿಗಂತೂ ಹಂಪಿಯು ರಾಮಾಯಣ ಕಾಲದ ಕಿಷ್ಕಿಂದೆಯಾಗಿ, ಗಿರಿಜೆ ಮತ್ತು ಶಿವ ತಪಸ್ಸುಗೈದ ಪವಿತ್ರ ಸ್ಥಳವಾಗಿದೆ. ಇಲ್ಲಿ ನೆಲೆಸಿರುವ ವಿವಿಧ ಧರ್ಮಗಳು ಅವುಗಳೊಂದಿಗೆ ಏರ್ಪಟ್ಟ ಸಾಮರಸ್ಯ ಮತ್ತು ಬಿಕ್ಕಟ್ಟು ಬಗೆ ಬಗೆಯ ಚರ್ಚೆಗಳನ್ನು ಹುಟ್ಟುಹಾಕಿವೆ.

ಇಲ್ಲಿಯವರೆಗೆ ನಡೆದಿರುವ ಅಧ್ಯಯನಗಳನ್ನು ಪರಾಮರ್ಶಿಸಿದಾಗ ಇವೆಲ್ಲವೂ ಲಿಖಿತ ಅಥವಾ ಭೌದ್ಧಿಕ ಆಧಾರಗಳ ಮೇಲೆ ರಚಿತಗೊಂಡಿರುವುದು ಸ್ಪಷ್ಟವಾಗುತ್ತದೆ. ಶಾಸನಗಳು, ವೀರಗಲ್ಲುಗಳು, ಮಾಸ್ತಿಕಲ್ಲುಗಳು, ಹಳೆಯ ಕಟ್ಟಡಗಳು, ಪ್ರವಾಸಿಗರ ಬರಹಗಳು, ಲಿಖಿತ ಸಾಹಿತ್ಯ ಕೃತಿಗಳು, ಬಂಡೆಯ ಮೇಲಿನ ಚಿತ್ರಗಳು, ಕಡತಗಳು ಮತ್ತಿತರ ದಾಖಲೆಗಳ ಆಧಾರದಿಂದಲೆ ವಿದ್ವಾಂಸರು ಅಲ್ಲಿರುವ ಮೇಲ್ವರ್ಗದ ಅಥವಾ ರಾಜರ ಇತಿಹಾಸವನ್ನು ಕಟ್ಟಿಕೊಡುವ ಪ್ರಯತ್ನಮಾಡಿದ್ದಾರೆ. ಈ ಬಗೆಯ ಬರವಣಿಗೆಯ ವಿಧಾನ ಸಾಂಪ್ರದಾಯಕ ವಾದುದು. ನಮ್ಮ ಇತಿಹಾಸ ತಜ್ಞರು, ಪುರಾತತ್ವ ಶಾಸ್ತ್ರಜ್ಞರು ಮತ್ತು ಸಂಸ್ಕೃತಿಯ ಕುರಿತು ಬರೆದವರೆಲ್ಲರೂ ಸಾಮಾನ್ಯವಾಗಿ ಈ ಬಗೆಯ ಸಾಂಪ್ರದಾಯಿಕ ಹಾದಿಯಲ್ಲಿ ಬರೆದಿದ್ದಾರೆ. ಅಲ್ಲಿರುವ ಕಾಲ, ಅರಸ ದಾನಕೊಟ್ಟ ವಿವರಣೆ, ದಾನ ಪಡೆದವರ ವಿವರ ಇವರುಗಳ

ಇತಿಹಾಸ ಹೇಳುವುದರ ಮೂಲಕ ಅರಸನನ್ನು, ಅವನ ವಂಶವನ್ನೊ ಅಥವಾ ಆ ಸ್ಥಳದ ಮಹತ್ವವನ್ನು ಕುರಿತು ಹೇಳಿರುತ್ತಾರೆ. ಅಲ್ಲಿರುವ ಅಸಾಧರಣ ರೂಪ ಪಡೆದಿರುವಂತಹ ಪುರಾಣ ಅಥವಾ ಪೌರಾಣಿಕತೆಯ ಬಗ್ಗೆ ಗಮನ ಹರಿಸಿರುವುದಿಲ್ಲ. ಇಲ್ಲಿರುವ ಪೌರಾಣಿಕ ಹಿನ್ನಲೆಯನ್ನು ಗುರುತಿಸಿದಾಗ ನಮಗೆ ಇನ್ನೂ ನಿಖರವಾದ ಇತಿಹಾಸ ಗೊತ್ತಾಗುತ್ತದೆ. ಏಕೆಂದರೆ ಈ ಹಿಂದೆಯೇ ಚರ್ಚಿಸಿದಂತೆ, ಭಾರತೀಯರಿಗೆ ಇತಿಹಾಸ ಪ್ರಜ್ಞೆಯಿಲ್ಲ ಎಂಬ ಪೌರಾಹಿತ್ಯರ ಅಭಿಪ್ರಾಯವನ್ನು ಶಾಸನಗಳಲ್ಲಿ ಬಂದಿರುವಂತಹ ಪೌರಾಣಿಕ ಹಿನ್ನಲೆಯನ್ನು ಗುರುತಿಸುವುದರ ಮೂಲಕ ಪಾಶ್ಚತ್ಯರ ಅಭಿಪ್ರಾಯವನ್ನು ಹೋಗಲಾಡಿಸಲು ಪ್ರಯತ್ನಿಸಬಹುದು. ಇಲ್ಲಿರುವ ಪ್ರತಿಯೊಂದು ಅಂಶಗಳು ನಮ್ಮ ಪ್ರಾಚೀನ ಅಥವಾ ಇತಿಹಾಸ ರಚನೆಯೇ ಇಲ್ಲದಂತಹ ಸಂದರ್ಭದ ಇತಿಹಾಸವನ್ನು ಕಟ್ಟಿಕೊಡುವಲ್ಲಿ ಸಾಕಷ್ಟು ಪ್ರಯತ್ನಮಾಡಿವೆ. ಹಾಗಾಗಿ ಶಾಸನಗಳಲ್ಲಿ ಬರುವ ಮೌಖಿಕ ರೂಪ ಪಡೆದಿರುವಂತಹ ಪುರಾಣ, ಐತಿಹ್ಯಗಳ ಅಂಶಗಳನ್ನು ಬಿಚ್ಚಿಡುವುದರ ಮೂಲಕ ನಮ್ಮ ಗತಕಾಲದ ಹಿಂದಿನ ಇತಿಹಾಸವನ್ನು ಕಾಣಬಹುದು.

ವಿಭಿನ್ನ ಭಾಷೆ, ಧರ್ಮ, ಜನಾಂಗದಿಂದ ಕೂಡಿದ ಭಾರತದಂಥ ದೇಶದಲ್ಲಿ ಮೌಖಿಕ ಪರಂಪರೆಯ ಸಾಮಾಗ್ರಿಗಳನ್ನು ಪರಿಗಣಿದೆ ಬಂದರೆ ಅನೇಕ ಬಗೆಯ ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ಏಕೆಂದರೆ ಅನಕ್ಷರಸ್ಥರು ಹೆಚ್ಚಿನಸಂಖ್ಯೆಯಲ್ಲಿರುವ ನಾಡಿನಲ್ಲಿ ಸಾಂಸ್ಕೃತಿಕ ಇತಿಹಾಸ ಬರೆಯುವವರು ಅಕ್ಷರವನ್ನೆ ಆಧರಿಸಿಕೊಂಡರೆ ಅಂತಹ ಇತಿಹಾಸ ಪಾರ್ಶ್ವಿಕವಾಗುತ್ತದೆ. ಏಕೆಂದರೆ ಅಕ್ಷರ ಬಲ್ಲವರು ಬರೆಯುವ ವೃತ್ತಾಂತಗಳಲ್ಲಿ ಅನಕ್ಷರಸ್ಥರ ಕುರಿತ ಸಂಗತಿಗಳಿರುವ ಸಾಧ್ಯತೆಗಳು ತೀರ ಕಡಿಮೆ. ಕ್ವಚಿತ್ತಾಗಿ ಇದ್ದರೂ ಅವುಗಳ ಕಡೆಗೆ ಗಮನ ಹರಿಸಿಲ್ಲ. ಭಾರತದಲ್ಲಂತೂ ಅಕ್ಷರಬಲ್ಲವರು ಆಳುವ ವರ್ಗದವರೊಂದಿಗೆ ತಮ್ಮನ್ನು ಗುರುತಿಸಿಕೊಂಡಿದ್ದರಿಂದ ಬಹುಸಂಖ್ಯಾತರು ದೂರವೇ ಉಳಿಯುವಂತಾಯಿತು. ಮೇಲಾಗಿ ಈ ನಾಡು ಶ್ರೇಣಿಕೃತ ವ್ಯವಸ್ಥೆಯಿಂದ ಕೂಡಿದ್ದು, ಜಾತಿ–ಜಾತಿಗಳ ಮಧ್ಯೆ ಕಲಹವುಂಟಾಗಿ ಚೂರು ಚೂರಾಗಿವೆ. ನಮಗೆಲ್ಲ ತಿಳಿದಿರುವಂತೆ ಇಲ್ಲಿನ ಚರಿತ್ರೆಯನ್ನು ಗಮನಿಸಿದಾಗ ಅಕ್ಷರವು ಬ್ರಾಹ್ಮಣರ ಸೊತ್ತಾಗಿತ್ತು. ಕ್ವಚಿತ್ತಾಗಿ ಕ್ಷತ್ರಿಯರು ಮತ್ತು ಇತರ ವೈಶ್ಯ(ವ್ಯಾಪಾರಿಗಳು)ವರ್ಗದವರು ಅಕ್ಷರ ಕಲಿತಿದ್ದರೂ ಅವರೆಲ್ಲರೂ ಹೆಚ್ಚು ಕಲಿತ ಬ್ರಾಹ್ಮಣರಿಗೆ ತಲೆಬಾಗುತ್ತಲೇ ಇದ್ದರು. ಹೀಗೆಯೇ ಇತಿಹಾಸ ಪ್ರಸಿದ್ಧವಾದ ಬಳ್ಳಾರಿ ಪರಿಸರದಲ್ಲಿ ದೊರೆಯುವ ಲಿಖಿತ ಆಕರಗಳು ಸಾಮಾನ್ಯವಾಗಿ ರಾಜರುಗಳ ವೈಭವ, ಅವರು ನಡೆಸಿದ ಯುದ್ಧಗಳು, ಅವರ ನಡುವಿನ ಒಪ್ಪಂದಗಳು, ಅವರು ಕೊಟ್ಟ ದಾನಗಳ ಪ್ರಸಂಸೆ, ಅವರಿಗಾಗಿ ಹೋರಾಡಿ ಮಡಿದ ವೀರಯೋಧರ ಉಲ್ಲೇಖ ಇಂಥ ವಿವರಗಳಿಗೆ ಮಾತ್ರ ಸೀಮಿತವಾಗಿರುತ್ತದೆ. ಇಂಥಲ್ಲಿ ಬಹುಸಂಖ್ಯಾತ ಪ್ರಜೆಗಳು ಅಥವಾ ಜನಸಾಮಾನ್ಯರು ಮತ್ತು ಅವರ ಪ್ರತಿಕ್ರಿಯೆಗಳು ಪೂರ್ಣವಾಗಿ ನಿರಾಕರಣೆಗೆ ಒಳಪಟ್ಟಿರುತ್ತವೆ.

ಬಹಳ ಕೂತೂಹಲದ ಅಂಶವೆಂದರೆ ಲಿಖಿತ ಇತಿಹಾಸಕ್ಕಿಂತ ಭಿನ್ನವಾದ ವಿವರಗಳನ್ನು ಮೌಖಿಕ ಸಾಮಾಗ್ರಿಗಳು ನೀಡುತ್ತವೆ. ಆಳುವವರನ್ನು ಕುರಿತು, ಶಾಸನಗಳು ಹೇಳುವ ಇತಿಹಾಸ ಮತ್ತು ಅವರನ್ನು ಕುರಿತು ಕಂಠಸ್ಥ ಪರಂಪರೆಯಲ್ಲಿರುವ ಐತಿಹ್ಯ ಮತ್ತು ಪುರಾಣಕ್ಕೂ ಮಧ್ಯೆ ತುಂಬ ಅಂತರವಿರುತ್ತದೆ. ವಿವೇಕ ರೈ ಅವರು ಸ್ಪಷ್ಟವಾಗಿ ಗುರುತಿಸುವ ಹಾಗೆ 'ಆಳುವವರ ಸ್ಥಾಪಿತ ಹಿತಾಸಕ್ತರ ಹತೋಟಿಯಲ್ಲಿರುವ ಲಿಖಿತ ಮಾಧ್ಯಮಗಳು ಪ್ರತಿಪಾದಿಸುವ ವಿಷಯಗಳಿಗೂ ಕಂಠಸ್ಥ ಪರಂಪರೆಯಲ್ಲಿ ದೊರೆಯುವ ಸಂಗತಿಗಳಿಗೂ ಅನೇಕ ಸಂದರ್ಭದಲ್ಲಿ ಹೊಂದಾಣಿಕೆ ಕಾಣಿಸುವುದಿಲ್ಲ'. ಈ ಹಿನ್ನಲೆಯಲ್ಲಿ ಶಾಸನಗಳಲ್ಲಿ ಕಂಡುಬರುವ ಪುರಾಣ ಅಂಶಗಳ ಹಿನ್ನಲೆಯಲ್ಲಿ ಏನನ್ನಾದರೂ ಹೊಸದಾಗಿ ಹೇಳಲು ಸಾಧ್ಯವೋ ಎಂದು ಪರಿಶೀಲಿಸಿ ನೋಡಲಾಗಿದೆ. "ಪುರಾಣಗಳ ಕುರಿತಾದ ಜಿಜ್ಞಾಸೆ ನಿನ್ನೆ-ಮೊನ್ನೆಯದಲ್ಲ. ಪ್ರಾಚೀನ ಕಾಲದಿಂದಲೂ ಇವುಗಳ ಸೃಷ್ಟಿ ಮತ್ತು ವಿಶ್ಲೇಷಣೆ ಅವ್ಯಾಹತವಾಗಿ ನಡೆದಿದೆ. ಬಹುಶಃ ಸಾಹಿತ್ಯ ಸೃಷ್ಟಿಗಿಂತ ಮೊದಲೆ ಸಮುದಾಯ ಈ ಪುರಾಣಗಳನ್ನು ಕಟ್ಟಿಕೊಂಡಿದೆ ಎನಿಸುತ್ತದೆ. ಸೃಷ್ಟಿಯ ವೈಚಿತ್ರ್ಯಗಳು ಮತ್ತು ಬದುಕಿನ ಸಂಘರ್ಷಗಳ ಮುಖಾಮುಖಿಯಲ್ಲಿ ಇವು ರೂಪುಗೊಂಡಿರಬಹುದು. ಮೇಲ್ನೋಟಕ್ಕೆ ಪುರಾಣಗಳು ನಮ್ಮ ಸಾಮಾಜಿಕ ಬದುಕಿನೊಂದಿಗೆ ಯಾವ ಸಂಬಂಧವೂ ಇಲ್ಲದಂತೆ ರಚನೆಗೊಂಡಿವೆ ಎನಿಸಿದರೂ ಇವುಗಳ ಆಳದಲ್ಲಿ ಸಂಕೀರ್ಣವಾದ ಸಾಂಸ್ಕೃತಿಕ ಬದುಕೇ ಹರಳುಗಟ್ಟಿದೆ. ಹೀಗಾಗಿ ಪುರಾಣಗಳು ಸಂಸ್ಕೃತಿಯ ಬಹುಮುಖ್ಯ ರೂಪಕಗಳು. ಮನುಷ್ಯನ ಅಪಾರವಾದ ಸೃಜನಶೀಲ ಸಾಧ್ಯತೆಗಳನ್ನು ಇವು ಕಾಣಿಸಿವೆ. ಹಲವು ಸಮುದಾಯದ ಭಾವನೆಗಳು ವಿಚಿತ್ರ ಪಾಕದಲ್ಲಿ ಬೆರೆತು ಪುರಾಣವಾಗಿ ಅಭಿವ್ಯಕ್ತಿ ಪಡೆದಿರಬಹುದು".[೧]

ಪ್ರಸ್ತುತ ಮಹಾಪ್ರಬಂಧವಾದ "ಕನ್ನಡ ಶಾಸನಗಳಲ್ಲಿ ಪುರಾಣ ಪರಿಕಲ್ಪನೆ"(ಬಳ್ಳಾರಿ ಪರಿಸರವನ್ನು ಅನುಲಕ್ಷಿಸಿ) ಎನ್ನುವ ಪ್ರಬಂಧವನ್ನು ಒಟ್ಟು ಆರು ಅಧ್ಯಾಯಗಳಾಗಿ ವಿಭಾಗ ಮಾಡಿಕೊಂಡು ಅಧ್ಯಯನ ಮಾಡಲಾಗಿದೆ. ಮೊದಲನೆ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ ಮತ್ತು ಸ್ವರೂಪವನ್ನು ಕುರಿತು ನಿಖರವಾಗಿ ಚರ್ಚಿಸುವುದರ ಮೂಲಕ, ಇಂದಿನವರೆಗೆ ಶಾಸನಗಳನ್ನು ಕುರಿತು ಯಾವ ಯಾವ ವಿಧಾನದಲ್ಲಿ ಅಧ್ಯಯನಕ್ಕೊಳಪಡಿಸಿದ್ದಾರೆ ಎನ್ನುವುದನ್ನು ಕುರಿತು ಚರ್ಚಿಸಲಾಗಿದೆ. ಅಧ್ಯಯನ ಮಾಡುವಾಗ ಮತ್ತು ಕ್ಷೇತ್ರಕಾರ್ಯದಲ್ಲಿ ಕಂಡುಕೊಂಡ ಅಲ್ಲಿಯ ಕೊಡು ಕೊಳ್ಳುವಿಕೆ, ಅಲ್ಲಿಯ ವಿಭಿನ್ನ ಸಂಸ್ಕೃತಿಯನ್ನು ಅಧ್ಯಯನದ ಪರಿಧಿಯಲ್ಲಿ ಅಧ್ಯಯನ ಕೈಗೊಳ್ಳಲು ಉತ್ಸುಕತೆಯಿಂದ ಅಲ್ಲಿ ಕಂಡುಕೊಂಡ ಪ್ರಮುಖ ಅಂಶಗಳನ್ನು ದಾಖಲೀಕರಿಸುವ ಕೆಲಸವನ್ನು ಮಾಡಲಾಗಿದೆ. ಹಾಗೆಯೇ ಈ ಜಿಲ್ಲೆಯ ಪುರಾತನ ಕಾಲದ ಐತಿಹಾಸಿಕ ಮಹತ್ವವನ್ನು ಕ್ರಿ.ಶ. ೩ನೇ ಶತಮಾನದಿಂದ ಕ್ರಮವಾಗಿ ಮೌರ್ಯರು, ಶಾತವಾಹನರು, ಕದಂಬರು, ಗಂಗರು, ಬಾದಾಮಿಚಾಲುಕ್ಯರು, ಕಲಚೂರ್ಯರು,

ರಾಷ್ಟ್ರಕೂಟರು, ಕಲ್ಯಾಣಚಾಲುಕ್ಯರು, ವಿಜಯನಗರ ಸಾಮ್ರಾಜ್ಯಗಳ ಹಿನ್ನಲೆಯಲ್ಲಿ ವಿವರಿಸಲಾಗಿದೆ. ಕ್ರಿ.ಶ.ಪೂರ್ವದ ನೆಲೆಗಳಾದ ಗಾದಿಗನೂರು, ದರೋಜಿ, ಕುಮತಿ, ಹಿರೇಕರೂರು, ಹಂಪಿ, ಸಂಗನಕಲ್ಲುಗಳನ್ನು ಕುರಿತು ವಿಶ್ಲೇಷಿಸಲಾಗಿದೆ.

ಎರಡನೆಯ ಅಧ್ಯಯದಲ್ಲಿ ಇತಿಹಾಸ ಗ್ರಹಿಕೆ(ನಿರ್ವಚನೆ)ಯನ್ನು ಮೂರು ಹಂತಗಳಲ್ಲಿ ಚರ್ಚಿಸಿದೆ. ಅವುಗಳು ಕ್ರಮವಾಗಿ ಓರಿಯಂಟಲಿಸ್ಟರು, ಮಾರ್ಕಿಸ್ಟರು ಮತ್ತು ಸಬಾಲ್ಟ್ರನಿಷ್ಟರು ಎಂದು ಗುರುತಿಸಿದ್ದೇನೆ. ಭಾರತೀಯರಿಗೆ ಇತಿಹಾಸದ ಪ್ರಜ್ಞೆಯಿಲ್ಲಾ ಎಂಬ ಪಾಶ್ಚಿಮಾತ್ಯರ ಅಭಿಪ್ರಾಯವನ್ನು ಹೋಗಲಾಡಿಸಲು, ನಮ್ಮದೇ ಆದ ಭಾರತೀಯರ ಇತಿಹಾಸ ಕಟ್ಟುವಿಕೆಯನ್ನು ವೇದಗಳಿಂದ ಹಿಡಿದು ಇಂದಿನ ಇತಿಹಾಸ ಪ್ರಾಧ್ಯಾಪಕರ ಇತಿಹಾಸ ಪಥ್ಯಗಳ ಕುರಿತು ವಿವೇಚಿಸಲು ಪ್ರಯತ್ನಿಸಲಾಗಿದೆ. ಹಾಗೆಯೇ ಭಾರತಕ್ಕೆ ಭೇಟಿ ನೀಡಿದ ವಿದೇಶಿಯರು ಇಲ್ಲಿನ ಚರಿತ್ರೆಯನ್ನು ಗುರುತಿಸಿದ ಬಗೆಯನ್ನು ಹಾಗೂ ಅವರ ಅಭಿಪ್ರಾಯವನ್ನು ಕುರಿತು ನಿರೂಪಿಸಲಾಗಿದೆ. ಒಟ್ಟಿನಲ್ಲಿ ಇತಿಹಾಸವನ್ನು ಪಾಶ್ಚಿಮಾತ್ಯರು ಮತ್ತು ಭಾರತೀಯರು ವಿಭಿನ್ನ ಬಗೆಯಲ್ಲಿ ಗ್ರಹಿಸಿರುವುದನ್ನು ಸಾಮ್ಯತೆ ಮತ್ತು ವೈಸಾಮ್ಯತೆಗಳಲ್ಲಿ ಸ್ಪಷ್ಟಪಡಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಪುರಾಣ, ಐತಿಹ್ಯ ಮತ್ತು ಶಾಸನಗಳ ಕುರಿತು ತಾತ್ವಿಕ ವಿಚಾರವನ್ನು ಅವುಗಳು ಈ ನೆಲೆದ ಮೇಲೆ ಹುಟ್ಟಿದ ಬಗೆ ಮತ್ತು ಜನರು ಅವುಗಳಿಗೆ ಕೊಡುವ ಮಹತ್ವ, ಅದರಂತೆ ವಿದ್ವಾಂಸರು ಅವುಗಳನ್ನು ಗ್ರಹಿಸುವ ಬಗೆಯನ್ನು ಕುರಿತು ವಿಶ್ಲೇಷಿಸಲಾಗಿದೆ. ತದನಂತರ ಅವುಗಳು ಚರಿತ್ರೆಯಲ್ಲಿ ಸೇರಿಕೊಂಡ ಬಗೆಯನ್ನು ಕುರಿತು ವಿವರಿಸಲಾಗಿದೆ. ಜೊತೆಗೆ ಬಿಡಿ ಬಿಡಿಯಾಗಿ ಇದ್ದಂತಹ ಅಂಶಗಳು ಚರಿತ್ರೆ ನಿರ್ಮಾಣಕಾಲದಲ್ಲಿ ಹೇಗೆ ಸಮ್ಮಿಳತಗೊಂಡಿವೆ ಎಂಬುದನ್ನು ಚರ್ಚಿಸಿ, ಇವುಗಳ ಮುಖೇನ ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಳ್ಳಬೇಕಾದರೆ ಯಾವ ಬಗೆಯ ಪೂರ್ವಪೀಡಿತ ಅಂಶಗಳು ಕಾರಣವಾಗಿವೆ ಎಂಬುದನ್ನು ಗುರುತಿಸಲಾಗಿದೆ. ಈ ಮೂರು ಪರಿಕಲ್ಪನೆಯಲ್ಲಿ ಪುರಾಣ ಮತ್ತು ಐತಿಹ್ಯಗಳು ಮೌಖಿಕ ಪರಂಪರೆಗೆ ಸಂಬಂದಿಸಿದರೆ ಶಾಸನವು ಲಿಖಿತ ಪರಂಪರೆಗೆ ಸಂಬಂದಿಸಿದ್ದು, ಆದಾಗ್ಯೂ ಈ ಮೂರು ಬಗೆಯ ಆಕರಗಳು ಸಾಂಸ್ಕೃತಿಕ ಚರಿತ್ರೆಯನ್ನು ಅರಿತುಕೊಳ್ಳಲು ಪರಸ್ಪರ ಹೋಲಿಕೆ ಹಾಗೂ ವ್ಯತ್ಯಾಸಗಳೊಂದಿಗೆ ಹೇಗೆ ಒಂದೇ ನೆಲೆಯಲ್ಲಿ ನಿಲ್ಲುತ್ತವೆ ಎನ್ನುವುದನ್ನು ಸ್ಪಷ್ಟಪಡಿಸಿದ್ದೇನೆ.

ನಾಲ್ಕನೆಯ ಅಧ್ಯಾಯವಾದ ಶಾಸನಗಳಲ್ಲಿ ಪೌರಾಣಿಕ ಅಂಶಗಳು ಯಾವ ಯಾವ ನೆಲೆಯಲ್ಲಿವೆ ಎನ್ನುವುದನ್ನು ಮೂರು ವಿಧಗಳಲ್ಲಿ ಗುರುತಿಸಲಾಗಿದೆ. ಒಂದು, ಶಾಸನಗಳಲ್ಲಿರುವ ವಂಶಗಳು, ಎರಡನೆಯದು ಶಾಸನಗಳಲ್ಲಿ ಪೌರಾಣಿಕವಾಗಿ ವರ್ಣಿತವಾಗಿರುವ ವ್ಯಕ್ತಿಯ ಅಥವಾ ಅರಸನ ಹೆಸರು ಹಾಗೂ ಶಾಸನವಿರುವ ಅಥವಾ ಶಾಸನದಲ್ಲಿರುವ ಸ್ಥಳ ಮತ್ತು

ಆ ಶಾಸನದಲ್ಲಿ ಕಂಡು ಬಂದಿರುವ ಪ್ರದೇಶವನ್ನು ಸ್ಥಳಸಂಬಂಧ ಪೌರಾಣಿಕ ಅಂಶಗಳು ಎನ್ನುವ ಉಪ ಶೀರ್ಷಿಕೆಯಡಿಯಲ್ಲಿ ಚರ್ಚಿಸಲಾಗಿದೆ. ಪುರಾಣ ಮತ್ತು ಐತಿಹ್ಯಗಳನ್ನು ಭಿನ್ನ ನೆಲೆಯಲ್ಲಿ ಗ್ರಹಿಸಬೇಕಾದ ಅಗತ್ಯವಿದೆ. ಇವುಗಳನ್ನು ಧಾರ್ಮಿಕ ನೆಲೆಯಲ್ಲಿ ಅರ್ಥೈಸಿಕೊಳ್ಳಲು ಕೆಲವರು ಯತ್ನಿಸಿದ್ದಾರೆ. ಆದರೆ ಸಾಂಸ್ಕೃತಿಕವಾಗಿ ಇವುಗಳನ್ನು ಪ್ರವೇಶಿಸುವುದು ಹೆಚ್ಚು ಅರ್ಥಪೂರ್ಣ. ಯಾಕೆಂದರೆ ಸಾಂಸ್ಕೃತಿಕ ಬದುಕಿನ ಸಂಘರ್ಷಗಳು, ರಾಜಿಗಳು, ಅನುಮಾನಗಳು, ಭಯಗಳು ಸಮ್ಮಿಶ್ರ ರೂಪದಲ್ಲಿ ಕಲೆತು ಇಲ್ಲಿ ರೂಪುಗೊಂಡಿವೆ. ಬಹುತೇಕ ಪುರಾಣ, ಐತಿಹ್ಯಗಳನ್ನು ಧರ್ಮದ ಹಿನ್ನಲೆಯಲ್ಲಿ ವ್ಯಾಖ್ಯಾನಿಸಿದ್ದರಿಂದ ಇದರ ಧಾರ್ಮಿಕ ಮುಖವೇ ಹೆಚ್ಚು ಮುನ್ನಲೆಗೆ ಬಂದಿದೆ. ಆದರೆ "ಪುರಾಣ ಕಥೆಗಳು ಒಂದು ಸಂಸ್ಕೃತಿಯ ಆದಿಮ ಸ್ಥಿತಿಯ ಪಳೆಯುಳಿಕೆಗಳು. ಜಗತ್ತಿನ ಸೃಷ್ಟಿ–ಲಯಕ್ಕೆ ಸಂಬಂಧಿಸಿದಂತೆ, ಪ್ರಕೃತಿಯಲ್ಲಿ ಕಂಡುಬರುವ ಸಾವು–ಮರುಹುಟ್ಟಿಗೆ ಸಂಬಂಧಿಸಿದಂತೆ ಪುರಾಣ ಕಥೆಗಳಿರುತ್ತವೆ. ಇತಿಹಾಸ ಪೂರ್ವಕಾಲದ ಸಾಮುದಾಯಿಕ ನೆನಪುಗಳು ಪುರಾಣ ಕಥೆಗಳಾಗಿ ಘನೀಭವಿಸಿವೆ. ಒಂದು ಪರಂಪರೆಯು ಒಪ್ಪಿಕೊಂಡು ಬಂದ ನಂಬಿಕೆ, ಮೌಲ್ಯ ಮತ್ತು ಸಾಮಾಜಿಕ ಸಂಬಂಧಗಳ ಮೂಲಪ್ರತಿ(Archetype) ಯನ್ನು ಅವುಗಳಲ್ಲಿ ಗುರುತಿಸಬಹುದು. ಪುರಾಣ ಕಥೆಗಳು ಪ್ರಜ್ಞಾಪೂರ್ವಕ ನೆಲೆಯಲ್ಲಿ ಕಾಲದಿಂದ ಕಾಲಕ್ಕೆ, ಧರ್ಮ ಸಾಹಿತ್ಯಗಳ ಮೂಲಕ ಪ್ರಸಾರ ಹೊಂದುತ್ತಾ ಹೋದಂತೆ ಅಪ್ರಜ್ಞಾಪೂರ್ವಕವಾಗಿಯೂ ಸಮುದಾಯದ ಧಾರ್ಮಿಕ ವಿಧಿ, ಆಚಾರಣೆ, ನಂಬಿಕೆ, ಸಾಮಾಜಿಕ ಸಂಬಂಧಗಳ ಮೂಲಕ ವ್ಯಕ್ತಿಯ ಅನುಭವದ ವಲಯವನ್ನು ಪ್ರವೇಶಿಸುತ್ತವೆ. ಈ ಎರಡೂ ನೆಲೆಯಲ್ಲಿ ವ್ಯಕ್ತಿತ್ವವೊಂದು ರೂಪುಗೊಳ್ಳುತ್ತದೆಯಾದುದರಿಂದ ಆಧುನಿಕ ವಿಚಾರವಾದಿಯೂ ಸಹ ಪರಂಪರೆಯ ಕೆಲವೊಂದು ನೆನಪು, ನಂಬಿಕೆ ಮತ್ತು ಸಾಮಾಜಿಕ ಸಂಬಂಧಗಳಿಗೆ ಸಿದ್ಧನಾಗಿರುತ್ತಾನೆ. ಹೀಗೆ ನಮ್ಮ ಅನುಭವದ ತಿರುಳೇ ಪುರಾಣ ಕಥೆಗಳಲ್ಲಿ ಸಾಂಕೇತಿಕವಾಗಿ ಮೂಡಿ ಬಂದಿರುತ್ತದೆಯಾದುದರಿಂದ ಅವು ನಮ್ಮ ಮನಸ್ಸಿನ ಮೇಲೆ ಮಾಡುವ ಪರಿಣಾಮ ತೀವ್ರವಾದುದು".[೨]ಇನ್ನೂ ಮುಂದುವರೆದು ಹೇಳಬೇಕಾದರೆ ಚಾರಿತ್ರಕ ಸಂಘರ್ಷದ ಹಲವು ಎಳೆಗಳು ಪುರಾಣಗಳಲ್ಲಿ ಸೇರಿಕೊಂಡಿವೆ. "ಪುರಾಣ ಸಂಸ್ಕೃತಿಯ ಭಾಗವಾಗಿ ತನ್ನೊಡಲೊಳಗೆ ಚರಿತ್ರೆಯನ್ನು ರೂಪಿಸುತ್ತಿರುತ್ತದೆ".[೩]ಬಳ್ಳಾರಿ ಪರಿಸರವನ್ನು ಕದಂಬರು, ಗಂಗರು, ಬದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಸಿಂದರು, ವಿಜಯನಗರದ ಅರಸರು, ಉಚ್ಚಂಗಿದುರ್ಗದ ಪಾಳೆಗಾರರು ಮುಂತಾದವರು ಆಳ್ವಿಕೆ ನಡೆಸಿದ್ದಾರೆ. ಎಲ್ಲಾ ಮನೆತನದವರು ತಮ್ಮ ವಂಶವನ್ನು ಹೇಳುವಾಗ ಪೌರಾಣಿಕ ವ್ಯಕ್ತಿಗಳಾದ ಇಂದ್ರ, ಚಂದ್ರ, ಸೂರ್ಯ ಮತ್ತು ರಾಮಾಯಣದ ವ್ಯಕ್ತಿಗಳೊಂದಿಗೆ ತಮ್ಮನ್ನು ಗುರುತಿಸಿಕೊಳ್ಳಲು ಪ್ರಯತ್ನಿಸಿರುವುದು ಶಾಸನಗಳ ಹಿನ್ನಲೆಯಲ್ಲಿ ಗುರುತಿಸುವ ಪ್ರಯತ್ನವನ್ನು ಮಾಡಲಾಗಿದೆ. ಹಾಗೆಯೇ ಅರಸರು ಮತ್ತು

ಸಾಮಂತ ಮನೆತನದವರು ತಮ್ಮ ನಾಮವನ್ನು ಹೇಳುವಾಗ ಪುರಾಣದ ಮೊರೆ ಹೋಗಿರುವುದನ್ನು ಹಾಗೂ ಒಂದು ಸ್ಥಳವನ್ನು ಕುರಿತು ಹೇಳುವಾಗ ಪೌರಾಣಿಕವಾಗಿ ವರ್ಣಿಸಿರುವುದನ್ನು ಗುರುತಿಸಲಾಗಿದೆ. ಒಟ್ಟಾರೆಯಾಗಿ ಈ ಅಧ್ಯಾಯದಲ್ಲಿ ಪೌರಾಣಿಕ ಅಂಶಗಳಿಗೂ ಮತ್ತು ಶಾಸನಗಳಿರುವ ಸಂಬಂಧ ಅವುಗಳ ಮೂಲಕ ಚರಿತ್ರೆಯ ಸೃಷ್ಟಿ, ಜನಸಾಮಾನ್ಯರ ಅಭಿಪ್ರಾಯ ಹೇಗಿತ್ತು ಎಂಬುದನ್ನು ಕಂಡುಕೊಳ್ಳಲು ಪ್ರಯತ್ನಿಸಲಾಗಿದೆ.

ಐದನೆಯ ಅಧ್ಯಾಯದಲ್ಲಿ ಪುರಾಣಗಳಿಗೆ ಪೂರಕವಾಗಿ ಐತಿಹ್ಯಗಳು ಯಾವ ರೀತಿ ಚರಿತ್ರೆ ನಿರ್ಮಿತಿಗೆ ಕೆಲಸ ಮಾಡಿವೆ ಎಂಬುದನ್ನು ನಿರೂಪಿಸಲಾಗಿದೆ. ಬಳ್ಳಾರಿ ನಗರದ ಬಗ್ಗೆ ಅನೇಕ ಕತೆಗಳಿವೆ. ಅಲ್ಲಿ 'ಬಲಹರಿ' ಎಂಬ ರಾಕ್ಷಸನಿದ್ದನೆಂತಲೂ ಅವನನ್ನು ದೇವಿ ಸಂಹಾರ ಮಾಡಿದ ಕಾರಣ ಅದು 'ಬಳರಿ' ಎಂದಾಯಿತಂತೆ. ಕರ್ನಾಟಕದ ಅನೇಕ ವಿದ್ವಾಂಸರ ಪ್ರಕಾರ 'ಬಳರಿ' ಎಂಬುದೇ ಕರ್ನಾಟಕದ ಪ್ರಾಚೀನ ಸ್ತ್ರೀದೇವತೆಗಳಲ್ಲಿ ಒಂದು ಪ್ರಮುಖ ದೇವತೆ. ಬಳರಿ>ಬಟರಿ>ಬಳ್ಳಾರಿ ಇರಬಹುದು. ಹಾಗೆಯೇ ಬಳ್ಳಾರಿ ಪ್ರದೇಶದಲ್ಲಿ ಕಂಡುಬರುವ ಕುಡಿತಿನಿ, ಪಾಪಿನಾಯಕನಹಳ್ಳಿ, ಹೊಸಪೇಟೆ, ಹಂಪಿ, ಅನೆಗೊಂದಿ, ಹೊಸೂರು, ಉಚ್ಚಂಗಿದುರ್ಗ, ಮೈಲಾರ, ಕೊಟ್ಟೂರು, ಗುಡೆಕೋಟೆ, ಹುಲಿಗಿ, ಹಡಗಲಿ ಮುಂತಾದವು ಐತಿಹ್ಯವಾಗಿ ಮತ್ತು ಐತಿಹಾಸಿಕವಾಗಿ ಪ್ರಮುಖವಾಗಿರುವಂತಹ ಕ್ಷೇತ್ರಗಳೇ. ಇವುಗಳಿಗೆ ಶಾಸನಗಳ ಉಲ್ಲೇಖ ಕೂಡ ದೊರೆತಿವೆ. ಇವುಗಳಿಗಿರುವ ಮೌಖಿಕ ಅಭಿಪ್ರಾಯವಾದ ಐತಿಹ್ಯ ಮತ್ತು ಲಿಖಿತ ರೂಪದಲ್ಲಿರುವ ಶಾಸನಗಳ ನಡುವಿನ ಸಂಬಂಧ ಚರಿತ್ರೆ ನಿರೂಪಣೆಗೆ ಹೇಗೆ ಮುಖಾಮುಖಿಯಾಗಿವೆ ಎಂಬುದನ್ನು ಆಯಾ ಪ್ರದೇಶಗಳಲ್ಲಿ ದೊರೆಯುವ ಶಾಸನಗಳು ಹಾಗೂ ಆಯಾ ಪ್ರದೇಶದ ಜನರಲ್ಲಿಯ ಐತಿಹ್ಯದ ತಿಳುವಳಿಕೆಯನ್ನು ಚರ್ಚೆಗೊಳಪಡಿಸಿ ವಿಶ್ಲೇಷಿಸಲಾಗಿದೆ.

**ಒಟ್ಟಾರೆಯಾಗಿ ಈ ಮಹಾಪ್ರಬಂಧದಲ್ಲಿ ಚರ್ಚಿತವಾಗಿರುವ ಅಂಶಗಳು ಮತ್ತು ಅಧ್ಯಯನದಲ್ಲಿ ಕಂಡುಕೊಂಡ ಫಲಿತಗಳು ಈ ಕೆಳಗಿನಂತಿವೆ.**

* ಚರಿತ್ರೆ ರಚನಾಕಾರರು ಲಿಖಿತ ದಾಖಲೆಗಳಿಗೆ ಮಹತ್ವ ನೀಡಿದ್ದಾರೆ ಎನ್ನುವ ಮಾತು ಜನಪ್ರಿಯುವಾಗಿದೆ. ಆದರೆ ಲಿಖಿತ ದಾಖಲೆಗಳಲ್ಲಿ ರಾಜಪರಿವಾರ ಮತ್ತು ಪುರೋಹಿತಶಾಹಿಯನ್ನು ಹೊರತುಪಡಿಸಿದ ಅನೇಕ ಸಂಗತಿಗಳನ್ನು ಅಲಕ್ಷಿಸಲಾಗಿದೆ ಎನ್ನುವುದನ್ನು ಒತ್ತಿಹೇಳಬೇಕಾಗಿದೆ. ಹೀಗೆ ನಿರ್ಲಕ್ಷಿಸಲ್ಪಟ್ಟ ಸಂಗತಿಗಳ ಹಿನ್ನಲೆಯಲ್ಲಿ ಜನಸಾಮಾನ್ಯರ ಚರಿತ್ರೆ ನಿರ್ಮಾಣವಾಗಬೇಕಾಗಿದೆ. ಈ ಹಿನ್ನಲೆಯಲ್ಲಿ ಪುರಾಣ ಮತ್ತು ಐತಿಹ್ಯವು ಚರಿತ್ರೆ ರಚನೆಯಲ್ಲಿ ಇವುಗಳ ಮಹತ್ವ ಏನು ಎಂಬುದನ್ನು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

* ಅಲಕ್ಷಿತ ಅಥವಾ ನಂಬಿಕೆಗೆ ಅನರ್ಹವಾದವುಗಳೆಂದು ಪರಿಗಣಿಸಿದ ಅಂಶಗಳಾದ ಪುರಾಣ ಮತ್ತುಐತಿಹ್ಯವು ಸಾಂಸ್ಕೃತಿಕ ಚರಿತ್ರೆ ನಿರ್ಮಿತಿಗೆ ಎಷ್ಟು ಪ್ರಾಮುಖ್ಯತೆ ಪಡೆದುಕೊಂಡಿವೆ ಎನ್ನುವುದನ್ನು ಹೇಳುವಲ್ಲಿ ಈ ಆಧ್ಯಯನದ ಮಹತ್ವವಿದೆ.

* ಪುರಾಣ ಕೇವಲ ಧಾರ್ಮಿಕತೆಗೆ ಸೀಮಿತವಾಗಿಲ್ಲ, ಅದು ಸಾಂಸ್ಕೃತಿಕ ಚರಿತ್ರೆ ನಿರ್ಮಿತಿಗೆ ಕಾರಣವಾಗಿದೆ ಎನ್ನುವುದನ್ನು ಈ ಅಧ್ಯಯನವು ದೃಢಪಡಿಸುತ್ತದೆ.

* ಮೌಖಿಕ ಪರಂಪರೆಗೆ ಸೇರಿರುವಂತಹ ಪುರಾಣ ಐತಿಹ್ಯಗಳು ಶಾಸನಗಳಲ್ಲಿ ಕಂಡುಬಂದಿರುವ ಬಗೆಯನ್ನು ವಿಶ್ಲೇಷಿಸಲಾಗಿದೆ.

* ಸ್ಥಳೀಯ ಚರಿತ್ರೆ, ಸಮುದಾಯ ಚರಿತ್ರೆಯನ್ನು ಕಟ್ಟುವಲ್ಲಿ, ವ್ಯಕ್ತಿಗತವಾದ ಚರಿತ್ರೆ ನಿರ್ಮಾಣದಲ್ಲಿ ಪುರಾಣಗಳು ಯಾವ ರೀತಿ ಕೆಲಸ ಮಾಡಿವೆ ಎನ್ನುವುದನ್ನು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

* ತಳಸಮುದಾಯಗಳ ಚರಿತ್ರೆಗೆ ಬೇಕಾದಂತಹ ಅಂಶಗಳನ್ನು ಕ್ರೃಢಿಕರಿಸಲಾಗಿದೆ.

**ಮುಂದಿನ ಅಧ್ಯಯನಕ್ಕೆ ಇರುವ ಸಾಧ್ಯತೆಗಳು.**

ಈ ಹಿನ್ನಲೆಯಲ್ಲಿ ಬೇರೆ ಬೇರೆ ಜಿಲ್ಲೆಯನ್ನು ಆಧರಿಸಿ ಅಧ್ಯಯನಕ್ಕೆ ಒಳಪಡಿಸುವ ಅಗತ್ಯವಿದೆ. ಹಾಗೆಯೇ ಬೇರೆ ಬೇರೆ ಕಡೆಗಳಲ್ಲಿ ದೊರೆಯುವ ಪುರಾಣ ಮತ್ತು ಐತಿಹ್ಯಗಳನ್ನು ಸಂಗ್ರಹಿಸಿ ತೌಲನಿಕ ಅಧ್ಯಯನಕ್ಕೊಳಪಡಿಸಬಹುದು. ಮತ್ತು ಬಳ್ಳಾರಿ ಪರಿಸರದಲ್ಲಿರುವ ಪ್ರಸಿದ್ದವಾಗಿರುವ ಪ್ರಸಿದ್ಧ ಸಂಸ್ಥಾನ ಮತ್ತು ಸಾಮ್ರಾಜ್ಯಗಳನ್ನು ಪ್ರತ್ಯೇಕ ಅಧ್ಯಯನಕ್ಕೆ ಒಳಪಡಿಸಬಹುದು. ವಿವಿಧ ಅಧ್ಯಯನಗಳ ಮೂಲಕ ಬಳ್ಳಾರಿ ಪರಿಸರದ ಅನನ್ಯತೆಯನ್ನು ಕರಾರುಹೊಕ್ಕಾಗಿ ಹೇಳಬಹುದಾಗಿದೆ.

### ಅಡಿಟಿಪ್ಪಣಿಗಳು

೧. ವಿಕ್ರಮ ವಿಸಾಜಿ., ನಾದಗಳು ನುಡಿಯಾಗಲೇ, ಪುಟ. ೩೭.

೨. ಮರುಳಸಿದ್ದಪ್ಪ ಕೆ., ಆಧುನಿಕ ಕನ್ನಡ ನಾಟಕ, ಪುಟ. ೧೨೦.

೩. ರಾಮಚಂದ್ರಪ್ಪ ಬರಗೂರು., ಕನ್ನಡ ಸಾಹಿತ್ಯದಲ್ಲಿ ಪುರಾಣ ಮತ್ತು ಚರಿತ್ರೆ, ಪುಟ. ೬೯



ವಿರೂಪಾಕ್ಷ ದೇವಾಲಯದ ಗೋಪುರ, ಹಂಪಿ



ಜಡೆಯ ಶಂಕರ ದಿಡ್ಡಿ ಶಾಸನ, ಹಂಪಿ



ಹೇಮಕೂಟ ಪರ್ವತ ಶಾಸನ, ಹಂಪಿ



ಮೂಲ ವಿರೂಪಾಕ್ಷ ಹೇಮಕೂಟ ಹಂಪಿ



ಶ್ರೀ ಕೃಷ್ಣ ದೇವರಾಯನ ಶಾಸನ ವಿರೂಪಾಕ್ಷ ದೇವಾಲಯ, ಹಂಪಿ



ತಳವಾರಪ್ಪನ ಕಲ್ಲು, ಹಂಪಿ



ಕನಕಗಿರಿ ಗೋಪುರ ಶಾಸನ, ಹಂಪಿ



ವಿರೂಪಾಕ್ಷ ದೇವಾಲಯದ ರಂಗಮಂಟಪ, ಹಂಪಿ



ಬಿಷ್ಟಪ್ಪಯ್ಯನ ಗೋಪುರ ಪಕ್ಕದ ಶಾಸನ, ಹಂಪಿ



ಲಕ್ಷ್ಮೀಧರಮಾತ್ಯನ ಶಾಸನ, ಹಂಪಿ



ಬಯಕಾರ ರಾಮಪ್ಪಯ್ಯನ ಶಾಸನ, ಕ.ವಿ.ವಿ. ಹಂಪಿ



ನೀಲಮ್ಮನ ಮಠ, ಕುರುಗೋಡು



ಇಮ್ಮಡಿ ರಾಚಮಲ್ಲನ ಶಾಸನ, ಕುರುಗೋಡು



ಕುರುಗೋಡು ಸಿಂಧರ ಶಾಸನ



ಚೆಂಚರ ಮಲ್ಲಿಕಾರ್ಜುನ ಉಲ್ಲೇಖಿತ ಶಾಸನ, ಹಂಪಿ



ಉದ್ದಾನ ವೀರಭದ್ರ, ಹಂಪಿ



ಅಪ್ರಕಟಿತ ಶಾಸನ, ಕಮಲಾಪುರ



ಶಾಸನೋಕ್ತ ಚಾಮುಂಡೇಶ್ವರಿ ಲಿಂಗ, ಹಂಪಿ



ಕಂಪಿಲರಾಯನ ಕೋಟೆ, ಕಂಪ್ಲಿ



ಚಂಡಿಕೇಶ್ವರ ದೇವಾಲಯದ ಶಾಸನ, ಹಂಪಿ



ದೇವಿಘಾಟ್ ಶಾಸನ, ಗಂಗಾವತಿ



ಕುಮಾರಸ್ವಾಮಿ ದೇವಾಲಯದ ಶಾಸನ, ಕುಡುತಿನಿ



ಮಾತಂಗ ಪರ್ವತ, ಹಂಪಿ



ಕೋಟಿಲಿಂಗ, ಹಂಪಿ



ಶತಲಿಂಗ ಸಮೂಹ, ಹಂಪಿ

ಉಚ್ಚಂಗಿ ದೇವಸ್ಥಾನ, ಉಚ್ಚಂಗಿದುರ್ಗ



ಸಾಸಿವೆಕಾಳು ಗಣಪತಿ, ಹಂಪಿ





ಬಡವಿಲಿಂಗ, ಹಂಪಿ



ಉಚ್ಚಂಗಿದುರ್ಗ ಶಾಸನ, ಉಚ್ಚಂಗಿ



ಪಟ್ಟಣದ ಎಲ್ಲಮ್ಮ ದೇವಸ್ಥಾನ, ಹಂಪಿ

**ಸಂಕೇತಾಕ್ಷರ ಸೂಚಿ.**

೦೧. ಎಸ್.ಐ.ಐ : ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಸನ್ಸ.

೦೨. ಇ.ಸಿ : ಎಪಿಗ್ರಫಿಯಾ ಕರ್ನಾಟಿಕ.

೦೩. ಇ.ಐ : ಎಪಿಗ್ರಫಿಯಾ ಇಂಡಿಯಾ.

೦೪. ಕೆ.ಐ : ಕರ್ನಾಟಕ ಇನ್‌ಸ್ಕ್ರಿಪ್ಸನ್ಸ.

೦೫. ಬ.ಜಿ.ಶಾ.ಸಂ : ಬಳ್ಳಾರಿ ಜಿಲ್ಲಾ ಶಾಸನ ಸಂಪುಟ.

೦೬. ಕೊ.ಜಿ.ಶಾ.ಸಂ : ಕೊಪ್ಪಳ ಜಿಲ್ಲಾ ಶಾಸನ ಸಂಪುಟ.

೦೭. ಹಂ.ಶಾ.ಸಂ : ಹಂಪಿ ಶಾಸನ ಸಂಪುಟ.

೦೮. ಕ.ಸಾ.ಪ.ಪ : ಕರ್ನಾಟಕ ಸಾಹಿತ್ಯ ಪರಿಷತ್ ಪತ್ರಿಕೆ.

**ಗ್ರಂಥಋಣ**

೦೧. ಇತಿಹಾಸ ದರ್ಶನ ಸಂಪುಟಗಳು., ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು.

೦೨. ಕನ್ನಡ-ಕನ್ನಡ ನಿಘಂಟುಗಳು., ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೦೩. ಕನ್ನಡ ವಿಶ್ವವಿದ್ಯಾಲಯದ ಶಾಸನ ಶಾಸ್ತ್ರ ವಿಭಾಗದ ಶಾಸನ ಸಂಚಿಕೆಗಳು.

೦೪. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟಗಳು.

೦೫. ಕವಿಚರಿತೆಯ ಸಂಪುಟಗಳು.

೦೬. ಚರಿತ್ರೆ ಸಂಪುಟಗಳು., ಡಾ. ಬಿ.ಷೇಕ್ ಆಲಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೦೭. ಚರಿತ್ರೆ ಸಂಪುಟ., ಪ್ರಧಾನ ಸಂಪಾದಕರು, ಡಾ. ವಿಜಯ್ ಪೂಣಚ್ಚ ತಬಂಡ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೦೮. ಮಾರ್ಗ ಸಂಪುಟಗಳು., ಡಾ. ಎಂ.ಎಂ.ಕಲಬುರ್ಗಿ.

೦೯. ವಿಜಯನಗರ ಅಧ್ಯಯನ ಸಂಪುಟಗಳು ೧ ರಿಂದ ೯.

೧೦. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆಯ ಸಂಪುಟಗಳು., ಪ್ರಧಾನ ಸಂಪಾದಕರು ಡಾ. ಜಿ.ಎಸ್.ಶಿವರುದ್ರಪ್ಪ, ಬೆಂಗಳೂರು.

೧೧. ಸೌತ್ ಇಂಡಿಯನ್ ಇನ್‌ಸ್ಕ್ರಪ್ಸನ್ಸ.

## ಆಕರಗ್ರಂಥಗಳು


೧. ಅರ್ಪಣ ಕೂ.ಸ. ದೇಗುಲ ವಾಸ್ತುಶಿಲ್ಪ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೧೯೯೯.

೨. ಅಣ್ಣಿಗೇರಿ ಎ.ಎಂ.ಮತ್ತು ಮೇವುಂಡಿ ಮಲ್ಲಾರಿ, ಶಾಸನ ಸಾಹಿತ್ಯ ಸಂಚಯ, ಕನ್ನಡ ಸಂಶೋಧನ ಸಂಸ್ಥೆ, ಧಾರವಾಡ ೧೯೬೧.

೩. ಅನಂತ ರಾಮರಾವ್ ಕೆ., (ಸಂ), ಸುವರ್ಣ ಕರ್ನಾಟಕ ದರ್ಶನ (೫೦ ಸಂವತ್ಸರಗಳು), ವಿದ್ಯಾ ಪಬ್ಲಿಷಿಂಗ್ ಹೌಸ್, ಮಂಗಳೂರು ೨೦೦೬.

೪. ಅರ್ಪಣ ಎಸ್., ದೇವಾಲಯಗಳ ವಾಸ್ತುಶಿಲ್ಪ ಪರಿಚಯ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ ೧೯೯೯.

೫. ಅಂಬಳಿಕೆ ಹಿರಿಯಣ್ಣ., ಸೈದ್ಧಾಂತಿಕ ಜಾನಪದ, ಪ್ರಜ್ವಲ ಪ್ರಕಾಶನ, ಮೈಸೂರು ೧೯೯೨.

೬. ಕೋಸಂಬಿ ಡಿ.ಡಿ., ವೇಣುಗೋಪಾಲ ಟಿ.ಎಸ್, ಶೈಲಜಾ (ಅನು) ಪುರಾಣ ಮತ್ತು ವಾಸ್ತವ, ಚೇತನ ಪ್ರಕಾಶನ, ಶಿರಸಿ, ಉತ್ತರ ಕನ್ನಡ ೨೦೦೮.

೭. ಕೃಷ್ಣಮೂರ್ತಿ ಅಗ್ರಹಾರ., ಸಂಸ್ಕೃತಿ ಕಥನ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು ೨೦೦೨.

೮. ಖಂಡೋಬಾ ಪಿ.ಕೆ., ಜಾನಪದ ಮುನ್ನೋಟ, ಸಂಗೀತ ಪಬ್ಲಿಕೇಷನ್ಸ, ಗುಲಬರ್ಗಾ ೧೯೯೩.

೯. ಕಪಟರಾಳ ಕೃಷ್ಣರಾಯರು, ಕರ್ನಾಟಕ ಲಾಕುಳ ಶೈವರು, ಕರ್ನಾಟಕ ಇತಿಹಾಸ ಅಕಾಡೆಮಿ ಸಂಸ್ಥೆ, ಧಾರವಾಡ ೧೯೫೫.

೧೦. ಕುಮಾರಸ್ವಾಮಿ ಕೆ.ಎಸ್, ಪ್ರಾಚೀನ ಕರ್ನಾಟಕದಲ್ಲಿ ಶಿಲ್ಪಾ ಚಾರಿಯರು, ಕರ್ನಾಟಕ ಸಾಹಿತ್ಯ ಪರಿಷತ್, ಬೆಂಗಳೂರು ೧೯೯೬.

೧೧. ಕೊಪ್ಪ ಎಸ್.ಕೆ, ತರ್ದವಾಡಿ ನಾಡು ಒಂದು ಅಧ್ಯಯನ(ಶಾಸನಗಳ ಹಿನ್ನಲೆಯಲ್ಲಿ), ಪ್ರತಿಭಾ ಪ್ರಕಾಶನ, ಇಂಡಿ ೧೯೯೦.

೧೨. ಕಲಬುರ್ಗಿ ಎಂ.ಎಂ., (ಸಂ), ಪ್ರಾಚೀನ ಕರ್ನಾಟಕದ ಆಡಳಿತ ವಿಭಾಗಗಳು, ಭಾಗ. ೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೧೯೯೯.

೧೩. ಕಲಬುರ್ಗಿ ಎಂ.ಎಂ., (ಸಂ), ಮಹಾನಾಡು ಪ್ರಭುಗಳು, ನೊಳಂಬ ವೀರಶೈವ ಸಂಘ, ಬೆಂಗಳೂರು ೧೯೯೫.

೧೪. ಕೃಷ್ಣರಾವ್ ಎಂ.ವಿ. ಮತ್ತು ಕೇಶವ ಭಟ್ಟ ಎಂ., ಕರ್ನಾಟಕ ಇತಿಹಾಸ ದರ್ಶನ, ಕರ್ನಾಟಕ ಸಹಕಾರಿ ಪ್ರಕಾಶನ ಮಂದಿರ, ಬೆಂಗಳೂರು ೧೯೭೦.

೧೫. ಕೃಷ್ಣಯ್ಯ ಎಂ.ಎಚ್. ಮತ್ತು ದೇವರ ಕೊಂಡಾರೆಡ್ಡಿ (ಸಂ), ಬೆಂಗಳೂರು ಕೆಂಪೇಗೌಡ ವಂಶಸ್ಥರು, ವಿವೇಕನಂದ ಕಾಲೇಜ್, ಬೆಂಗಳೂರು.

೧೬. ಕನ್ನಡ ವಿಷಯ ವಿಶ್ವಕೊಶ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ ಮೈಸೂರು.

೧೭. ಕೊಟ್ರಯ್ಯ ಸಿ.ಟಿ.ಯಂ., ಹಂಪೆಯ ವೀರಶೈವ ಮಠಗಳು ಮತ್ತು ಸಾಹಿತ್ಯ ಪರಂಪರೆ,

೧೮. ಕಲಬುರ್ಗಿ ಎಂ.ಎಂ(ಸಂ)., ಕರ್ನಾಟಕ ಕೈಫಿಯತ್ತುಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ ೧೯೯೪.

೧೯. ಕುಶಾಲಪ್ಪ ಗೌಡ ಕೆ(ಅನುವಾದ)., ಗಂಗಾದೇವಿಯ ಮಧುರ ವಿಜಯಂ ಅಥವಾ ವೀರಕಂಪಣರಾಯ ಚರಿತಂ, ಜಯಗೌರಿ ಪ್ರಕಾಶನ, ಪೆರಾಜೆ.

೨೦. ಕುಲಕರ್ಣಿ ನಾ.ರಂ(ಅನುವಾದ)., ಯಜ್ಞವಲ್ಕ ಸ್ಮೃತಿ, ಧಾರವಾಡ ೧೯೮೦.

೨೧. ಕೃಷ್ಣ ಭಟ್ ಕೆ(ಅನುವಾದ)., ಕೌಟಿಲ್ಯನ ಅರ್ಥಶಾಸ್ತ್ರ, ಸಮಾಜ ಮಸ್ತಕಾಲಯ, ಧಾರವಾಡ ೧೯೭೨.

೨೨. ಕೃಷ್ಣಮೂರ್ತಿ ಪಿ.ವಿ. ಮತ್ತು ಕೆ. ವಸಂತ ಲಕ್ಷ್ಮಿ(ಸಂ), ಸೂರ್ಯಕೀರ್ತಿ, ಡಾ. ಸೂರ್ಯನಾಥ ಕಾಮತ್ ಅಭಿನಂದನಾ ಸಮಿತಿ, ಬೆಂಗಳೂರು ೨೦೦೦ ಶರಣ ಸುವಾಸಿನಿ ಬಳಗ, ಹೊಸಪೇಟೆ ೧೯೯೭.

೨೩. ಕಲಬುರ್ಗಿ ಎಂ.ಎಂ., ಸಮಾಧಿ ಬಲಿದಾನ ವೀರಮರಣ ಸ್ಮಾರಕಗಳು, ಐ.ಬಿ.ಎಚ್ ಪ್ರಕಾಶನ, ಬೆಂಗಳೂರು ೧೯೮೦.

೨೪. ಕಲ್ಗುಡಿ ಬಸವರಾಜು., ಮಹಾಸತಿ ಆಚರಣೆ: ಒಂದು ಅಧ್ಯಯನ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು ೧೯೯೫.

೨೫. ಕೃಷ್ಣಮೂರ್ತಿ ಚೇಕೂರು., ಹಂಪಿಯ ಇತಿಹಾಸದ ಕಥೆಗಳು, ೨೪ ನೇ ಅಖಿಲ ಕರ್ನಾಟಕ ಮಕ್ಕಳ ಸಮ್ಮೇಳನ, ಬಳ್ಳಾರಿ ೧೯೭೨.

೨೬. ಕೃಷ್ಣಕುಮಾರ ಸಿ.ಪಿ., ಶಾಸನಶಾಸ್ತ್ರ ಪ್ರವೇಶ, ಮೈಸೂರು ವಿಶ್ವವಿದ್ಯಾಲಯ, ಮೈಸೂರು ೧೯೯೩.

೨೭. ಗೋಪಾಲ ಬಾ.ರ(ಡಾ)., ಕರ್ನಾಟಕದ ಇತಿಹಾಸ, ಮೈಸೂರು ೧೯೮೬.

೨೮. ಗಿರಿಜಾ ಟಿ., ದಾವಣಗೆರೆ: ಇದು ನಮ್ಮ ಜಿಲ್ಲೆ, ವಿಹಾರಿಕಾ ಪ್ರಕಾಶನ ದಾವಣಗೆರೆ ೨೦೦೧.

೨೯. ಗೋಪಾಲ ಬಾ.ರ(ಡಾ), ಕರ್ನಾಟಕದ ಕಲೆಗಳು, ಸಂ.೪ ವಾಸ್ತು, ಬೆಂಗಳೂರು ೧೯೯೩.

೩೦. ಗಣೇಶ ಕೆ.ಆರ್., ಆಂಧ್ರ ಪ್ರದೇಶದ ಕನ್ನಡ ಶಾಸನಗಳು: ಒಂದು ಅಧ್ಯಯನ. ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ೧೯೯೬.

೩೧. ಗೋಪಾಲ ಕೃಷ್ಣ ವಿ., ಸ್ಥಳನಾಮ ಅಧ್ಯಯನಗಳು, ವಿದ್ಯಾಗಿರಿ ಪ್ರಕಾಶನ, ದಾದಿನಾಯಕನ ಪಾಳ್ಯ, ಕೋಲಾರ ಜಿಲ್ಲೆ ೧೯೮೭.

೩೨. ಗೋಪಾಲರಾವ್ ಎಚ್.ಎಸ್., ಶಾಸನ ಸಂಕಲನ, ಅಳಿಲು ಸೇವಾಸಂಸ್ಥೆ, ಬೆಂಗಳೂರು ೨೦೦೧.

೩೩. ಗೋಪಾಲರಾವ್ ಎಚ್.ಎಸ್., ಶಾಸನಗಳ ಹಿನ್ನಲೆಯಲ್ಲಿ ಕಲ್ಯಾಣಿ ಚಾಲುಕ್ಯರ ದೇವಾಲಯಗಳು: ಒಂದು ಸಾಂಸ್ಕೃತಿಕ ಅಧ್ಯಯನ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇನಾಲಯ, ಮೈಸೂರು ೧೯೯೩.

೩೪. ಗೋಪಾಲರಾವ್ ಎಚ್.ಎಸ್. ಮತ್ತು ಅಬ್ದುಲ್ ಬಸೀರ್ ಜಿ.(ಸಂ) ಕನಕ ಸಿರಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ೧೯೯೯.

೩೫. ಗೋಪಾಲರಾವ್ ಎಚ್.ಎಸ್., (ಸಂ) ನಾಗಾಭಿನಂದನ (ಎಂ.ಜಿ.ನಾಗರಾಜ ಅಭಿನಂದನ ಗ್ರಂಥ), ಬೆಂಗಳೂರು ೧೯೯೪.

೩೬. ಗೋಪಾಲರಾವ್ ಎಚ್.ಎಸ್., ನಮ್ಮನಾಡು ಕರ್ನಾಟಕ, ನವ ಕರ್ನಾಟಕ ಪ್ರಕಾಶನ, ಬೆಂಗಳೂರು ೨೦೦೭.

೩೭. ಗೋವಿಂದ ರಾಜು, ಚೆನ್ನಾದೇವಿ ಅಗ್ರಹಾರ ಒಂದು ಜನಪದ ಅಧ್ಯಯನ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು ೧೯೯೩.

೩೮. ಗುರುರಾಜ ಭಟ್ ಪಿ(ಡಾ), ಸ್ಥಳಪುರಾಣ, ಹೊಸೂರು ೧೯೭೬.

೩೯. ಗದ್ದಗಿಮಠ ಬಿ.ಎಸ್., ಕನ್ನಡ ಜಾನಪದ ಗೀತೆಗಳು, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ೧೯೬೯.

೪೦. ಗೋಪಾಲರಾವ್ ಎಚ್.ಎಸ್., ಇತಿಹಾಸ ಅಧ್ಯಯನ ಅಂದು:ಇಂದು, ನವ ಕರ್ನಾಟಕ ಪ್ರಕಾಶನ, ಎಂಬಿಸಿ ಸೆಂಟರ್, ಬೆಂಗಳೂರು ೧೯೯೭.

೪೧. ಗುರುರಾಜ ರಾವ್ ಬಿ.ಕೆ., ಕರ್ನಾಟಕದ ಶಿಲಾಯುಗ ಸಂಸ್ಕೃತಿಗಳು, ಮೈಸೂರು ೧೯೭೦.

೪೨. ಗೋಪಾಲ ಬಿ.ಆರ್., ಕರ್ನಾಟಕದಲ್ಲಿ ನವಶಿಲಾಯುಗ, ಧಾರವಾಡ ೧೯೭೧.

೪೩. ಚೆನ್ನಕ್ಕ ಪಾವಟೆ, ಶಾಸನಗಳಲ್ಲಿ ಸ್ತ್ರೀ ಸಮಾಜ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ೧೯೯೦.

೪೪. ಚೆನ್ನಬಸವ ಹಿರೇಮಠ, ಕುರುಗೋಡಿನ ಸಿಂದರು ಒಂದು ಅಧ್ಯಯನ, ಕೊಪ್ಪಳ ಸಂಗಣ್ಣನವರು, ಅಡಿ ಸಂಸ್ಕೃತಿ ಪ್ರತಿಷ್ಠಾನ, ಕೊಪ್ಪಳ ೧೯೯೫.

೪೫. ಚಿದಾನಂದಮೂರ್ತಿ ಎಂ., ಸಂಶೋಧನ ತರಂಗ, ಸಂಪುಟ ೨, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು ೧೯೭೯.

೪೬. ಚಿದಾನಂದಮೂರ್ತಿ ಎಂ., ಮಾಸ್ತಿಕಲ್ಲು, ವೀರಗಲ್ಲು, ಕನ್ನಡ ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು ೧೯೮೪.

೪೭. ಚಿದಾನಂದ ಮೂರ್ತಿ ಎಂ(ಡಾ)., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಮೈಸೂರು ೧೯೬೬.

೪೮. ಚೆನ್ನಕ್ಕ ಪಾವಟೆ., ರಾಷ್ಟ್ರಕೂಟ ಸಾಮಂತ ಚಲ್ಲಕೇತನರು.

೪೯. ಚನ್ನಕ್ಕ ಎಲಿಗಾರ., ಶಾಸನಗಳಲ್ಲಿ ಕರ್ನಾಟಕದ ಸಮಾಜ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ ೧೯೯೦.

೫೦. ಚನ್ನಕ್ಕ ಪಾವಟೆ., ಹಾನಗಲ್ಲ ಕದಂಬರು, ಚನ್ನಗಂಗಾ ಪ್ರಕಾಶನ, ಧಾರವಾಡ ೧೯೯೩.

೫೧. ಚನ್ನಬಸವ ಹೀರೆಮಠ., ಎಡೆದೊರೆ ನಾಡು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೦.

೫೨. ಚಂದ್ರಶೇಖರಯ್ಯ ಬಿ.ಎಂ., ಕರ್ನಾಟಕದ ಸಾಂಸ್ಕೃತಿಕ ಇತಿಹಾಸ ಪರಂಪರೆ, ಸಿ.ವಿ.ಜಿ, ಪಬ್ಲಿಕೇಷನ್ಸ, ಬೆಂಗಳೂರು ೨೦೦೫.

೫೩. ಚಿದಾನಂದಾ ಮೂರ್ತಿ ಎಂ., ಹೊಸತು ಹೊಸತು, ಹೇಮಂತ ಸಾಹಿತ್ಯ ಪ್ರಕಾಶನ, ಬೆಂಗಳೂರು ೨೦೦೭.

೫೪. ಚಿದಾನಂದಾ ಮೂರ್ತಿ ಎಂ., ಬೃಹತ್ ಕರ್ನಾಟಕ: ಭಾಷಿಕ ಸಾಂಸ್ಕೃತಿಕ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ೨೦೦೬.

೫೫. ಚಿದಾನಂದಾ ಮೂರ್ತಿ ಎಂ., ವಾಗಾರ್ಥ, ಬಾಸ್ಕೋ ಪ್ರಕಾಶನ, ಬೆಂಗಳೂರು ೧೯೮೧.

೫೬. ಚಿದಾನಂದಾ ಮೂರ್ತಿ ಎಂ., ಕರ್ನಾಟಕ ಸಂಸ್ಕೃತಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ೧೯೯೭.

೫೭. ಚೆನ್ನಸ್ವಾಮಿ ಸೋಸಲೆ, ಕರ್ನಾಟಕ ರಾಜಕೀಯ ಚರಿತ್ರೆ ಮತ್ತು ಸಾಹಿತ್ಯ, ಸಿ.ವಿ.ಜಿ ಪಬ್ಲಿಕೇಷನ್ಸ್, ಬೆಂಗಳೂರು ೨೦೦೬.

೫೮. ಚೆನ್ನಸ್ವಾಮಿ ಸೋಸಲೆ., ಸಾಮ್ರಾಜ್ಯ ಮತ್ತು ಸಂಸ್ಥಾನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೪.

೫೯. ಚಿದಾನಂದಮೂರ್ತಿ ಎಂ., ಜನ-ಜನಪದ-ಜಾನಪದ, ಸ್ವಪ್ನ ಬುಕ್ ಹೌಸ್, ಬೆಂಗಳೂರು ೨೦೦೩.

೬೦. ಚೆನ್ನಬಸಪ್ಪ ಎಸ್. ಪಾಟೀಲ(ಸಂ)., ಕರ್ನಾಟಕ ಕೋಟೆಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ ೧೯೯೯.

೬೧. ಚೆನ್ನಬಸಪ್ಪ ಎಸ್. ಪಾಟೀಲ(ಸಂ)., ಬಳ್ಳಾರಿ ಜಿಲ್ಲೆಯ ಶಾಸನಗಳು, ಭಾಗ ೨, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು ೧೯೯೭.

೬೨. ಚೆನ್ನಬಸವೇಶ್ವರ., ಬಳ್ಳಾರಿ ಜಿಲ್ಲಾ ದರ್ಶನ, ಐ.ಬಿ.ಎಚ್ ಪ್ರಕಾಶನ, ಬೆಂಗಳೂರು ೧೯೭೮.

೬೩. ಚಂದ್ರಶೇಖರಯ್ಯ., ಕೂಡ್ಲಿಗಿ ತಾಲೂಕು ದರ್ಶನ, ಐ.ಬಿ.ಎಚ್ ಪ್ರಕಾಶನ, ಬೆಂಗಳೂರು ೧೯೮೭.

೬೪. ಚನ್ನಬಸಪ್ಪ ಎಸ್. ಪಾಟೀಲ., ಶಾಸನಗಳಲ್ಲಿ ಕಂಡಂತೆ ವಿಜಯನಗರ ಪಟ್ಟಣದ ನೀರಾವರಿ ವ್ಯವಸ್ಥೆ, ವಿಜಯನಗರ ಅಧ್ಯಯನ, ಸಂ ೧, ೧೯೯೫.

೬೫. ಜವರೇಗೌಡ ದೇ., ಜಾನಪದ ಅಧ್ಯಯನ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು ೨೦೦೧.

೬೬. ಜೀ.ಶಂ.ಪ ಮತ್ತು ವಿಲಿಯಂ ಮಾಡ್ತ (ಸಂ)., ಕರ್ನಾಟಕ ಜಾನಪದ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು ೧೯೮೯.

೬೭. ಜೋಶಿ ಶಂ.ಬಾ., ಕರ್ನಾಟಕ ಸಂಸ್ಕೃತಿಯ ಪೂರ್ವಪೀಠಿಕೆ, ಭಾಗ.೧ ಧಾರವಾಡ ೧೯೬೭.

೬೮. ಜವರೇಗೌಡ., ಸ್ಥಳನಾಮ ವ್ಯಾಸಾಂಗ, ಸಹ್ಯಾದ್ರಿ ಪ್ರಕಾಶನ, ಮೈಸೂರು ೧೯೯೦.

೬೯. ತಿಪ್ಪೇರುದ್ರ ಸ್ವಾಮಿ ಎಚ್., ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು.

೭೦. ತಪಸ್ವಿಕುಮಾರ್ ನಂ., ಜಾನಪದ ಅಧ್ಯಯನ ಸಂಕ್ಷಿಪ್ತ ಇತಿಹಾಸ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ೧೯೯೫.

೭೧. ತಾರನಾಥ ಎನ್.ಎಸ್., (ಸಂ) ಶತಮಾನದ ಸಂಶೋಧನೆ, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು ೨೦೦೧.

೭೨. ತಿಪ್ಪೇಸ್ವಾಮಿ ಜಿ.ಆರ್., ಮೌಖಿಕ ಕಥನ, ವಿಜಯ ಲಕ್ಷ್ಮಿ ಪ್ರಕಾಶನ, ಮೈಸೂರು ೨೦೦೫.

೭೩. ತುಕರಾಮರಾವ್ ಹೆಚ್(ಸಂ)., ಹೊಸಪೇಟೆ ಚಾರಿತ್ರಕ ವಿವೇಚನ ಐತಿಹ್ಯ ಪರಿಶೀಲನೆ, ಶರಣ ಸುವಾಸಿನಿ ಬಳಗ, ಹೊಸಪೇಟೆ ೧೯೯೭.

೭೪. ದೇವೇಂದ್ರಕುಮಾರ ಹಕಾರಿ, ಜಾನಪದ ಸಾಮಾಜಿಕ ಕಥನ ಗೀತೆಗಳಲ್ಲಿ ದುಃಖಾಂತ ನಿರೂಪಣೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ೧೯೯೫.

೭೫. ಧ್ರುವರಾಜ ನಾ.ಗದಗಕರ, ದೇಗುಲ ರಥಶಿಲ್ಪ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೧೯೯೯.

೭೬. ದೇವರಕೊಂಡಾರೆಡ್ಡಿ, ತಲಕಾಡಿನ ಗಂಗರ ದೇವಾಲಯಗಳು : ಒಂದು ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೪.

೭೭. ದೇವರಕೊಂಡಾರೆಡ್ಡಿ, ಕರ್ನಾಟಕ ಶಾಸನಗಳಲ್ಲಿ ಶಾಪಾಶಯನಗಳು, ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ, ೨೦೦೮.

೭೮. ದೇವರಕೊಂಡಾರೆಡ್ಡಿ, ಗಂಗರ ಶಿಲ್ಪಕಲೆ, ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಬೆಂಗಳೂರು, ೨೦೦೮.

೭೯. ದೇಶಪಾಂಡೆ ರಾ.ಹ., ಕರ್ನಾಟಕ ಸಾಮ್ರಾಜ್ಯ ಭಾಗ–೧, ಭಾಗ–೨.

೮೦. ಡೇವಿಡ್ ಎಸ್., ಲಾರೆಂಜೆನ್(ಇಂಗ್ಲೀಷ್), ವಿರೂಪಾಕ್ಷ ಕುಲಕರ್ಣಿ(ಕನ್ನಡ ಅನುವಾದ), ಕಾಪಾಲಿಕರು ಮತ್ತು ಕಾಳಮುಖರು (ಕಣ್ಮರೆಯಾದ ಎರಡು ಶೈವ ಸಂಪ್ರದಾಯಗಳು), ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು ೨೦೦೫.

೮೧. ದಿವಾಕರ ಆರ್.ಆರ್. (ಕರ್ನಾಟಕ ಪರಂಪರೆ, ಸಂಪುಟ ೧ ಮತ್ತು ೨, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೮೨. ದೀಕ್ಷಿತ್ ಜಿ.ಎಸ್ ಮತ್ತು ಇತರರು., ಶ್ರೀಕೃಷ್ಣದೇವರಾಯ ಜೀವನ ಸಾಧನೆಗಳು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು ೧೯೯೭.

೮೩. ನರಸಿಂಹಚಾರ್ ಆರ್., ಶಾಸನ ಪದ್ಯಮಂಜರಿ.

೮೪. ನೇಗಿನ ಹಾಳ., ಪ್ರಾಚೀನ ಕನ್ನಡ ಶಾಸನ ಭಾಷಿಕ ಅಧ್ಯಯನ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ೧೯೮೨.

೮೫. ನಾಗಯ್ಯ ಜೆ.ಎಂ., ಆರನೆಯ ವಿಕ್ರಮಾದಿತ್ಯನ ಶಾಸನಗಳು ಒಂದು ಅಧ್ಯಯನ, ವೀರಶೈವ ಅಧ್ಯಯನ ಅಕಾಡೆಮೆ, ನಾಗನೂರು ಮಠ, ಬೆಳಗಾವಿ ೧೯೯೨.

೮೬. ನೆಲಮಂಗಲ ಲಕ್ಷ್ಮೀನಾರಯಣ ರಾವ್ ಮತ್ತು ಪಂಚಮುಖಿ ಆರ್.ಎಸ್., ಕರ್ನಾಟಕದ ಅರಸು ಮನೆತನಗಳು.

೮೭. ನೇಗಿನ ಹಾಳ ಎಂಬಿ., ನೇಗಿನ ಹಾಳ ಪ್ರಬಂಧಗಳು., ಕನ್ನಡ ವಿಶ್ವವಿದ್ಯಾಲಯ, ಹಂಪಿ ೧೯೯೯.

೮೮. ನಾಯಕ ಹಾ.ಮಾ., (ಸಂ) ಕರ್ನಾಟಕ ವಿಷಯ ಕೋಶ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು ೧೯೭೯.

೮೯. ನಂಜುಂಡ ಸ್ವಾಮಿ ಎ.ಎಸ್., ಕರ್ನಾಟಕದ ಪಾಳೆಯಗಾರರು ಮತ್ತು ಒಡೆಯರ ಇತಿಹಾಸ, ಸಮಾಜ ಪುಸ್ತಕಾಲಯ ಧಾರವಾಡ ೧೯೮೬.

೯೦. ನರಸಿಂಹಮೂರ್ತಿ ಎ.ವಿ., ಕರ್ನಾಟಕದ ಸೇವುಣರ ಇತಿಹಾಸ, ಮೈಸೂರು ೧೯೭೧.

೯೧. ನಾಗೇಗೌಡ ಎಚ್.ಎಲ್., ಪ್ರವಾಸಿ ಕಂಡ ಇಂಡಿಯಾ ಸಂ.೧ ಮತ್ತು ಸಂ.೨, ಮೈಸೂರು ವಿಶ್ವವಿದ್ಯಾಲಯ, ಮೈಸೂರು ೧೯೯೪.

೯೨. ನಾಗಯ್ಯ ಜೆ.ಎಂ, ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ, ಲೋಹಿಯಾ ಪ್ರಕಾಶನ, ಬಳ್ಳಾರಿ ೨೦೦೨.

೯೩. ನಾಗರಾಜ ಶ.ಕಾಳಿ., ತುಂಗಭದ್ರ ಸೀಮೆಯ ಜನ ಜೀವನ, ಕಲಬುರ್ಗಿ ೧೯೦೮.

೯೪. ನಂಜಮ್ಮಣ್ಣಿ ಎಂ., ಪ್ರಾಚೀನ ಭಾರತದ ಸಾಮಾಜಿಕ ಇತಿಹಾಸ, ಮೈಸೂರು ೧೯೮೦.

೯೫. ಪರಮಶಿವಮೂರ್ತಿ ಡಿ.ವಿ., ಕನ್ನಡ ಶಾಸನ ಶಿಲ್ಪ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೧೯೯೯.

೯೬. ಪಂಚಮುಖಿ ಆರ್.ಎಸ್., ಕರ್ನಾಟಕ ಇತಿಹಾಸ, ಕರ್ನಾಟಕ ಇತಿಹಾಸ ಸಂಸ್ಥೆ ಮಂಡಲ, ಧಾರವಾಡ ೧೯೬೭.

೯೭. ಪಂಚಮುಖಿ ಆರ್.ಎಸ್., ಕರ್ನಾಟಕ ಇತಿಹಾಸ.

೯೮. ಪುಟ್ಟಪ್ಪ ಕೆ.ವಿ., ಭಾರತೀಯ ಸಂಸ್ಕೃತಿ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೫೪.

೯೯. ಪರಮಶಿವಯ್ಯ ಜೀ.ಶಂ., ದಕ್ಷಿಣ ಕರ್ನಾಟಕ ಜಾನಪದ ಕಾವ್ಯ ಪ್ರಕಾರಗಳು, ಮೈಸೂರು ೧೯೭೯.

೧೦೧. ಪಾಟೀಲ ಎಂ.ಎಸ್ ಮತ್ತು ಸ್ವಾಮಿರಾವ್ ಕುಲಕರ್ಣಿ., ಆಯ್ದ ವೈಚಾರಿಕ ಪ್ರಬಂಧಗಳು, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ ೨೦೦೪.

೧೦೨. ಪುರುಷೋತ್ತಮ ಬಿಳಿಮಲೆ, ಕರಾವಳಿ ಜಾನಪದ, ಮಂಗಳ ಗಂಗೋತ್ರಿ, ದ.ಕ ೧೯೯೦.

೧೦೩. ಪುರುಷೋತ್ತಮ ಬಿಳಿಮಲೆ, ಕೂಡುಕಟ್ಟು, ಆನಂದ ಕಂದ ಗ್ರಂಥಮಾಲೆ, ಮಲ್ಲಾಡಿಹಳ್ಳಿ ೧೯೯೭.

೧೦೪. ಪರಮಶಿವಮೂರ್ತಿ ಡಿ.ವಿ(ಡಾ), ಶಾಸನ ಸಂಶೋಧನೆ, ಗುಣನಿಧಿ ಪ್ರಕಾಶನ, ಬೆಂಗಳೂರು ೧೯೯೪.

೧೦೫. ಪರಮಶಿವಮೂರ್ತಿ ಡಿ.ವಿ(ಡಾ), ಸಂಶೋಧನೆಯ ಸಿರಿ, ಗುಣ ನಿಧಿ ಪ್ರಕಾಶನ, ಬೆಂಗಳೂರು ೧೯೯೬.

೧೦೬. ಪರಮಶಿವಮೂರ್ತಿ ಡಿ.ವಿ(ಡಾ), (ಸಂ) ಪ್ರೌಢದೇವರಾಯನ ಶಾಸನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೭.

೧೦೭. ಪರಮಶಿವಮೂರ್ತಿ ಡಿ.ವಿ(ಡಾ), (ಸಂ) ಕೃಷ್ಣ ದೇವರಾಯನ ಶಾಸನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೯.

೧೦೮. ಪರಮಶಿವಮೂರ್ತಿ ಡಿ.ವಿ., ಕನ್ನಡ ಶಾಸನ ಶಿಲ್ಪ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೨.

೧೦೯. ಪುಟ್ಟಣ್ಣ ಎಂ.ಎಸ್., ಚಿತ್ರದುರ್ಗ ಪಾಳೆಯಗಾರರು, ಬೆಂಗಳೂರು ೧೯೨೩.

೧೧೦. ಫಿಲಿಯೋಜಾ ವಸುಂಧರಾ., ವಿಜಯ ನಗರ ಸಾಮ್ರಾಜ್ಯ ಸ್ಥಾಪನೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ೧೯೮೦.

೧೧೧. ಫಿಲಿಯೋಜಾ ವಸುಂಧರಾ., ಅಳಿದುಳಿದ ಹಂಪೆ, ಮನಾಸೋಲ್ಲಾಸ ಪ್ರಕಾಶನ, ಬೆಂಗಳೂರು ೧೯೮೨.

೧೧೨. ಬಸವರಾಜ ಕಲ್ಗುಡಿ(ಸಂ)., ಸುವರ್ಣ ವಿಚಾರ ಸಾಹಿತ್ಯ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ೨೦೦೬.

೧೧೩. ಬಸವರಾಜ ಎಚ್.ಎಂ., ಗುಡೇಕೋಟೆ: ಒಂದು ಚಾರಿತ್ರಿಕ ಅಧ್ಯಯನ, ಎಂ.ಫಿಲ್, ಪ್ರೌಢ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೨.

೧೧೪. ಬಸವರಾಜ ಎನ್.ಅಕ್ಕಿ., ಕರ್ನಾಟಕದ ಇತಿಹಾಸ ಮತ್ತು ಸಂಸ್ಕೃತಿ, ಸೋಮೇಶ್ವರ ಪ್ರಕಾಶನ, ಧಾರವಾಡ ೨೦೦೪.

೧೧೫. ಬಸವನಾಳ ಎಮ್.ವಿ ಮತ್ತು ಹಲಗಲಿ ಹೆಚ್., ಹಿಂದೂ ಸ್ಥಾನದ ಇತಿಹಾಸ(ಪ್ರಾಚೀನ ಕಾಲದಿಂದ ೧೯೨೮ ರ ವರೆಗೆ) ತೋಂಟದಾರ್ಯ ಮುದ್ರಣಾಲಯ, ಧಾರವಾಡ, ೧೯೩೦.

೧೧೬. ಬಸವರಾಜ ಮಲಶೆಟ್ಟಿ, ಹಂಪೆ ಒಂದು ಪರಿಚಯ, ಶ್ರೀ ಜಗದ್ಗುರು ಕೊಟ್ಟೂರು ಸ್ವಾಮಿ ಮಠ, ಹಂಪಿ ೧೯೮೧.

೧೧೭. ಬಾಲಗೋಪಾಲ ಕೆ(ಮೂಲ), ಡಾ.ಶ್ರೀಮತಿ ಎಚ್.ಎಸ್(ಅನು)., ಪ್ರಾಚೀನ ಭಾರತದ ಚರಿತ್ರೆ, ಬೆಳ್ಳಿ ಚುಕ್ಕಿ ಬುಕ್ ಟ್ರಸ್ಟ, ಮೈಸೂರು, ೧೯೯೮.

೧೧೮. ಬೆಟಗೇರಿ ಕೃಷ್ಣಶರ್ಮ., ಕರ್ನಾಟಕ ಜನಜೀವನ, ಸಾಗರ ಪ್ರಕಾಶನ, ಬೆಂಗಳೂರು ೨೦೦೫.

೧೧೯. ಭೂಸನೂರ ಮಠ ಸಂ.ಶಿ(ಸಂ)., ವಿಜಯ ಕಲ್ಯಾಣ, ಹಂಪಿ: ಶ್ರೀ ಜಗದ್ಗುರು ಕೊಟ್ಟೂರು ಸ್ವಾಮಿ ಮಠ, ಮಂಗರಸ, ಸಮ್ಯಕ್ತ್ವ ಕೌಮದಿ, ಬೆಳಗಾವಿ ೧೯೮೮.

೧೨೦. ಮಹಾಬಲೇಶ್ವರ ಕಾಟ್ರಳ್ಳಿ., ಬಾಗಳಿಯೇ ಬಾಗಳಿಗೆ, ಕರ್ನಾಟಕ ಸಾಹಿತ್ಯ ಅಕೆಡೆಮಿ, ೧೯೯೩.

೧೨೧. ಮಲ್ಲೇಪುರಂ ಜಿ. ವೆಂಕಟೇಶ(ಸಂ)., ಶಂಭಾ ಜೋಶಿ, ಎಡೆಗಳು ಹೇಳುವ ಕಂನಾಡ ಕತೆ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು ೧೯೯೯.

೧೨೨. ಮಹೇಶ್ವರಯ್ಯ ಎಚ್.ಎಂ. ಮತ್ತು ಕೃಷ್ಣಮೂರ್ತಿ ಹನೂರು., ಜಾನಪದ ಅಧ್ಯಯನ ಸೈದ್ಧಾಂತಿಕ ದೃಷ್ಟಿ, ದಕ್ಷಿಣ ಭಾರತೀಯ ಭಾಷೆಗಳ ಸಂಘ, ತ್ರಿವೇಂಡ್ರಂ ೨೦೦೪.

೧೨೩. ಮಹಾದೇವ ಸಿ., ಹೊಸಪೇಟೆ ತಾಲೂಕು ದರ್ಶನ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೨

೧೨೪. ಮಂಜುನಾಥ ಬೇವಿನಕಟ್ಟಿ ಡಾ., ವಿಜಯನಗರ ಸಾಂಸ್ಕೃತಿಕ ಆಯಾಮಗಳು, ಶ್ರೀ ವಿದ್ಯಾ ವಿಜಯನಗರ ಪ್ರಕಾಶನ, ಕಮಲಾಪುರ ೧೯೯೭.

೧೨೫. ಮೇವುಂಡಿ ಮಲ್ಲಾರಿ., ಕನ್ನಡ ಶಾಸನ ಕವಿಗಳು.

೧೨೬. ಮೋಹನ ಕೃಷ್ಣ ರೈ(ಡಾ), ಪ್ರಭುತ್ವ ಮತ್ತು ಜನತೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೪.

೧೨೭. ಮೊಗಳ್ಳಿ ಗಣೇಶ್., ಮೌಖಿಕ ಕಥನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೬.

೧೨೮. ಮೊಗಳ್ಳಿ ಗಣೇಶ್., ದಲಿತರು ಮತ್ತು ಜಾಗತೀಕರಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೧೯೯೯.

೧೨೯. ಯೋಗೀಶ್ವರಪ್ಪ ಡಿ.ಎನ್., ಹಾಗಲವಾಡಿ ನಾಯಕರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೧೯೯೯.

೧೩೦. ರಘುನಾಥ ಭಟ್ ಮತ್ತು ಎಂ.ಎಂ. ಕಲಬುರ್ಗಿ., (ಸಂ) ಬಿಳಿಗಿ ಅರಸು ಮನೆತನ, ವೀರಶೈವ ಅಧ್ಯಯನ ಅಕಾಡೆಮಿ, ಶ್ರೀ ನಾಗನೂರು ರುದ್ರಾಕ್ಷಿ ಮಠ, ಬೆಳಗಾವಿ ೧೯೯೫.

೧೩೨. ರವೀಂದ್ರ ಕುಮಾರ ಜೆ., ಮೌಖಿಕ ಚರಿತ್ರೆ, ಅಪ್ರಕಟಿತ ಎಂ.ಫಿಲ್, ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೩೩. ರಹಮತ್ ತರೀಕೆರೆ ಡಾ. (ಸಂ) ಧರ್ಮ ವಿಶ್ವಕೋಶ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೦.

೧೩೪. ರಹಮತ್ ತರೀಕೆರೆ ಡಾ., ಕರ್ನಾಟಕ ನಾಥ ಪಂಥ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೬.

೧೩೫. ರಂಗಸ್ವಾಮಿ ಎಸ್., ಕರ್ನಾಟಕದ ದೇವಾಲಯಗಳು, ಬೆಂಗಳೂರು ೧೯೯೪.

೧೩೭. ರಘುನಾಥ ಭಟ್ ಎಚ್.ಆರ್., ಪುರಾತತ್ವ ಪರಿಚಯ, ಮೈಸೂರು ೧೯೮೪.

೧೩೮. ರವಿಕುಮಾರ ಎನ್. ಮತ್ತು ವೃಷಭೇಂದ್ರಚಾರ್ ಎಂ(ಸಂ)., ಮುನ್ನಡೆಯ ಕೂಡ್ಲಿಗಿ, ಹೇಮಂತ ಪ್ರಕಾಶನ, ಐಯ್ಯನಹಳ್ಳಿ ೧೯೯೮.

೧೩೯. ರಮೇಶ ಕೆ.ವಿ., ಕರ್ನಾಟಕ ಶಾಸನ ಸಮೀಕ್ಷೆ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು ೧೦೭೧.

೧೪೦. ರಮೇಶ ಕೆ.ವಿ., ಶಾಸನಗಳು ಮತ್ತು ಭಾರತೀಯ ಸಂಸ್ಕೃತಿ, ಗುಡಿ ಜೀವನಾಡಿ, ಮೈಸೂರು ವಿಶ್ವವಿದ್ಯಾಲಯ, ಮೈಸೂರು ೧೯೯೪.

೧೪೧. ರಾಜಶೇಖರ ಸಿಂದಗಿ., ಕರ್ನಾಟಕ ವಾಸ್ತುಶಿಲ್ಪ ಮತ್ತು ಚಿತ್ರಕಲೆ, ಸುಜಾತ ಪಬ್ಲಿಕೇಶನ್ಸ, ಧಾರವಾಡ ೧೯೮೮.

೧೪೨. ರಾಮಚಂದ್ರ ರಾವ್ ಎ.ಕೆ., ಮೂರ್ತಿಶಿಲ್ಪ ನೆಲೆ, ಹಿನ್ನಲೆ. ಬೆಂಗಳೂರು ವಿಶ್ವವಿದ್ಯಾಲಯ ಬೆಂಗಳೂರು ೧೯೯೬.

೧೪೩. ರಾಮಚಂದ್ರ ರಾವ್ ಎಸ್.ಕೆ.ಪ್ರೊ., ಕರ್ನಾಟಕದ ಕಲೆಗಳು, ಸಂ.೧ ವಾಸ್ತು, ಬೆಂಗಳೂರು.

೧೪೪. ರಾಜಶೇಖರ ಜಮದಂಡಿ., ಹೊಸೂರಮ್ಮ: ಸಾಂಸ್ಕೃತಿಕ ಅಧ್ಯಯನ, ಅಪ್ರಕಟಿತ ಎಂ.ಫಿಲ್ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೧೯೯೬.

೧೪೬. ರಾಜಶೇಖರ ಬಡಿಗೇರ., ವೀರಗಲ್ಲಿನ ವೀರರು: ಒಂದು ಪುನರಾವಲೋಕನ, ಪ್ರಭಾಸ ಪ್ರಕಟಣೆ ಅಕ್ಕಲಕೋಟೆ.

೧೪೭. ರಾಜೇಂದ್ರ ಡಿ.ಕೆ., ಜಾನಪದ ಶೋಧ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೭.

೧೪೮. ರಾಜೇಂದ್ರ ಡಿ.ಕೆ., ಜಾನಪದ ಶಿಷ್ಟಪದ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು ೨೦೦೩.

೧೪೯. ರಾಜಶೇಖರ ಸಿಂದಗಿ(ಡಾ.), ಕರ್ನಾಟಕದ ವಾಸ್ತುಶಿಲ್ಪ ಮತ್ತು ಚಿತ್ರಕಲೆ, ಧಾರವಾಡ ೧೯೯೮.

೧೫೦. ರಾಜರಾಮ ಹೆಗಡೆ (ಸಂ)., ಭಾರತೀಯ ಇತಿಹಾಸ: ಸಮಾಜ ಮತ್ತು ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು ೨೦೦೪.

೧೫೧. ರಾಜಶೇಖರ ಎಸ್., ವಿಜಯನಗರ ಕಾಲದ ಘಟನಾವಳಿ ಸೂಚಿ, ಸುಜಾತ ಪಬ್ಲಿಕೇಷನ್ಸ, ಧಾರವಾಡ.

೧೫೨. ರಾಜಶೇಖರ ಎಸ್., ಕರ್ನಾಟಕದ ವಾಸ್ತುಶಿಲ್ಪ ಮತ್ತು ಚಿತ್ರಕಲೆ, ಧಾರವಾಡ ೧೯೯೮.

೧೫೩. ರಾಮರಾವ್ ಜಿ.ಎಸ್., ವಿದೇಶಿಯರು ಕಂಡ ವಿಜಯನಗರ, ಐ.ಬಿ.ಎಚ್ ಪ್ರಕಾಶನ, ಬೆಂಗಳೂರು.

೧೫೪. ರಾಮಚಂದ್ರ ಎಸ್.ಕೆ., ಮೂರ್ತಿಶಿಲ್ಪದ ನೆಲೆ ಹಿನ್ನಲೆ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು ೧೯೭೫.

೧೫೫. ರಿತ್ತಿ ಶ್ರೀನಿವಾಸ (ಸಂ), ಕರ್ನಾಟಕ ಗ್ರಾಮಸೂಚಿ, ಕನ್ನಡ ಮತ್ತು ಸಂಸ್ಕೃತಿ ನಿರ್ದೇನಾಲಯ, ಬೆಂಗಳೂರು ೧೯೮೫.

೧೫೬. ರಿತ್ತಿ ಶ್ರೀನಿವಾಸ., ಮುಳುಗುಂದನಾಡು, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ೧೯೬೯.

೧೫೭. ಲಕ್ಷ್ಮಣ ತೆಲಗಾವಿ(ಸಂ)., ಹರಿತಿಸಿರಿ, ಹೆಚ್.ವಿ. ವೀರನಾಯಕ ಹರಿತಿ, ನೆನಪಿನ ಸಂಪುಟ, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ, ಚಿತ್ರದುರ್ಗ ಜಿಲ್ಲೆ ೧೯೮೭.

೧೫೮. ಲಕ್ಷ್ಮಣ ತೆಲಗಾವಿ(ಸಂ)., ಸಂಶೋಧನಾ, ಡಾ. ಚಿದಾನಂದಮೂರ್ತಿಯವರ ಅಭಿನಂದನ ಸಮಿತಿ, ಬೆಂಗಳೂರು ೧೯೯೧.

೧೫೯. ಲಕ್ಷ್ಮಣ್ ತೆಲಗಾವಿ(ಸಂ)., ಸ್ಥಳೀಯ ಚರಿತ್ರೆ, ಅಧ್ಯಯನ ತಾತ್ವಿಕತೆ ಮತ್ತು ಸ್ವರೂಪ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೩.

೧೬೦. ಲಕ್ಷ್ಮಣ್ ತೆಲಗಾವಿ ಮತ್ತು ಶ್ರೀನಿವಾಸ ಎಂ.ವಿ., ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು, ಚಿತ್ರದುರ್ಗ.

೧೬೧. ವಸು ಎಮ್.ವಿ(ಸಂ)., ದಕ್ಷಿಣ ಕರ್ನಾಟಕದ ಅರಸು ಮನೆತನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೧.

೧೬೨. ವಸಂತಕುಮಾರ ತಾಳ್ತಜೆ., ಕರ್ನಾಟಕದಲ್ಲಿ ಬೌದ್ಧ ಸಂಸ್ಕೃತಿ, ವಿನಯ ಪ್ರಕಾಶನ, ಬೆಂಗಳೂರು ೧೯೮೮.

೧೬೩. ವರದರಾಜ ರಾವ್ ಜಿ., ಕುಮ್ಮಟದುರ್ಗ, ಬೆಂಗಳೂರು.

೧೬೪. ವಿಶ್ವನಾಥ., ಸ್ಥಳನಾಮಗಳು, ಸಂವಹನ ಪ್ರಕಾಶನ, ಮೈಸೂರು ೧೯೯೬.

೧೬೫. ವಸು., ಮೌಖಿಕ ಇತಿಹಾಸ, ಅಂಕಿತ ಪುಸ್ತಕ ಪ್ರಕಾಶನ, ಬೆಂಗಳೂರು ೨೦೦೪.

೧೬೬. ವೆಂಕಟೇಶ ಜೋಯಿಸ್., ಕೆಳದಿ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು ೧೯೯೬.

೧೬೭. ವೆಂಕಟ ರತ್ನಂ ಎ.ವಿ.(ಡಾ) ಮತ್ತು ಪದ್ಮ ಎಂ.ಬಿ.(ಡಾ)., ಇತಿಹಾಸ ಸಂಶೋಧನಾ ಮಾರ್ಗ, ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಕಂಪನಿ ಲಿಮಿಟೆಡ್, ಬೆಂಗಳೂರು ೧೯೮೫.

೧೬೮. ವಿವೇಕ ರೈ ಬಿ.ಎ., ಆನ್ವಯಿಕ ಜಾನಪದ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು ೧೯೯೫.

೧೬೯. ವಾಸುದೇವ ಬಡಿಗೇರ., ಸಂಡೂರು ಪರಿಸರದ ಕಾರ್ತಿಕೇಯ ತಪೋವನ, ಮಯಾ ಪ್ರಕಾಶನ, ಕಮಲಾಪುರ ೧೯೯೭.

೧೭೦. ವಿಕ್ರಮ ವಿಸಾಜಿ., ನಾದಗಳು ನುಡಿಯಾಗಲೀ, ಪಲ್ಲವ ಪ್ರಕಾಶನ, ಚೆನ್ನಪಟ್ಟಣ ೨೦೦೮.

೧೭೧. ವಿರೂಪಾಕ್ಷಿ ಪೂಜಾರಹಳ್ಳಿ, ಕಾಮಲಾಪುರದ ದಾದಾಪೀರ ಛತ್ರ, ಸಾಪ್ತಾಹಿಕ ಪ್ರಭ, ವಿಜಯ ಕರ್ನಾಟಕ ೧೯೯೭.

೧೭೨. ವಾಸುದೇವನ್ ಸಿ.ಎಸ್., ಹಂಪಿ ಪರಿಸರದ ಕೆರೆಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

೧೭೩. ಸದಾಶಿವಪ್ಪ ಕೆ., ಬಳ್ಳಾರಿ ಜಿಲ್ಲಾದರ್ಶನ, ಮಾಲತೇಶ ಪ್ರಕಾಶನ.

೧೭೪. ಸದಾಶಿವಪ್ಪ ಕುಂ.ಭಾ., ಜಿಲ್ಲಾ ಸಾಂಸ್ಕೃತಿಕ ದರ್ಶನ, ಸಂಶೋಧಿತ ಲೇಖನಗಳು, ಶ್ರೀ ಮಾತೇಂಶ ಪ್ರಕಾಶನ ಕುಂಜೂರು ೧೯೯೦.

೧೭೫. ಸದಾಶಿವಪ್ಪ ಕುಂ.ಬಾ., ಹರಪನಹಳ್ಳಿ ಪಾಳೆಗಾರರು, ಕನ್ನಡ ಸಾಹಿತ್ಯ ಪರಿಷತ್ತು. ಬೆಂಗಳೂರು ೧೯೯೬.

೧೭೬. ಸುರೇಶ ಕೆ.ಎಂ. ಮತ್ತು ಇತರರು., ಕರ್ನಾಟಕ ದೇವಾಲಯ ಕೋಶ(ಬಳ್ಳಾರಿ ಜಿಲ್ಲೆ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೧೯೯೮.

೧೭೭. ಸುಂದರ ಅ., ಕರ್ನಾಟಕ ಪ್ರಾಗಿತಿಹಾಸ ಕಾಲದ ಕಲೆ, ಕರ್ನಾಟಕ ಲಲಿತ ಕಲಾ ಅಕಾಡೆಮಿ, ಬೆಂಗಳೂರು ೧೯೯೪.

೧೭೮. ಸುಂದರ ಅ., ಆನೆಗೊಂದಿ ಕಿಷ್ಕಿಂದೆ, ಶರಣ ಸುವಾಸಿನಿ ಬಳಗ, ಹೊಸಪೇಟೆ ೧೯೯೯.

೧೭೯. ಸುಂದರ ಅ., ಕಿಷ್ಕಿಂಧ ಹನುಮಂತನ ತವರು, ಶ್ರೀ ವಿದ್ಯಾವಿಜಯನಗರ ಹಂಪಿ ಹೇರಿಟೇಜ ಟ್ರಸ್ಟ, ಹೊಸಪೇಟೆ ೧೯೯೭.

೧೮೦. ಸೂರ್ಯನಾರಯಣರಾವ್ ವಿ(ಮೂಲ), ಬಾಲಸುಬ್ರಮಣ್ಯಂ(ಅನು)., ಮರೆಯಲಾಗದ ಮಹಾ ಸಾಮ್ರಾಜ್ಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೮.

೧೮೧. ಸುರೇಶ ಕೆ.ಎಂ, ವಾಸುದೇವ ಬಡಿಗೇರ, ಎಂ.ಕೊಟ್ರೇಶ ಮತ್ತು ಎಸ್.ವೈ.ಸೋಮಶೇಖರ., ಕರ್ನಾಟಕ ದೇವಾಲಯ ಕೋಶ. ಕೊಪ್ಪಳ ಜಿಲ್ಲೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೦.

೧೮೨. ಸುಂದರ ಅ., ಪ್ರಾಚ್ಯವಸ್ತು ಸಂಶೋಧನೆ, ಧಾರವಾಡ ೧೯೭೨.

೧೮೩. ಸೀತಾರಾಮಯ್ಯ ವಿ., ಪಂಪಾಯಾತ್ರೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ನಿರ್ದೇಶನಾಲಯ, ಬೆಂಗಳೂರು ೧೯೯೦.

೧೮೪. ಸೂರ್ಯನಾಥ ಕಾಮತ್ ಯು., ಕರ್ನಾಟಕ ಗ್ಯಾಸೆಟಿಯರ್, ಬೆಂಗಳೂರು ೧೯೮೪.

೧೮೫. ಸೋಮಶೇಖರ ಎಸ್.ವೈ., ಹಂಪೆಯ ಬಜಾರಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭.

೧೮೬. ಶರ್ಮ ಆರ್.ಎಸ್., ಪ್ರಾಚೀನ ಭಾರತ, ನವ ಕರ್ನಾಟಕ ಪ್ರಕಾಶನ, ಬೆಂಗಳೂರು ೨೦೦೨.

೧೮೭. ಶ್ರೀಕಂಠ ಕೂಡಿಗೆ(ಸಂ)., ಜಾನಪದ ಸಾಹಿತ್ಯದ ದರ್ಶನ, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ೧೯೭೪.

೧೮೮. ಶಿವತಾರಕ ಕೆ.ಬಿ., ಕರ್ನಾಟಕದ ಪುರಾತತ್ವ ನೆಲೆಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ ೧೯೯೧.

೧೮೯. ಶ್ರೀಕಂಠ ಶಾಸ್ತ್ರೀ ಎಸ್., ಪುರಾತತ್ವ ಶೋಧನೆ, ಧಾರವಾಡ ೧೯೬೦.

೧೯೦. ಶಿವಲೀಲಾ ಕೆ(ಡಾ)., ಕಾಮಲಾಪುರದ ಶಾಸನಗಳು ಮತ್ತು ದೇವಾಲಯಗಳು, ಅಪ್ರಕಟಿತ ಎಂ.ಫಿಲ್, ಪ್ರಬಂಧ ೨೦೦೩.

೧೯೧. ಶಿವರುದ್ರ ಸ್ವಾಮಿ ಎಸ್.ಎನ್., ಕರ್ನಾಟಕ ಪ್ರೌಢ ಇತಿಹಾಸ ಮತ್ತು ಸಂಸ್ಕೃತಿ, ಸ್ವಾರಸ್ಯ, ಪ್ರಕಾಶನ, ತಿಪಟೂರು ೨೦೦೦.

೧೯೨. ಶ್ರೀನಿವಾಸ ಎಂ.ವಿ ಮತ್ತು ಲಕ್ಷ್ಮಣ್ ತೆಲಗಾವಿ(ಸಂ)., ಚಂದ್ರವಳ್ಳಿ, ಜಿಲ್ಲಾ ಇತಿಹಾಸ ಸಂಶೋಧನ ಮಂಡಲಿ, ಚಿತ್ರದುರ್ಗ ೧೯೭೬.

೧೯೩. ಶಾಮಾರಾಯ (ಅನುವಾದ)., ಕಬೀರ ಹುಮಾಯುನರ ಭಾರತ ಇತಿಹಾಸದ ಪಾಠಗಳು, ಭಾರತೀ ಪ್ರಕಾಶನ, ಮೈಸೂರು ೧೯೬೧.

೧೯೪. ಶ್ರೀನಿವಾಸಮೂರ್ತಿ ಎಚ್.ಬಿ., ಇತಿಹಾಸ ಸಂಶೋಧನಾ ಮಾರ್ಗ ಮತ್ತು ಇತಿಹಾಸ ಲೇಖನ ಕಲೆ, ಕೈಲಾಸ ಪ್ರಿಂಟರ್ಸ ಮತ್ತು ಪಬ್ಲಿಷರ್ಸ, ಬೆಂಗಳೂರು ೧೯೮೭.

೧೯೫. ಶೇಷಶಾಸ್ತ್ರಿ ಆರ್., ಕರ್ನಾಟಕದ ವೀರಗಲ್ಲುಗಳು, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು ೧೯೮೨.

೧೯೬. ಶಿವಾನಂದ ವಿ(ಡಾ), ಸಂ. ಹೈದ್ರಾಬಾದು ಕರ್ನಾಟಕ ಭಾಗದ ಕನ್ನಡ ಶಿಲಾಶಾಸನಗಳು, ವಾರಣಾಸಿ ೧೯೯೨

೧೯೭. ಹೀರೆಮಠ ಬಿ.ಎ., ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ, ವೀರಶೈವ ಅಧ್ಯಯನ ವೇದಿಕೆ, ಜಂಜಗಿ ೧೯೬೨.

೧೯೮. ಹಿರೇಮಠ ಬಿ.ಎ., ಶಾಸನಗಳಲ್ಲಿ ವರ್ತಕರು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ೧೯೯೦

೧೯೯. ಹಿರೇಮಠ ಆರ್.ಸಿ(ಸಂ)., ಜಾನಪದ ಸಾಹಿತ್ಯದ ದರ್ಶನ, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ೧೯೭೪.

೨೦೦. ಹಿರೇಮಠ ಎಸ್.ಎಸ್., ಬಳ್ಳಾರಿ ಜಿಲ್ಲೆಯ ಆಧುನಿಕ ಸಾಹಿತ್ಯ, ಶ್ರೀ ಸಿದ್ಧವೀರ ಶಿವಾಚಾರ್ಯ ಜ್ಞಾನ ಪ್ರಕಾಶ, ಪುರಾ ೧೯೯೬.

## ಅನುಬಂಧ-೨

## ವಕ್ತೃಗಳ ವಿವರ

| ಕ್ರಸಂ. | ಹೆಸರು | ವಯಸ್ಸು | ಉದ್ಯೋಗ | ಸ್ಥಳ |
|---|---|---|---|---|
| ೧. | ಬಿ. ಪಂಪಾಪತಿ | ೩೫ | ಪ್ರ. ಮಾರ್ಗದರ್ಶಿ | ಹಂಪಿ |
| ೨. | ಹುಲುಗಪ್ಪ. ಬಿ | ೨೫ | ,, | ಹಂಪಿ |
| ೩. | ಜಂಭಣ್ಣ ನಾಯಕ | ೪೦ | ವ್ಯಾಪಾರಿ | ಹಂಪಿ |
| ೪. | ಭಾನುಪ್ರಕಾಶ | ೩೧ | ಪ್ರ. ಮಾರ್ಗರ್ಶಿ | ಹಂಪಿ |
| ೫. | ಸುಭಾನ್ | ೩೫ | ಖಾಸಗಿನೌಕರ | ಗಾದಿಗನೂರು |
| ೬. | ನಾಗರಾಜ | ೪೦ | ಆಟೊಡ್ರೈವರ್ | ಪಾಪಿನಾಯಕನಹಳ್ಳಿ |
| ೭. | ಹೇಮಂತ | ೩೯ | ಕೃಷಿಕ | ಕಮಲಾಪುರ |
| ೮. | ಗುರುನಾಥ | ೩೦ | ಸಮಾಜಿಕ ಕಾರ್ಯಕರ್ತ | ,, |
| ೯. | ಮಲ್ಲೇಶ | ೩೧ | ವರದಿಗಾರರು | ಕೊಂಡನಾಯಕನಹಳ್ಳಿ |
| ೭. | ಹನುಮಂತಪ್ಪ | ೪೦ | ಕೃಷಿಕ | ಕಮಲಾಪುರ |
| ೮. | ಪದ್ಮಮ್ಮ | ೪೫ | ಕೂಲಿ | ,, |
| ೯. | ಜೇರ ಬಸವರಾಜ | ೩೧ | ಪೂಜಾರಿ | ,, |
| ೧೦. | ಚಂದ್ರಪ್ಪ | ೩೨ | ವ್ಯವಸಾಯಗಾರರು | ನೆಲ್ಲಪುರ |
| ೧೧. | ಗವಿಸಿದ್ದಪ್ಪ | ೫೮ | ಪೂಜಾರಿ | ಹುಲಿಗಿ |
| ೧೨. | ಗಾಯಿತ್ರಿ | ೩೧ | ಉಪನ್ಯಾಸಕರು | ಮುನಿರಬಾದ |
| ೧೩. | ಬಸಪ್ಪ | ೬೭ | " | ಹೊಸೂರು |
| ೧೪. | ಗಂಗಮ್ಮ | ೪೫ | ವೃತ್ತಿಕಲಾವಿದರು | ಮರಿಯಮ್ಮನಹಳ್ಳಿ |
| ೧೫. | ನಾಗರಾಜ | ೫೫ | ಶಿಕ್ಷಕರು | ಹೂ.ಹಡಗಲಿ |
| ೧೬. | ಶಬೀನ ಎಂ. | ೩೧ | ಉಪನ್ಯಾಸಕರು | ,, |
| ೧೭. | ಸಿದ್ದಲಿಂಗಪ್ಪ | ೬೧ | ಪೂಜಾರಿ | ಮೈಲಾರ |

| | | | | |
|---|---|---|---|---|
| ೧೮. | ಕೋದಂಡಪಾಣಿ | ೫೯ | ,, | ಹಿರೇಹಡಗಲಿ |
| ೧೯. | ವೀರಣ್ಣ ಗೌಡ | ೪೪ | ,, | ಉಚ್ಚಂಗಿದುರ್ಗ |
| ೨೦. | ಚಂದ್ರಮೌಳಿ | ೫೪ | ವ್ಯಾಪಾರಿ | ,, |
| ೨೧. | ಕೃಷ್ಣಭಟ್ | ೪೫ | ಶಿಕ್ಷಕರು | ಉಚ್ಚಂಗಿ |
| ೨೨. | ಜಗದೀಶ | ೬೫ | ವಯಸ್ಕರು | ,, |
| ೨೩. | ತಳವಾರ ಬಸವರಾಜ | ೫೪ | ವ್ಯಾಪಾರಿಗಳು | ಹಗರಿಬೊಮ್ಮನಹಳ್ಳಿ |
| ೨೪. | ತಳವಾರ ತಾಯಮ್ಮ | ೬೫ | ವಯಸ್ಕರು | ,, |
| ೨೫. | ಜೇಲನ್ | ೪೮ | ಅಟೋಡ್ರೈವರ್ | ಕೂಡ್ಲಿಗಿ |
| ೨೬. | ಎಂ.ರುದ್ರಪ್ಪ | ೬೭ | ವ್ಯವಸಾಯ | ಗುಡೇಕೋಟೆ |
| ೨೭. | ವೀರೇಶಪ್ಪ | ೪೯ | ಪೂಜಾರಿಗಳು | ಹುಲಿಕೆರೆ |
| ೨೮. | ನಂಜುಂಡಸ್ವಾಮಿ | ೬೫ | ವ್ಯವಸಾಯ | ಸಂಡೂರು |
| ೨೯. | ಗಜಾನನ | ೪೫ | ಪೂಜಾರಿ | ಕುಮಾರಸ್ವಾಮಿಬೆಟ್ಟ |
| ೩೦. | ಗುರುಲಿಂಗಪ್ಪ | ೪೧ | ಇಂಜಿನೀಯರ | ತಾರನಗರ |
| ೩೧. | ಡಾ. ತೋಟದಯ್ಯ | ೬೮ | ನಿವೃತ್ತ ಶಿಕ್ಷಕರು | ತೋರಣಗಲ್ಲು |
| ೩೨. | ತಿಮ್ಮರೆಡ್ಡಿ | ೫೨ | ಪೂಜಾರಿ | ಬಳ್ಳಾರಿ |
| ೩೩. | ಹನುಮಂತಪ್ಪ | ೭೬ | ವ್ಯಾಪಾರಿಗಳು | ,, |
| ೩೪. | ಸುಭಾನ್ ಬಾಷ | ೩೪ | ಖಾಸಗಿ ಉದ್ಯೋಗಿ | ತೆಕ್ಕಲಕೋಟೆ |
| ೩೫. | ಮಾರೆಮ್ಮ | ೭೭ | ಪೂಜಾರಿ | ,, |
| ೩೬. | ನೀಲಮ್ಮ | ೫೫ | ,, | ಉಡೇಗೋಳ |
| ೩೭. | ವಡ್ಡರ ತಿಮ್ಮಪ್ಪ | ೫೦ | ಕೂಲಿ | ಮಣ್ಣೂರು |
| ೩೮. | ರವಿಕುಮಾರ | ೪೮ | ವ್ಯಾಪಾರಿಗಳು | ಕಂಪ್ಲಿ |
| ೩೯. | ಕುಮಾರ | ೫೪ | ಉಪನ್ಯಾಸಕರು | ರಾಮಸಾಗರ |
| ೪೦. | ತಿಮ್ಮಣ್ಣ. ಜಿ | ೬೫ | ಪೂಜಾರಿಗಳು | ಮುದ್ದಾಪುರ |

| | | | | |
|---|---|---|---|---|
| ೪೧. | ಗೋವಿಂಪ್ಪ | ೮೭ | ಹಿರಿಯ ನಾಗರಿಕರು | ಬುಕ್ಕಸಾಗರ |
| ೪೨. | ಹನುಮಪ್ಪ | ೩೪ | ಕೂಲಿ | ,, |
| ೪೩. | ಬುಷ್ಯಪ್ಪ | ೫೪ | ಅಗಸರು | ಕಂಪ್ಲಿ |
| ೪೪. | ಶಂಕ್ರಪ್ಪ | ೫೭ | ವ್ಯವಸಾಯ | ದರೋಜಿ |
| ೪೫. | ವೆಂಕಟೇಶ | ೪೫ | ಪೂಜಾರಿ | ಕುಡುತಿನಿ |
| ೪೬. | ಓಬಯ್ಯ | ೫೬ | ,, | ಬೈಲವದ್ದಿಗೇರಿ |
| ೪೭. | ಮಲ್ಲಿಕಾರ್ಜುನ | ೪೮ | ಪೂಜಾರಿ | ಚೆಳ್ಳಗುರ್ಕಿ |
| ೪೮. | ಹಾಲಮ್ಮ | ೫೪ | ದೊಂಬರು | ಮೋಕ |
| ೪೯. | ಚೆನ್ನಮ್ಮ | ೪೯ | ಅಗಸರು | ಕಪ್ಪಗಲ್ಲು |
| ೫೦. | ಆದೆಪ್ಪ | ೩೮ | ಕೂಲಿ | ಶಂಕರಬಂಡೆ |
| ೫೧. | ಕುರಿಗಂಗಪ್ಪ | ೫೪ | ವ್ಯವಸಾಯ | ಆದೋನಿ |
| ೫೨. | ರವಿಪಂಡಿತ | ೪೧ | ಜ್ಯೋತಿಷಿ | ಬಳ್ಳಾರಿ |
| ೫೩. | ರಾಮಚಂದ್ರಪ್ಪ | ೫೫ | ಪುರೋಹಿತರು | ಬಳ್ಳಾರಿ |
| ೫೪. | ರೇಣುಕದೇವಿ | ೪೪ | ಪೂಜಾರಿ | ಹಗರಿ |
| ೫೫. | ವೀರಭದ್ರಯ್ಯ | ೬೫ | ವ್ಯವಸಾಯ | ಕೂಡ್ಲಿಗಿ |
| ೫೬. | ದೇವಣ್ಣ | ೪೩ | ವ್ಯಾಪಾರಿಗಳು | ದೇವಿನಗರ |
| ೫೭. | ಶಿವನಂದಪ್ಪ | ೭೬ | ಹಿರಿಯನಾಗರಿಕರು | ಹರಪನಹಳ್ಳಿ |
| ೫೮. | ನಾಗೇಂದ್ರಪ್ಪ | ೪೮ | ವ್ಯವಸಾಯ | ಕಮಲಾಪುರ |
| ೫೯. | ಜಂಭಯ್ಯ | ೪೬ | ವ್ಯವಸ್ಥಾಪಕರು | ಕಮಲಾಪುರ |
| ೬೦. | ರಾಘವೇಂದ್ರ | ೩೯ | ಪೂಜಾರಿಗಳು | ಅನೆಗೊಂದಿ |

